MADRAS UNIVERSITY KANARESE SERIES No. 4.

Oriental

Research Institute Publication

# PUSHPADANTA PURANAM

BY

GUNAVARMA

ಗುಣವರ್ಮ ಕೃತಮಪ್ಪ

# ಪುಷ್ಪದಂತ ಪುರಾಣಂ

EDITED BY

A. VENKATA RAU, B.A., LT., *Head of the Kanarese Department*

AND

PANDIT H. SESHA AYYANGAR, *Junior Lecturer in Kanarese*

Institute of Oriental Studies and Research

University of Madras



UNIVERSITY OF MADRAS

1933

Price Rs. 4.] [Foreign 6 Sh.

# ವಿಷಯಸೂಚಿಕೆ.

## ಪೀಠಿಕಾ ವಿವರಣಂ.



---

## ನಗರ ಸಂಪದ್ವರ್ಣನಂ

## ನಾಯಕಾಭ್ಯುದಯ ವರ್ಣನಂ

---

## ಕುಮಾರೋದಯ ವರ್ಣನಂ



---

## ಯುವರಾಜ ದಿಗ್ವಿಜಯ ವರ್ಣನಂ

## ಶಿಶಿರ ಸಮಯ ವರ್ಣನಂ



## ದೂತಾಗಮನ ವರ್ಣನಂ

## ಜಳಕೇಳೀ ವರ್ಣನಂ

## ಗರ್ಭಾವತರಣ ಕಲ್ಯಾಣಂ

## ದೇವಾಗಮನವರ್ಣನಂ

## ಜನ್ಮಾಭಿಷೇಕೋತ್ಸವ ಕಲ್ಯಾಣಂ



---

## ಕುಮಾರಪರಿಣಯನೋತ್ಸವ ವರ್ಣನಂ

---

## ಪರಿನಿಷ್ಕ್ರಮಣಕಲ್ಯಾಣಂ

## ಪರಿನಿರ್ವಾಣಕಲ್ಯಾಣಂ

# ಪುಷ್ಪದಂತ ಪುರಾಣದ

## ಕಥಾಸಂಗ್ರಹವು.



ಜೈನಮತದವನಾದ ಈ ಗ್ರಂಥಕರ್ತರನು ನಿರ್ವಿಘ್ನವಾಗಿ ಸ್ವಪರಿಪ್ರಿಸ್ಸಿತಗ್ರಂಥವು ಕೊನೆಗಾಣುವುದಕ್ಕಾಗಿ ಶಿಷ್ಟಾಚಾರಾನುಸಾರ ಮಂಗಳವನ್ನು ಗ್ರಂಥಾದಿಯಲ್ಲಿ ಶಿಷ್ಯಶಿಕ್ಷೆಗಾಗಿ ರಚಿಸಲಾಟಿಸಿ ಸ್ವಮತಪದ್ಧತಿಯಂತೆ ಅರ್ಹತ್ಸಿದ್ಧಾಚಾರ್ಯೋಪಾಧ್ಯಾಯ ಸಾಧುಗಳೆಂಬ ಪಂಚ ಪರಮೇಷ್ಠಿಗಳು (೧-೬) (೭) ರತ್ನತ್ರಯ (೮) ಜಿನೇಂದ್ರಧರ್ಮ, ಸರಸ್ವತಿ, (೯) ಜಿನಶಾಸನ ದಕ್ಷರಾದ ಯಕ್ಷಿ, (೧೦) ಯಕ್ಷರು (೧೧) ಪುಷ್ಪದಂತ (ತೀರ್ಥಕರ) ಮಕರಧ್ವಜ ಇವರ ಸ್ತುತಿರೂಪವಾದ ಮಂಗಳವನ್ನು ನಿರ್ವರ್ತಿಸಿ, ಗುರು ವಂದನೆಯ ಪ್ರಸ್ತಾವದಲ್ಲಿ, ಅನುಬದ್ಧ ಕೇವಲಿಗಳು (೧೩) ಶ್ರುತ ಕೇವಲಿಗಳು (೧೪) ದಶಪೂರ್ವಿಗಳು ಏಕಾದಶಧಾರಿಗಳು (೧೫) ಆಚಾರಾಂಗಧರರು (೧೬) ಈ ಪ್ರಾಚೀನಾಚಾರ್ಯರನ್ನು ವಂದಿಸಿ, ಕೊಂಡಕುಂದಮುನಿಯನ್ನು ಮೊದಲುಮಾಡಿ (೧೭) ಗೃಧ್ರಪಿಂಛಾಚಾರ್ಯ (೧೮) ಬಳಾಕ ಪಿಂಛ ಮಯೂರ ಪಿಂಛ (೧೯) ಅರ್ಹದ್ಬಲಿ (೨೦) ಭೂತಬಲಿ (೨೧) ಸಮಂತಭದ್ರ (೨೨) ಅಕಳಂಕ (೨೩) ಪೂಜ್ಯಪಾದ (೨೪) ವಿದ್ಯಾನಂದಸ್ವಾಮಿ (೨೫) ಕವಿಪರಮೇಷ್ಠಿ (೨೬) ವೀರಸೇನ, ಜಿನಸೇನ (೨೭) ಗುಣಭದ್ರಸ್ವಾಮಿ (೨೮) ಜಟಾನಂದಿ ಸಿಂಹಣಂದಿಗಳು (೨೯) ಏಳಾಚಾರ್ಯರು (೩೦) ದೇವಚಂದ್ರ (೩೧) ಮುನಿಚಂದ್ರದೇವರ (೩೨) ವರೆಗಣ ಸ್ವಾಚಾರ್ಯಪರಂಪರೆಯನ್ನು ವಂದಿಸಿ, ಭೂತಭವದ್ಭಾವಿ ಮುನಿಗಳನ್ನೂ (೩೩) ಕವೀಶ್ವರ (೩೪-೩೫)ರನ್ನೂ ಪ್ರಾರ್ಥಿಸಿ, ಗುಣವರ್ಮ ಮೊದಲಾದ ಕೆಲವು ಪ್ರಸಿದ್ಧಕವಿಗಳ ಮೆಯ್ಸಿರಿ ಮೊದಲಾದ ಕಾವ್ಯಗುಣಗಳನ್ನು ತತ್ತನ್ನಾಮ ಸಂಕೀರ್ತನ ಪೂರ್ವಕವಾಗಿ ಯಾಚಿಸಿ, (೩೬) ಮೇಲಾದ ವ್ಯಙ್ಗ್ಯವೃತ್ತಿ (ಧ್ವನಿ)ಯಿಂದ ಸರಸ್ವತಿಯ ಸ್ವಾಧೀನತೆಯನ್ನು ವರ್ಣಿಸಿ, (೩೭-೩೮) ಕವಿಯು ಧ್ವನಿಸ್ಫೋರಕವಾದ ಕಾವ್ಯವನ್ನೇ ವಿರಚಿಸಬೇಕೆಂದು ನಿರ್ಣಯಿಸಿ (೩೯-೪೦-೪೧) ಹಿಂದೆ ಜಿನಗಣಧರಾದಿಗಳು ಅರ್ಧಮಾಗಧೀ ಸಂಸ್ಕೃತಭಾಷೆಗಳಲ್ಲಿ ಹೇಳಿದ ಜಿನಪುರಾಣಗಳಲ್ಲಿ ಒಂದಾದ “ಪುಷ್ಪದಂತ ಪುರಾಣ”ವನ್ನು ಕನ್ನಡಭಾಷೆಯಲ್ಲಿ ಕಾವ್ಯರೂಪವಾಗಿ ಹೇಳುವೆನೆಂದು ಪ್ರತಿಜ್ಞೆಮಾಡಿ, ಮಹತ್ತಾದ ಅದನ್ನು ವಿರಚಿಸುವ ವಿಷಯದಲ್ಲಿ ತನ್ನ ಅಸಾಮರ್ಥ್ಯವನ್ನು ಹೇಳಿಕೊಂಡು, (೪೨) ಕತೆಯು ಚಿಕ್ಕದಾಗಿದ್ದರೂ ವರ್ಣನೀಯನಾದ ಉನ್ನತವಂಶದ ನಾಯಕನ ಮಹತ್ವದಿಂದ ಹೆಚ್ಚು ಪ್ರಖ್ಯಾತಿಗೆ ಸಂದಿರುವುದೆಂದು ನಿರೂಪಿಸಿ, (೪೩) ಜಿನನುತಿಯ ಮಹತ್ವವನ್ನು ಪ್ರತಿಪಾದಿಸಿ, (೪೪) ದುರ್ಜನರಾದ ಕುಕವಿಗಳನ್ನು ನಿಂದಿಸಿ, (೪೫-೫೭) ಸಜ್ಜನರನ್ನು ಚಮತ್ಕಾರೋಕ್ತಿಯಿಂದ ಅತಿಸಂಗ್ರಹವಾಗಿ ಶ್ಲಾಘಿಸಿ, (೫೮) ಗುಣವರ್ಮ ಬುಧನಾದ ತನಗೆ ಕವಿತ್ವಶಕ್ತಿಯು ಮುನಿಚಂದ್ರಪಂಡಿತ ದೇವರ ಅನುಗ್ರಹದಿಂದ ದೊರೆಕೊಂಡಿತೆಂದು ಸೂಚಿಸಿ, (೫೯) ತನ್ನ ಕವಿತ್ವದ ಮಹತ್ವವನ್ನು ವರ್ಣಿಸಿ, (೬೬) ತನ್ನ ಕವಿತ್ವದ ಮಾಧುರ್ಯವನ್ನನುಭವಿಸಬೇಕೆಂದು ವಜ್ರದೇವನರನಾಥನಾಸ್ಥಾನದಲ್ಲಿ ಕೋವಿದರು ಕೊಂಡುಕೊನೆಯಲು ಅದನ್ನು ಕೇಳಿದ ಶಾಂತಿವರ್ಮದಂಡನಾಥನು ತನ್ನನ್ನು ಆದರಿಸಿ ಜಿನಪುರಾಣವನ್ನು ರಚಿಸೆಂದು ಪ್ರಾರ್ಥಿಸಲು ಈ ಜಿನಕಥೆಯನ್ನು ಹೇಳಲಾರಂಭಿಸಿದೆನೆಂದು ಹೇಳಿ, (೬೭) ಕಾವ್ಯವನ್ನು ಕನ್ನೆಗೆ ಹೋಲಿಸಿ ಶಾಂತಿವರ್ಮನಿಗೆ ಸಮರ್ಪಿಸಿದ ವಿಷಯವನ್ನು ವಿವರಿಸಿ (೬೮-೭೨) ತನ್ನ ಆಶ್ರಯದಾತೃವಾದ ಶಾಂತಿವರ್ಮ ದಂಡನಾಥನನ್ನು ಅತಿ

ಶಯವಾಗಿ ಪ್ರಶಂಸಿಸಿ, (೩೨-೮೨ ಗದ್ಯ) ಆತನ ಯಶೋಲತೆಗಾಲಂಬನವಾಗಿ ಮನೋಹರವಾದೀ ಕಥಾವನಿತೆಗೆ ಉದ್ಭವಸ್ಥಾನವು ನಾಲ್ಕನುಯೋಗದ ನಾಲ್ಕು ಶ್ರುತಸ್ಕಂಧಂಗಳಲ್ಲಿಯ ಪೂರ್ವಾನುಯೋಗವೆಂದು ನಿರೂಪಿಸಿ, (೮೩) ಈಕಥಾಭಾಗವು ಪುರುಜಿನ (ಮೊದಲ ತೀರ್ಥಂಕರ) ವೀರ ಜಿನರ (೨೪ನೆಯ ಕೊನೆಯ ತೀರ್ಥಕರ) ಮುಖೋದ್ಗತವಾದುದೆಂದೂ, ಬಳಿಕ ಅದನ್ನೇ ಆದಿಯಲ್ಲಿ ವೃಷಭಸೇನಗಣಧರರು ಭರತ ನೃಪನಿಗೆ ರೂಪ್ಯಗಿರಿಯಲ್ಲೂ, ಕೊನೆಯಲ್ಲಿ ಗೌತಮ ಗಣಧರರು ಮಗಧ ರಾಜನಿಗೆ (ಶ್ರೇಣಿಕನಿಗೆ) ವಿಪುಳಗಿರಿಯಲ್ಲೂ, ಹೇಳಿದರೆಂದು ನಿರೂಪಿಸಿ, (೮೪) ಕಥಾಭಾಗವನ್ನು ಶ್ಲೇಷೆಯಿಂದ ಪ್ರಶಂಸಿಸಿ ಈ ಕಾವ್ಯದಲ್ಲಿ ಶಾಂತರಸವೇ ಮುಖ್ಯವೆಂದೂ ಅದರ ಸಂಸರ್ಗದಿಂದ ಶೃಂಗಾರಾದಿಯಾದ ಶಿಷ್ಟರಸಾಷ್ಟಕಗಳೂ ಶಾಂತರೂಪವಾಗಿಯೇ ಪರಿಣಮಿಸುವುದೆಂದೂ ನಿರೂಪಿಸಿ ಕಥೆಯನ್ನು ಆರಂಭಿಸುವನು—(೮೬)

ಅನಂತವಾದ ಆಕಾಶಪಂಜರದಲ್ಲಿ ಷಡ್ದ್ರವ್ಯಗರ್ಭಿತವೂ ಆದ್ಯಂತಶೂನ್ಯವೂ, ಅಧಸ್ತಿರ್ಯಗೂರ್ಧ್ವವೆಂಬ ಮೂರು ಪ್ರಭೇದಗಳುಳ್ಳುದೂ, ಪದಿನಾಲ್ಕುರಜ್ಜು ಪ್ರಮಾಣವುಳ್ಳುದೂ ಘನೋದಧಿ ಮೊದಲಾದ ವಾತತ್ರಯಗಳಿಂದ ಆವೃತವೂ ಆಗಿ ಶೋಭಿಸುವ ಲೋಕತ್ರಯದಲ್ಲಿ (೮೯) ಅಸಂಖ್ಯಾತ ದ್ವೀಪ ಸಮುದ್ರಗಳಿಂದ ತೀವಿದ ಮಧ್ಯಮಲೋಕದೊಳಗೆ (೯೦) ಜಂಬೂದ್ವೀಪ ಲವಣಸಮುದ್ರಗಳೂ, ಬಳಿಕ ಧಾತಕೀಷಂಡ ಕಾಳೋದಧಿ ಸಮುದ್ರಗಳೂ, ಬಳಿಕ ಪುಷ್ಕರವರದ್ವೀಪವೂ ಇರುವುದು (೯೧) ಆ ದ್ವೀಪದ ಬಾಹ್ಯಾರ್ಧವನ್ನಲಂಕರಿಸಿ ಸುತ್ತಿ ಮಾನುಷೋತ್ತರಶೈಲವೂ (೯೨) ಮಧ್ಯದಲ್ಲಿ ಮೂಡಣ ಮಂದರವೂ (ಇದನ್ನೇ ಕನಕಾಚಲವೆಂದೂ ವ್ಯವಹರಿಸುವರು) ಶೋಭಿಸುತ್ತಿರುವುವು (೯೩) ಈ ಗಿರಿಯು ತನ್ನವಿಶ್ವಜಗನ್ನುತದಿವ್ಯಪಾದತ್ವಾದಿಗುಣಗಳಿಂದ ಜಿನಪತಿನೊದಲಾದವರ ಮಹಾಮಹಿಮೆಯಂ ಪೆತ್ತು ಶೋಭಿಸುತ್ತಿರುವುದು. ಎಂಬಲ್ಲಿಗೆ—

ಪ್ರಥಮಾಶ್ವಾಸಂ

---

## II

## ದ್ವಿತೀಯಾಶ್ವಾಸಂ.

(ನಗರಸಂಪದ್ವರ್ಣನಂ)

ಭೂಮಧ್ಯಸ್ಥಿತವಾದ (೧) ಆ ಮೇರುವಿನ ಪೂರ್ವಪಶ್ಚಿಮ ಪ್ರದೇಶದಲ್ಲಿ ಮೂವತ್ತೆರಡು ನಾಡುಗಳಿಂದ ಕೂಡಿದ ಪೂರ್ವೋತ್ತರವಿದೇಹ ದೇಶಗಳು ಶೋಭಿಸುತ್ತಿರುವುವು (೨) ಅಲ್ಲಿ ಜಿನಮತವು ಎಂದೂ ಕಿಡದು. ಸುಭಿಕ್ಷವಿಲ್ಲದ ವರ್ಷವೇ ಇಲ್ಲ. ಜನರು ಐದು ಬಿಲ್ಲುದ್ದದವರೂ, ಪೂರ್ವಿತ ಪ್ರಮಿತಾಯುಷ್ಯರೂ ಆಗಿರುವರು (೩) ಮಹಾಲಯಾದಿ ದೋಷಗಳೊಂದೂ ಅಲ್ಲಿಲ್ಲವು. (೪-೫) ಆ ವೆರಡರಲ್ಲಿ ಪೂರ್ವವಿದೇಹವು ಷೋಡಶಕಳಾಪರಿಪೂರ್ಣಚಂದ್ರನಂತೆ ಷೋಡಶ ಮಹಾವಿಷಯಗಳಿಂದ (ನಾಡುಗಳಿಂದ) ಸುಖೈಕನಿಧಿಯಾಗಿರ್ಪುದು (೬) ಆ ಮಹಾವಿಷಯಗಳು ತದ್ಭೂಮಧ್ಯದಲ್ಲಿ ಹರಿಯುತ್ತೆ ಪೂರ್ವವಾರ್ಧಿಯೊಡನೆ ಸಂಗಮಿಸುವ ಸೀತಾನದಿಯ ಎರಡು ದಡಗಳಲ್ಲೂ ಎಂಟೆಂಟರಂತೆ ಶೋಭಿಸುತ್ತಿರುವುವು (೭-೮) ಅಲ್ಲಿಯ ಎಂಟನೆಯ ತಾಣದಲ್ಲಿ ವಕ್ಷಾರಮಹೀಧರ, ಪಂಕಾವತೀನದಿ, ಸೀತಾನದಿ, ನೀಳನಗ ಈಚತುಸ್ಸೀಮೆಯ ಮಧ್ಯದಲ್ಲಿ ಪುಷ್ಕಲಾವತೀನಗರವು. (೯) ಗ್ರಾಮನಗ

---

[1] ಆಶ್ವಾಸಾಂತ್ಯಪದ್ಯದಲ್ಲಿ ಶಾಂತಿಪರ್ವನನ್ನು ಮೇರುಗಿರಿಗೆ ಹೋಲಿಸಿ ಹೇಳಿರುವನು.

ರಾದಿ ಜನಪದ ಭೇದಗಳಿಂದೆ (೧೦) ಮನೋಹರವಾಗಿರುವುದು. ಆ ದೇಶದಲ್ಲಿ ವಿಶೇಷವಾದ ಪೈರು ಪಚ್ಚೆಗಳಿಂದ ರಮ್ಯವಾಗಿ ಫಲವತ್ತಾದ ನೆಲವೂ; ಅತಿಶಯಿತವಾದ ಪ್ರಕೃತಿ ಸೌಂದರ್ಯವೂ; ಭೋಗಿಗಳೂ, ಗುಣಶಾಲಿಗಳೂ ಆದ ಪ್ರಜೆಗಳೂ; ಫಲವತ್ತಾದ ಮಾವು ನೇರಿಲೆ ಮೊದಲಾದ ಫಲ ವೃಕ್ಷಗಳೂ; ಅತ್ಯಂತ ಸುಂದರಿಯರಾದ ಗಿಳಿಸೋವ ಪಾಮರಿಯರಿಂದ ತುಂಬಿದ ಕಳಮೇಕ್ಷು ವನಂ ಗಳೂ; ದಾರಿಗರಿಗೆ ಮೋಹಾವೇಶವನ್ನುಂಟುಮಾಡುವ ಅತಿಸುಂದರಿಯರಿಂದಧಿಷ್ಠಿತಂಗಳಾದ ಅಱ ವಟ್ಟಿಗೆಗಳೂ; ಪೂತಬಳ್ಳಿಗಳಿಂದಲೂ, ಗಿಡಮರಗಳಿಂದಲೂ ಶೋಭಿಸುವ ಉದ್ಯಾನ ವನಗಳೂ; ಎಲ್ಲೆ ಲ್ಲಿಯೂ ಕಣ್ಗೊಳಿಸುತ್ತಿರುವುವು. (೧೧-೩೧) ಇಂತು ಅನೇಕ ಗಿರಿನಗರಸರಿದರಣ್ಯ ಕೇದಾರನಂದನ ಜನಸ್ಥಾನ ಸಂಪತ್ತಿಗುತ್ಪತ್ತಿನಿಳಯವಾದ ತನ್ಮಹಿಗೆ ಸಕಳಸೌಂದರ್ಯಯೋನಿಯಾದ ಪುಂಡರೀಕಿ ಣೀಪುರವು ರಾಜಧಾನಿಯೆನಿಸಿರುವುದು (೩೨) ಆ ರಾಜಧಾನಿಯ ಪೊರವೊೞಲ್ ಶೈತ್ಯಸೌರಭ್ಯ ಮಾಂದ್ಯ ಗುಣಯುತವಾಗಿ ಬೀಸುವ ಹೃದ್ಯಮಾರುತನಿಂದೆ ಕೂಡಿ ಅಂದವಾದ ಪುರೋದ್ಯಾನಷಂಡ ದಿಂದೆ ಸಮುಜ್ಜ್ವಳಿಸುತ್ತಿರುವುದು. (೩೩-೪೦) ಆ ರಮ್ಯೋದ್ಯಾನಗಳಲ್ಲಿ ಯುವತಿಯರಾದ ಸ್ತ್ರೀ ಯರು ತಂತಮ್ಮ ನಲ್ಲರೊಡಗೂಡಿ ಪುಷ್ಪಾಪಚಯ ಮೊದಲಾದ ವನಜಳಕೇಳಿಯಿಂದೆ ಸಂತೋಷದಿಂ ದಿರುವರು. (೪೦-೪೫) ಪಾಂಥರು ತನ್ನೆಳಲ್ಲಿ ಫಲಾದಿಗಳನ್ನುಸವಿದು ಕೊಳಗಳಲ್ಲಿ ಪರಿಮಳಶೀತವಾರಿ ಯನ್ನು ಕುಡಿದು ಸುಖದಿಂದ ಮಲಗಿ ನಿದ್ರಿಸುತ್ತ ದಾರಿಯಾಸರನ್ನು ಕಳೆಯುತ್ತಿರುವರು. (೪೬) ಅದಕ್ಕನತಿದೂರದಲ್ಲಿಯೇ ಹಾರಿದ್ರಕಾದಿ ಕ್ಷೇತ್ರಗಳಲ್ಲಿ ಇಕ್ಷುಯಂತ್ರದ ಮೊರೆತವು ನಿರಂ ತರವಾಗಿ ಕೇಳಿ ಬರುತ್ತಿರುವುದು (೪೭-೪೯) ಆ ಬಱಿಯಲ್ಲಿಯೇ ಪುಷ್ಪವಾಟಿಗಳೂ, ಉಪ ಶಲ್ಯಕದಲ್ಲಿ ಘಟೀಯಂತ್ರಗಳೂ ತೀವಿರುವುವು. (೫೦-೫೧) ಎತ್ತನೋಡಿದರೂ ಕಮಲಕಲ್ಹಾ ರಾದಿಪುಷ್ಪಗಳಿಂದಲೂ, ಹಂಸಸಾರಸಾದಿಜಲಚರಗಳಿಂದಲೂ, ರಮ್ಯವಾದ ಸೋಪಾನಗಳಿಂದಲೂ ಕೂಡಿದ ಕೆಱೆ, ದೊಣೆ ಮೊದಲಾದ ಹಲವು ಬಗೆಯ ಜಲಾಶಯಗಳು ಜನರ ಕಣ್ಮನಂಗಳನ್ನು ಸೆಱೆಗೊಳ್ಳುತ್ತಿರುವುವು. (೫೨-೫೪) ಇಂತು ಸೊಗಯಿಸುವ ನಗರದ ಮೂಡಣ ಪಡುವಣ ವಿಭಾಗಗಳಲ್ಲಿ ವೈಹಳಿಗಳೂ, (೫೫) ಗಜಾಶ್ವಶಿಕ್ಷಣಸ್ಥಾನಗಳೂ (೫೬-೫೮) ಆಪ್ರದೇಶಕ್ಕಾಸನ್ನ ಮಾಗಿ ಶಸ್ತ್ರಶ್ರಮಸ್ಥಾನವೂ (೫೯-೬೧) ಕಂಗೊಳಿಸುತ್ತಿರುವುವು. ಇಂತನೇಕ ಜನಮನೋಹಾರಿ ಸೌಂದರ್ಯವೃತ್ತಿಗವಕಾಶವಾದ ವಿವಿಧಪ್ರದೇಶದಿಂದೊಳಗೆ ಬಳಸಿದ ಬಾಳ್ವೇಲಿಯಿಂದನತಿದೂರ ದಲ್ಲಿ ಕಾಂಚನಪ್ರಾಕಾರವು (೬೨-೬೩) ಅಂಬುಗಂಡಿ, ಅತ್ಯುನ್ನತವಾದ ಕೂಟದಲ್ಲಿ ಶೋಭಿಸುವ ಕಳಶಕಿಂಕಿಣಿಗಳು, ಧ್ವಜಸ್ತಂಭಗಳು ಇವುಗಳಿಂದ ಹಗೆಗಳ ಪ್ರವೇಶಕ್ಕೆ ದುರ್ಗಮವಾಗಿರುವುದು. (೬೯-೬೯) ಈ ಪ್ರಕಾರದಿಂದೆ ಹಲವು ವಿಶಾಲವಾದ ಕೇರಿಗಳಲ್ಲಿ ಸಂಪತ್ಸಮೃದ್ಧವಾದ ಅತ್ಯುನ್ನತ ಸೌಧಂಗಳೂ, ಜನಾವಾಸಗಳೂ ರಂಜಿಸುತ್ತಿರುವುವು. (೬೩-೭೫) ಇವುಗಳಲ್ಲದೆ ಹಲವು ಬಗೆಯ ಭೋಗಸಾಮಗ್ರಿಗಳಿಂದ ತೀವಿದ ಗಣಿಕಾವಾಟಗಳೂ ವಿಲಾಸಿಗಳ ವಿಲಾಸಕ್ಕೆ ಆಕರವಾಗಿರುವುವು. (೭೬-೭೭) ಈ ಗಣಿಕಾವಾಟಗಳ ಸುತ್ತಿನಲ್ಲಿಯೇ ಹಲವು ಬಗೆಯ ಹೂಗಳ ಅತಿಶಯವಾದ ಪರಿ ಮಳಗಳಿಂದ ಘುಮುಘುಮಿಸುವ, ಸುಂದರಿಯರಾದ ಮಾಲೆಗಾರ್ತಿಯರಿಂದ ಶೋಭಿಸುವ ಹೂವಿನ ಸಂತೆಯೂ (೭೮-೮೦) ಎಲೆಗಳ ಪೇಂಟೆಯೂ, (೮೧-೮೨) ಘಟ್ಟವಳರಂಗಡಿಗಳೂ (೮೩) ಅಸಾ ಧಾರಣಶೋಭೆಯಿಂದ ಮೆಱೆಯುತ್ತಿರುವುವು.

ಗಂಧಿಗವಸರವೂ (೮೪) ದೂಸಿಗವಸರವೂ (೮೫) ಕಂಚಗಾರರ ಪಟ್ಟಗಳೂ (೮೬) ಬಚ ರಾಪಣಗಣಂಗಳೂ ಅಳುಂಬವಾಗಿ ತೋರುವುವು. (೮೭-೮೮) ಇಂತು ಶೋಭಿಸುವ ವಿಪಣಿವೀಥಿ

ಯೆಂಬ ಬಿಸಜನಾಳಕ್ಕೆ ವಿಚಿತ್ರಪತ್ರದಂತೆ ರಾಜಭವನವು ಅಂದದ, ಸಂಪದದ, ತಾಯ್ಗರುವಾಗಿ ಶೋಭಿಸುತ್ತಿರುವುದು. (೮೯-೯೫) ಅದರಲ್ಲಿ ನೃಪತಿಲಕನಾದ ಪದ್ಮನು[1] ಉತ್ಸಾಹದಿಂದ ವಾಸಿಸುತ್ತಿರುವನು ಎಂಬಲ್ಲಿಗೆ.

ದ್ವಿತೀಯಾಶ್ವಾಸಂ

---

## ತೃತೀಯಾಶ್ವಾಸಂ

### (ನಾಯಕಾಭ್ಯುದಯವರ್ಣನಂ)

ಸಮರ್ಥನಾದ ಆ ಪದ್ಮನ ತೋಳ್ಗಳಲ್ಲಿ ಧರಾಲಲನೆಯು ಸುಖವಾಗಿ ನಿರಂತರವಾಸಕ್ಕೆಡೆ ಮಾಡಿಕೊಂಡಳು. ಆ ಪದ್ಮನು ಇಂದ್ರಿಯಗಳಿಗೆ ವಶನಾಗದೆ ಅರಿಗಳನ್ನಡಗಿಸಿ ಅತ್ಯುತ್ತಮವಾದ ನೀತಿಮಾರ್ಗದಿಂದ ರಾಜಕದ್ವಾದಶಕವನ್ನೂ ವಶಪಡಿಸಿಕೊಂಡು (೧-೧೨) ಅರ್ಥಿಗಳಿಗೆ ಅಪರಿಮಿತವಾಗಿ ಧನವನ್ನಿತ್ತು ಪ್ರತಾಪ ಸತ್ಕೀರ್ತಿಗಳಿಂದ ಶೋಭಿಸಿದನು. ಅವನ ರೂಪಕ್ಕೆ ಮೋಹಿಸದ ಸ್ತ್ರೀಯರೇ ಇಲ್ಲ, ಅವನ ಪ್ರತಾಪ ಸತ್ಕೀರ್ತಿಗಳು ಮೂರು ಲೋಕಗಳನ್ನೂ ವ್ಯಾಪಿಸಿದುವು (೧೩-೨೧) ಅಷ್ಟದಿಕ್ಪಾಲಕಾಂಶದಿಂದ ಕೂಡಿ ದೇವತಾಸ್ವರೂಪನೆನಿಸಿದ ಆ ಮಹೀಕಾಂತನಿಗೆ ಅತಿ ಸೊಬಗೆಯಾದ ವನಮಾಲಾ ದೇವಿಯು ವಲ್ಲಭಾಗ್ರಣಿಯಾಗಿದ್ದಳು. (೨೨)ಆಕೆಯ ಸಕಲಾಂಗ ಸೌಂದರ್ಯವೂ, ಸೌಕುಮಾರ್ಯವೂ, ಸೌಶೀಲ್ಯವೂ ತ್ರಿಲೋಕಾತಿಶಯಿತಗಳಾಗಿದ್ದುವು.[2] (೨೩-೫೯ ಗ) ನಿಖಿಲಸದ್ಗುಣಮಾಲೆಯೆನಿಪ ಆ ವನಮಾಲೆಯಲ್ಲಿ (೬೦) ಆ ಪದ್ಮನುಹೀರಮಣನು ಸಮುತ್ಕಟರಾಗದಿಂದೆ ಸಕಲ ಭೋಗಗಳನ್ನೂ ಅನುಭವಿಸುತ್ತಿದ್ದನು. (೬೧) ಹಲಬರವರೋಧಕಾಂತೆಯರಲ್ಲಿ ಆಕೆಯೇ ಪಟ್ಟಮಹಿಷಿಯಾಗಿದ್ದಳು. (೬೨-೬೩) ಇಂತು ಹಲವುದಿನಗಳು ಸುಖದಿಂದೆ ಕಳೆಯುತ್ತಿರಲು ಒಂದು ದಿವಸ ಆ ಪದ್ಮರಾಜನು ಆ ವನಮಾಲೆಯ ಅಂತಃಪುರಕ್ಕೆ ಬಂದು (೬೪) ತತ್ಕಾಲದಲ್ಲಿ ಚಿಂತೆಯಿಂದ ಕಂದಿದಾನನದ ಪಟ್ಟಮಹಿಷಿಯನ್ನು ನೋಡಿ ಚಿಂತಾಕ್ರಾಂತನಾಗಿ ಆಕೆಯ ಪರ್ಯಂಕದಲ್ಲೇ ಕುಳಿತಿರಲು ರಾಣಿಯು ಕಣ್ಸನ್ನೆಯಿಂದ ಸಖಿಯನ್ನು ನೋಡಿದಳು (೬೫-೬೭) ಆ ಸಮಯದಲ್ಲಿ ಅರಸು ರಾಣಿಯನ್ನು ಕುರಿತು ಆಕೆಯ ಚಿಂತೆಗೆ ಕಾರಣವನ್ನು ಬೆಸಗೊಂಡನು. (೬೮-೭೨) ರಾಣಿಯು ಉದ್ರಿಕ್ತವಾದ ದುಃಖಾವೇಶದಿಂದ ಕಣ್ಣೀರನ್ನು ಗುಡುಗುಡನೆ ಸುರಿಸುತ್ತಾ ಕೆಳದಿಯ ಮುಖವನ್ನು ಮತ್ತೊಮ್ಮೆ ನೋಡಿದಳು, (೭೩) ರಾಣಿಯ ಇಂಗಿತಾಕಾರಗಳನ್ನರಿತ ಚತುರಿಕೆಯೆಂಬ ಕಳದಿಯು "ಅರಸೇ! ದೇವಿಯಿಷ್ಟವನ್ನು ನೆರವೇರಿಸಲು ಸ್ವಾಮಿಯೇ ಶಕ್ತರು. ಇಂದು ಪರ್ವದಿವಸವಾದುದರಿಂದ ದೇವಿಯು ಉದಯಕಾಲದಲ್ಲಿ ಮಂಗಳಾಲಂಕೃತೆಯಾಗಿ ಅರ್ಚನಾದ್ರವ್ಯಗಳೊಡನೆ ಪ್ರಮದವನಕ್ಕೆ ಹೋಗಿ ಅಲ್ಲಿಯ ಜಿನಗೃಹವನ್ನು ಸಂದು ಜಿನನನ್ನು ಪೂಜಿಸಿ ಬರುತ್ತಾ ಆ ಉದ್ಯಾನದ ಎರಡು ಕಡೆಯಲ್ಲಿಯೂ ನೋಡುತ್ತಿರಲು (೭೫) ಒಂದು ಪಸಲೆನೆಲದಲ್ಲಿ ಪಳುಕಿನ ಪಾಸರೆಯಮೇಲೆ ಪಟ್ಟಿರ್ದ ಹುಲ್ಲೆವರಿಯನ್ನು ನೋಡಿ (೭೬) ತಾನು ಸಾಕಿದ ಹುಲ್ಲೆಯು ಮರಿಯನ್ನು ಪಡೆದು ಆನಂದ ಪಡು

---

[1] ಇಲ್ಲಿ ಪದ್ಮನನ್ನು ತನ್ನ ಆಶ್ರಯದಾತೃವಾದ ಶಾಂತಿವರ್ಮನೊಡನೆ ಅಭಿನ್ನತೆಯಿಂದೆ ವರ್ಣಿಸಿರುವನು.; [2] ಇಲ್ಲಿ ಆಕೆಯ ಅಂಗಾಲನ್ನು ಮೊದಲುಮಾಡಿ ತಲೆಯವರಿಗೂ ಪ್ರತಿಯೊಂದು ಅಂಗವನ್ನೂ ಉಪಾಂಗವನ್ನೂ ಮನೋಹರವಾಗಿ ವರ್ಣಿಸಿರುವನು.

ತ್ತಿರುವುದನ್ನು ಕಂಡು ತನಗೆ ಸಂತಾನವಿಲ್ಲದುದರಿಂದ ಚಿಂತಿಸುತ್ತಾ ಅರಮನೆಗೆ ಬಂದು ಕೆಳದಿಯರೆಲ್ಲರನ್ನೂ ಕಳುಹಿಸಿಕೊಟ್ಟು ಎನ್ನೊಡನೆ ಇಂತು ಹೇಳಿದಳು (೭೭-೭೮) 'ಸಖೀ ನಾನು ನಡಪಿದ ಹುಲ್ಲೆ ಮೊದಲಾದುವೂ, ಬಳ್ಳಿ ಮೊದಲಾದುವೂ ಸುಫಲಪ್ರಸವವನ್ನು ಪಡೆದಿರುವುವು. ನನಗೆ ಮಾತ್ರ ಸಂತಾನವನ್ನು ಪಡೆವ ಭಾಗ್ಯವು ಲಭಿಸಲಿಲ್ಲ. ಮಕ್ಕಳಿಲ್ಲದ ಹೆಂಗುಸಿನ ಬಾಳೊಂದು ಬಾಳೇ?' (೭೮-೮೨) ಎಂದು ತನ್ನ ಮನಸ್ಸಿನ ಆಕಾಂಕ್ಷೆಯನ್ನು ತಿಳಿಸಿದಳು", ಎಂದು ಹೇಳಲು, ಅರಸು "ಪ್ರಿಯೆ ಇದಕ್ಕಾಗಿ ನೀನು ಇಷ್ಟು ಚಿಂತಿಸಬೇಕೇ? ಸ್ವಲ್ಪದಿನಗಳಲ್ಲೇ ಅತ್ಯುತ್ತಮನಾದ ಕುವರನು ನಿನ್ನ ಗರ್ಭದಲ್ಲಿ ಜನಿಯಿಸುವನು" ಎಂದು ತತ್ಕಾಲೋಚಿತ ಪ್ರಿಯ ವಚನಗಳಿಂದ ಸಂತೈಸುತ್ತಿರಲು ಕೆಳದಿಯು ಮತ್ತೆ ಮುಂದುವರಿವಳು[1] ರಾಣಿಯು-ಸುತನನ್ನು ಪಡೆದು ಆನಂದಪಡುವ (ಪುತ್ರದೌಹೃದ) ಪ್ರಕಾರವನ್ನು ಚಿಂತಿಸುತ್ತಾ ಹಂಬಲಿಸುತ್ತಿರುವಳು. ಇದೇ ನಮ್ಮ ರಾಣಿಯ ಚಿಂತೆಗೆ ಕಾರಣವು ಎಂದು ಚತುರಿಕೆಯು ಆದ್ಯಂತಂಬರವಾಗಿ ಬಿನ್ನವಿಸಲು (೮೮-೧೦೦) ಅರಸು-"ರಾಣಿಯೇ ಇದು ದೈವಾಯತ್ತವು. ಚಿಂತಿಸಿದರೆ ಸಂತತಿಯು ಲಭಿಸುವುದೇ? ಸುತರಿಲ್ಲದವರ ಬಾಳೇನೋ ವ್ಯರ್ಥವಾದುದೇ; ಈ ವಿಷಯದಲ್ಲಿ ನಮ್ಮ ಯತ್ನ ಮೇನಿರುವುದು. ಆದರೂ ಇಂದು ನಿನ್ನಿಷ್ಟಸಿದ್ಧಿಯನ್ನು ಸೂಚಿಸುವ ಸಂಗತಿಯೊಂದು ನಡೆಯಿತು. ಅದನ್ನು ಸಾವಧಾನದಿಂದ ಕೇಳು. (೧೦೧-೧೦೨) ಇಂದು ಅಷ್ಟಮಿಯೆಂದು ನಾನು ಪುರದ ಚೈತ್ಯಗೃಹಕ್ಕೆ ಹೋಗಿ ದೇವನನ್ನು ವಂದಿಸಿ 'ದೇವಾ ನನ್ನಿಷ್ಟವನ್ನು ನೆರವೇರಿಸೆಂದು' ಬೇಡಿಕೊಳ್ಳುತ್ತಿರುವಾಗ ಆ ದೇವನ ಪಾದಮೂಲದಲ್ಲಿದ್ದ ಮಾದಳದ ಹಣ್ಣು ಜಾರಿ ನನ್ನ ಹತ್ತಿರಕ್ಕೆ ಬಂದಿತು. ಅದನ್ನು ಕಂಡು ಹತ್ತಿರಿದ್ದ ಪುರೋಹಿತನು, 'ಅರಸೇ ಇದು ನಿನಗೆ ಪುತ್ರಪ್ರಾಪ್ತಿಗೆ ಸೂಚಕವು. ಇದನ್ನು ಕೊಂಡು ಹೋಗು,' ಎಂದು ಹೇಳಿ ನನ್ನ ಕೆಯ್ಗಿತ್ತನೆಂದು ಹತ್ತಿರದ ಅಡಪವಳ್ತಿಯ ಕೆಯ್ಯಲ್ಲಿ ಕೊಟ್ಟಿದ್ದ ಆ ಫಲವನ್ನು ಅರಸಿಯ ಕೆಯ್ಯಲ್ಲಿ ತೆಗೆದುಕೊಟ್ಟನು. ಅರಸಿಯು ಅದನ್ನು ಪರಮ ಭಕ್ತಿ ಸಂತೋಷಗಳಿಂದ ಸ್ವೀಕರಿಸಿದಳು. (೧೦೨-೧೦೬) ಬಳಿಕ ಅರಸು, "ಅರಸಿಯೇ ಇಷ್ಟರಿಂದಲೇ ನೀನು ತೃಪ್ತಿಪಡೆಯಬೇಡ; ಧರ್ಮವನ್ನು ಮಾಡದೆ ಯಾವ ಸುಖವೂ ದೊರೆಕಲಾರದು. ಇಂದಿನಿಂದ ವಿಶೇಷವಾಗಿ ದಾನಶೀಲೆಯಾಗು", ಎಂದು ನಿಯಮಿಸಲು, ಆಕೆಯು ಚತುರ್ವಿಧ ದಾನ ಧರ್ಮತತ್ಪರೆಯಾಗಿ ಅಷ್ಟಾಹ್ನಿಕ ಮೊದಲಾದ ಜಿನಮಹಿಮೆಗಳನ್ನು ಆಚರಿಸುತ್ತಾ ಧರ್ಭಶಯ್ಯಾಸುಪ್ತೆಯಾಗಿ ಕಾಲವನ್ನು ಸಲಿಸುತ್ತಿದ್ದಳು. (೧೦೬-೧೧೪) ಒಂದು ದಿವಸ ಆಕೆಯು ಋತುಮತಿಯಾದ ಕಾಲದಲ್ಲಿ ಚತುರ್ಥದಿನ ಸ್ನಾನಾನಂತರದಲ್ಲಿ ಧವಳಮಂಗಳಾಲಂಕೃತೆಯಾಗಿ ತನ್ನ ಪ್ರಿಯನ ಸೂಳ್ಗೆವಂದು ಬೆಳಗಿನಝಾವದಲ್ಲಿ ಕಂಡ ಕನಸಿನಲ್ಲಿ ಪರಿಪೂರ್ಣಚಂದ್ರ ಮೊದಲಾದ ಕೆಲವು ಉತ್ತಮ ವಸ್ತುಗಳನ್ನು ನೋಡಿ ಹಾಸುಗೆಯಿಂದೆದ್ದು ಸ್ನಾನ ಜಿನಪೂಜಾದಿ ನಿತ್ಯಕೃತ್ಯಗಳನ್ನು ನಿರ್ವತಿಸಿ ಬಂದು ಅರಸನ ಸಿಂಹಾಸನಾರ್ಧಾಲಂಕೃತೆಯಾಗಿ ತಾನು ಕಂಡ ಕನಸಿನ ವಿವರವನ್ನು ಅರಸನಿಗೆ ತಿಳಿಸಿದಳು. (೧೧೪-೧೨೧) ಹತ್ತಿರಿದ್ದ

---

[1] ಈ ಸ್ಥಳದಲ್ಲಿ ಮೂಲಗ್ರಂಥದೊಳಗೆ ೮೩ ನೆಯ ಪದ್ಯವಾದ ಬಳಿಕ "ಅರಸು ರಾಣಿಯೊಡನೆ ನೀನು ಬಹುಕಾಲ ಮಕ್ಕಳಿಲ್ಲದಿದ್ದರೂ ಈಗ ಅತ್ಯುತ್ತಮನಾದ ಮಗನನ್ನು ಪಡೆವೆ" ಎಂದು ಹೇಳಿದನೆಂದು ಹೇಳಿ ೮೪ ನೆಯ ಗದ್ಯವಾದಬಳಿಕ, ಅರಸು ಎಂದ ತತ್ಕಾಲೋಚಿತ ಪ್ರಿಯವಚನಗಳಿಂದ ಸ್ವಲ್ಪ ಕಡಮೆಯಾದ ಚಿಂತೆಯುಳ್ಳವಳಾಗಿ ಬಯಕೆಗಳನ್ನು ಬಯಸುತ್ತಿದ್ದಳೆಂದು ಆ ದೌಹೃದ ಪ್ರಕಾರವನ್ನೂ ವಿವರಿಸಿ ಇಂತಿದು ಆದ್ಯಂತಂಬರಂ ಚತುರಿಕೆ ಬಿನ್ನವಿಸಲರಸನು ಕೇಳ್ದು ಮತ್ತೆ ಹೇಳಿದನೆಂದು ಮೂಲದಲ್ಲಿ ಹೇಳಿರುವುದು ಸಮಂಜಸವಾಗಿಲ್ಲ.

ಪುರೋಹಿತನು ಆ ಕನಸಿನಲ್ಲಿ ಕಂಡ ವಸ್ತುಗಳಿಂದ ಸೂಚಿತವಾಗುವ ಉತ್ತಮ ಗುಣಗಳುಳ್ಳ ಮಗನು ನಿಮಗೆ ಜನಿಸುವನೆಂದು ಹೇಳಲು, ಆತನನ್ನು ಸನ್ಮಾನಿಸಿ ಕಳುಹಿ ಸಂತೋಷದಿಂದ ಕೆಲವು ಕಾಲವನ್ನು ಕಳೆಯುತ್ತಿದ್ದರು. ಒಂದು ದಿವಸ ನಂದೀಶ್ವರದ ಜಿನೋತ್ಸವವು ಒದಗಿಬಂದಿತು. ಅಂದು ಅರಸು ಅಷ್ಟಾಹ್ನಿಕದ ಮಹಿಮೆಯನ್ನು ನಿರ್ವರ್ತಿಸಿ ಬಹಿರುದ್ಯಾನದಿಂದ ನಗರಾಭಿಮುಖವಾಗಿ ಬರುತ್ತಿರುವಾಗ ದೂತನೊಬ್ಬನು ಬಂದು ಸಂಭ್ರಮದಿಂದ (೨೧-೧೨೪) "ಅರಸೇ ಪುಳಿಂದರು ನಿನ್ನ ವೈರಿನೃಪರ ದೇಶವನ್ನು ಸೂರೆ ಮಾಡಿಕೊಂಡು ಬಂದು ಚಂಪಾನಗರಕ್ಕೆ ನುಗ್ಗಿ ತದಧಿಪನನ್ನೂ ಸೆರೆಗೆಯ್ದು ಈಗ ನಮ್ಮಾ ದೇಶಕ್ಕೆ ದಾಳಿಯಿಡುತ್ತಿರುವರು ಎಂದು ಚರರು ತಿಳಿಸಲು ಸಿಂಹವರ್ಮರಾಜನ ಸೇನಾಪತಿಯು ಚತುರ್ಬಲವೊಡನೆ ಚಂಪಾಪುರಕ್ಕೆ ಮುತ್ತಲು ಆ ಪುರವನ್ನು ಮೊದಲೇ ಮುತ್ತಿದ್ದ ಪುಳಿಂದಸೇನೆಯು ಹಿಂದಿರುಗಿ ಯುದ್ಧಕ್ಕೆ ನಿಂತು ಗಾಳಿಯನ್ನಿದಿರಿಸಿದ ಮುಗಿಲ ಪಡೆಯಂತೆ ನಿಶ್ಶೇಷವಾಗಿ ಸೋತು ಓಡಲು ಚಂಪಾಪುರವನ್ನು ಪ್ರವೇಶಿಸಿ ತತ್ಪುರಾಧಿಪನ ಸೆರೆಯನ್ನು ಬಿಡಿಸಿ ಆ ಪುಳಿಂದರು ತಂದೊಟ್ಟಿದ್ದ ಸಾರವಸ್ತುಗಳೆಲ್ಲವನ್ನೂ ಭಂಡಿ, ಒಟ್ಟೆ, ಕೊಟ್ಟಿಗೆ, ಪೊರಿಯಾಳುಗಳಿಂದಲ್ಲದೆ ಚತುರ್ಬಲದವರಿಂದಲೂ ಹೊರಿಸಿಕೊಂಡು ನಿನ್ನ ಪಾದಪದ್ಮವನ್ನು ಕಾಣಲು ಬರುತ್ತಿರುವನು" (೧೨೬-೧೩೦) ಎಂದು ಬಿನ್ನವಿಸಲು ಅರಸು ಆತನನ್ನು ಸನ್ಮಾನಿಸಿ ಕಳಿಪಿ ತದುದ್ಯಾನಬಾಹಿರವಾಹಳಿಗೆ ಬರುವಷ್ಟರಲ್ಲಿ ಮುಂದೆ ಬಂದು ಸಾಷ್ಟಾಂಗ ನಮಸ್ಕಾರ ಮಾಡಿ ಅಪರಿಮಿತವಾದ ಅಮೂಲ್ಯವಸ್ತುಗಳನ್ನು ಕಾಣ್ಕೆಗೊಟ್ಟ ಸಿಂಹವರ್ಮನ ತಲೆಯ ಮೇಲೆ ಪಾದಗಳನ್ನಿಟ್ಟು ಮನ್ನಿಸಿ ಇಷ್ಟಕ್ಕೆ ಕಾರಣಭೂತನಾದ ತನ್ನ ಈ ಸೇನಾಪತಿಯ ಸಾಹಸವನ್ನು ವೈಶ್ರವಣಾಮಾತ್ಯನೊಡನೆ ಶ್ಲಾಘಿಸಿ ಮಂಗಳವಾದ್ಯದೊಡನೆ ನಗರವನ್ನು ಪೊಕ್ಕು ಜನರ ಸ್ತೋತ್ರಕ್ಕೆ ಪಾತ್ರನಾಗಿ ಮುಂದುವರಿದನು[1] ಎಂಬಲ್ಲಿಗೆ.

ತೃತೀಯಾಶ್ವಾಸಂ

---

## ಚತುರ್ಥಾಶ್ವಾಸಂ.

### (ಕುಮಾರೋದಯ ವರ್ಣನಂ)

ಇಂತು ಪದ್ಮನು ಮಹಾವೈಭವದಿಂದ ಬಂದು ಅರಮನೆಯನ್ನು ಹೊಕ್ಕು ಚಂಪಾಪುರದ ಸೂರೆಯಿಂದ ತಂದ ವಸ್ತುಗಳೆಲ್ಲವನ್ನೂ ತನ್ನ ಬೊಕ್ಕಸಕ್ಕೆ ತುಂಬಿಸಿ, ಸಿಂಹವರ್ಮನನ್ನು ಮಾನಮರ್ಯಾದೆಗಳಿಂದ ಸಂತೋಷಪಡಿಸಿ ಬೀಡಿಂಗೆ ಕಳುಹಿಸಿ (೧) ಸುಖದಿಂದಿರಲು ರಾಣಿಯು ಗರ್ಭವತಿಯಾದಳು. (೨) ವಳಿಗಳನಾಶ, ಕರ್ಗಿದಬಾಸೆ, ಬೆಳರ್ತಮುಖವು ಇವೇ ಮೊದಲಾದ ಗರ್ಭದ ಚಿಹ್ನೆಗಳು ವ್ಯಕ್ತವಾಗಲು (೩-೮) ಸುರಕುಜದ ವನ ಮೊದಲಾದುವನ್ನು ಪರಿಜನಕ್ಕೆ ಕುಡುವುದು, ತ್ರಿಷಷ್ಟಿಶಲಾಕಾಪುರುಷಪ್ರತತಿಯ ಕಥೆಯನ್ನು ಕೇಳುವುದು ಮೊದಲಾದ ಅತಿ ಪುಣ್ಯತಮವಾದ ದೌಹೃದದ ಬಯಕೆಗಳು ಆಕೆಗೆ ಉಂಟಾದುವು (೮-೧೦) ಗರ್ಭವತಿಗೆ ಸಹಜವಾದ ಮೃತ್ಸೇವನೆಯು ಆಕೆಯನ್ನು ಬಿಟ್ಟುಹೋಗಲಿಲ್ಲ (೧೧) ಒಂದು ದಿನ ಅರಸು ಈ ಸಂತಸದ ಸುದ್ದಿಯನ್ನು ಕೇಳಿ ಮಂತ್ರಿ

---

[1] ಇಲ್ಲಿಯೂ ಕವಿಯು ಪದ್ಮನನ್ನು ಸ್ತುತಿಸುವ ವಿಶೇಷಣಗಳಿಂದ (ಪ್ರಭುವಂಶ ಮೇರು ಮೊದಲಾದುವು) ತನ್ನ ಕಾವ್ಯಕ್ಕೆ ಆಶ್ರಯದಾತೃವಾದ ಶಾಂತಿವರ್ಮನನ್ನು ಸ್ತುತಿಸಿರುವನು.

ಯೊಡನೆ ರಾಣೀವಾಸಕ್ಕೆ ಬಂದು ಯಥಾವಿಧಿಯಾಗಿ ಪುಂಸವನಾದಿಕರ್ಮಂಗಳಂ ನಿರ್ವರ್ತಿಸಿ (೧೩) ಆಕೆಯ ಗರ್ಭರಕ್ಷಣೆಗೆ ಕುಶಲರಾದ ಪರಿಜನರನ್ನು ನಿಯಮಿಸಿ ತನ್ನರಮನೆಗೆ ಹೋದನು. (೧೪) ಇತ್ತ ಗರ್ಭವು ದಿನೇದಿನೇ ಬಳೆಯುತ್ತಿರಲು ಗುರುಗರ್ಭಭರಾಲಸೆಯಾದ ಆಕೆಯು ಭಾರವಾದ ಕನಕರತ್ನಗಳ ಆಭರಣಗಳನ್ನು ಕಳೆದು ಹಗುರವಾದ ಮಂಗಳಸೂಚಕವಾದ ಮುಕ್ತಾಭರಣಗಳಿಂದ ಶೋಭಿಸುತ್ತಾ ವಿನೋದದಿಂದ ಕೆಳದಿಯರೊಡನೆ ಕಾಲವನ್ನು ಕಳೆಯುತ್ತಿರಲು (೧೫-೨೧) ನವಮಾಸವು ನೆಱಿದು ಪ್ರಸವ ಸಮಯವು ಸನ್ನಿಹಿತವಾಗಲು ಭವ್ಯಲೋಕೈಕಮಿತ್ರನಾದ ಸುತನನ್ನು ಪಡೆದಳು. (೨೨) ಆಗ ತಣ್ಣನೆ ಗಾಳಿ ಬೀಸುವುದು ಮೊದಲಾದ ಅಮಾನುಷ ಕಾರ್ಯಗಳು ಜರುಗಿದುವು. ಅರಮನೆಯಲ್ಲಿ ದಾನಧರ್ಮಗಳೂ, ಗೊಂದಣಮೆಕ್ಕಣಮೊದಲಾದ ವಿನೋದಕ್ರೀಡೆಗಳೂ ವಿಶೇಷವಾಗಿ ನಡೆದುವು. (೨೩-೨೫) ಈ ವೃತ್ತಾಂತವನ್ನು ಕೇಳಿದ (೨೬) ಅರಸನು ವಿಶೇಷವಾಗಿ ಸಂತಸಗೊಂಡನು. (೨೭-೨೯) ರಾಜಾಲಯದಲ್ಲಿ ಹಲವು ಬಗೆಯ ಅಲಂಕಾರಗಳು ಶೋಭಿಸಿದುವು. (೨೫-೩೭) ಅರಸು ತನ್ನಮಂತ್ರಿ ವೈಶ್ರವಣನೊಡನೆ ರಾಣೀವಾಸಕ್ಕೆ ಬಂದು ಪುತ್ರಮುಖಾವಲೋಕನಮಾಡಿ ಆಮಗುವಿಗೆ ಜಾತಕರ್ಮಾದಿ ತತ್ಕಾಲೋಚಿತ ಕರ್ಮಗಳನ್ನು ಅತಿ ಸಂಭ್ರಮದಿಂದ ನೆರವೇರಿಸಿ (೩೭-೪೦) ಹತ್ತನೆಯ ದಿನ ಜೋಯಿಸರು ನಿರ್ಧರಿಸಿದ ಶುಭ ಮುಹೂರ್ತದಲ್ಲಿ, ಮಹಾಪದ್ಮನೆಂದು ನಾಮಕರಣಂಮಾಡಿ ಯಾಚಕರಿಗೆ ಅಪರಿಮಿತವಾಗಿ ದಾನಧರ್ಮಾದಿಗಳನ್ನು ನಡೆಯಿಸಿ ಸುಖದಿಂದಿರಲು (೪೦-೪೩) ಆ ಬಾಲಕನು ಶುಕ್ಲಪಕ್ಷದ ಚಂದ್ರನಂತೆ ದಿನದಿನಕ್ಕೆ ಬೆಳೆಯುತ್ತಾ ಬಾಲದುಡುಗೆಗಳಿಂದ ಮನೋಹರನಾಗಿ ತನ್ನ ಬಾಲಲೀಲೆಗಳಿಂದ ತಂದೆ ತಾಯ್ವಿರಿರ್ವರನ್ನೂ, ಪರಿಜನವನ್ನೂ ಆನಂದಸಾಗರದಲ್ಲಿ ತೇಲಿಸಿದನು. (೪೩-೫೧) ಚಕ್ರವರ್ತಿಯು ಇಂತು ಬಳೆವ ಬಾಲಕನಿಗೆ ಅನ್ನಪ್ರಾಶನ ಮೊದಲಾಗಿ ಚೂಡಾಕರ್ಮಪರಿಯಂತವಾದ ಕರ್ಮಗಳನ್ನು ಆಯಾ ಕಾಲಗಳಲ್ಲಿ ರಾಜವೈಭವದಿಂದ ನಿರ್ವರ್ತಿಸಿದನು. ಆ ಬಾಲಕನು ಕ್ರಮ ಕ್ರಮವಾಗಿ ಶೈಶವವನ್ನು ಕಳೆದು ಸಹಪಾಂಸುಕ್ರೀಡಿತರಾದ ಬಾಲಕರೊಡನೆ ಬಗೆಬಗೆಯ ಅತಿಶಯಿತಬಾಲಕೇಳಿಗಳಿಂದ ತಂದೆತಾಯ್ಗಳಿಗೆ ಮುದವನ್ನೊದವಿಸುತ್ತೆ ಬಾಲ್ಯವನ್ನು ಕಳೆದು ತಾರುಣ್ಯವನ್ನು ಪಡೆದನು. [1](೫೧-೫೩) ಅರಸನು ಒಂದು ಶುಭ ಮುಹೂರ್ತದಲ್ಲಿ ವಿದ್ಯಾಲಯವನ್ನು ನಿರ್ಮಿಸಿ ಪ್ರೌಢರಾದ ವಿದ್ಯಾಗುರುಗಳ ವಶದಲ್ಲಿ ವೈಶ್ರವಣಪುತ್ರನಾದ ಚಿತ್ರಭಾನುವಿನೊಡನೆ ಈಮಹಾಪದ್ಮನನ್ನು ವಿದ್ಯಾಭ್ಯಾಸಕ್ಕಾಗಿ ಒಪ್ಪಿಸಿಕೊಟ್ಟನು. ಮಹಾಪದ್ಮನಾದರೋ ಅತಿಶೀಘ್ರಕಾಲದಲ್ಲಿಯೇ ಅನಾಯಾಸದಿಂದ ಲಿಪಿಶಬ್ದಶಾಸ್ತ್ರಮೊದಲಾದ ದ್ವಿಜಾತಿವಿದ್ಯೆಗಳೆಲ್ಲೂ, ಶಸ್ತ್ರಪ್ರಯೋಗ ಗಜಾರೋಹಣಾದಿ ಕ್ಷತ್ರಿಯವಿದ್ಯೆಗಳಲ್ಲೂ ಅತಿಪ್ರೌಢಿಮೆಪಡೆದನು. (೫೩-೬೧) ವೈಶ್ರವಣ ಪುತ್ರನಾದ ಚಿತ್ರಭಾನು ಕುಮಾರನೂ ಈತನಿಗೆ ನೇರ್ಗಿಱಿಯನಾಗಿ ಸಕಲವಿದ್ಯೆಗಳನ್ನೂ ಅಭ್ಯಸಿಸಿದನು. (೬೨-೬೩) ಜವ್ವನ ದೇಟಿಗ್ಗೆಪಡೆದು ಅತಿಶಯದಿಂದ ಶೋಭಿಸುತ್ತಿರುವ ಮಹಾಪದ್ಮಕುಮಾರನು ಇಂತು ಸಕಲವಿದ್ಯಾಪರಿಣತನಾಗಿ ವಿದ್ಯಾಮಂಟಪವನ್ನು ಬಿಟ್ಟು ತಂದೆಯ ಆಸ್ಥಾನವನ್ನು ಸೇರಿ ತಂದೆಯಿಂದ ಆಶೀರ್ವಾದವನ್ನು ಪಡೆದು ತಂದೆಗೂ, ಆ ಸಭೆಗೂ ವಿಶೇಷವಾದ ಸಂತೋಷವನ್ನುಂಟುಮಾಡಿ (೬೩-೭೩) ತಾಯಿಯ ಅಂತಃಪುರವನ್ನು ಸೇರಿ ಆಕೆಗೆ ಪೊಡೆಮಟ್ಟು ಅತಿಶಯವಾದ ಸಂತೋಷದಿಂದ ಆಕೆಯು ನೇಸೆಯೊಡಗೂಡಿದ ಪರಕೆಯನ್ನು ಕೈಯ್ಕೊಂಡು ತನಗಾಗಿ ನಿರ್ಮಿಸಿದ್ದ ಅರಮನೆಯಲ್ಲಿ ನಿಯಮಿತವಾದ ಪರಿವಾರದೊ

[1] ಇಲ್ಲಿಂದಮುಂದ ಯುವರಾಜ ದಿಗ್ವಿಜಯದ ವರೆಗಣ ಕಥಾಭಾಗದಲ್ಲಿ "ಕಾದಂಬರಿ"ಯ ಛಾಯೆಯಿದೆ.

ಡನೆ ಕಾವ್ಯ ನಾಟಕಾದಿ ವಿನೋದಗೋಷ್ಠಿಗಳಿಂದ ಸುಖವಾಗಿ ಹೊತ್ತುಗಳೆಯುತ್ತಿದ್ದನು (೭೩-೭೭) ಚಕ್ರವರ್ತಿಯು ಇಂತು ಕವಚಹರನಾದ ತನ್ನ ಕುವರನಿಗೆ ಒಂದು ದಿನ ಶುಭ ಮುಹೂರ್ತದಲ್ಲಿ ಯುವರಾಜಪಟ್ಟಬಂಧಮಹೋತ್ಸವವನ್ನು ಅತಿವೈಭವದಿಂದ ನೆರವೇರಿಸಿದನು. (೭೭-೮೫) ಇಂತು ಆ ರಾಯಗುವರನು ಯುವರಾಜನೆನಿಸಿ ತಂದೆಗೆ ರಾಜ್ಯಭಾರದ ಭಾರವನ್ನು ತಗ್ಗಿಸಿ ದಿಗ್ವಿಜಯಕ್ಕೆ ಹೊರಡಲುದ್ಯುಕ್ತನಾದನು. (೮೫-೮೬) ಆಗ ಶರದೃತುವು ಆರಂಭವಾಯಿತು. ಮಯೂರವೂ, ಚಾತಕವೂ ಕೊರಗಿದವು; ಅಂಚೆಯೂ, ಚಾದಗೆಯೂ ಮುದವೇಱಿದುವು; ಕೇದಗೆ, ನೀಪ, ಕುಟಜ ಕದಂಬದ ಪೂಗಳು ಬೀತುವು. ಪಱಿಲೆವಾೞಿ, ಪೊನ್ನೆ, ಕುಮುದ, ನೆಯ್ದಿಲ ಪೂಗಳು ಏೞ್ಗವಡೆದುವು. (೮೬-೮೮) ಮೇಘವಲ್ಲಭನು ತೆಳರಲು ನದೀಲಲನೆಯರು ಕಂಠಗತಜೀವನವೃತ್ತಿಯನಾಂತು ಭೈಶೋತ್ಕಲಿಕೆಯರಾದರು. ಮೇಘಗಳೆಲ್ಲವೂ ನಿಸ್ಸಾರವಾಗಿ ಬಿಳುಪೇಱಿದುವು. (೮೯) ಕೊಳಗಳೆಲ್ಲವೂ ತಿಳಿದುವು. (೯೦) ಎತ್ತೆತ್ತಲೂ ಬೆಳ್ಮುಗಿಲು ಬೆಳ್ಸರಿಗಳನ್ನು ಸುರಿಸಲಾರಂಭಿಸಿದುವು. (೯೨) ಕಾಮನಬಿಲ್ಲು ಶೋಭಿಸಿತು. (೯೩) ಭತ್ತದ ಗದ್ದೆಗಳು ಪರಿಪಕ್ವಶಾಲಿಕಣಿಶಗಳಿಂದ ಪೊಂಬಣ್ಣವಾಗಿ ಶೋಭಿಸಿದುವು. (೯೪) ಶರತ್ಕಾಲದ ಶೀತಾನಿಳವು ಬೀಸತೊಡಗಿತು. (೯೫) ಈ ಕಾಲದ ಸಂಧ್ಯಾ ಸಮಯದಲ್ಲಿ ಚಂದ್ರಮಂಡಲವು ಜಲಕ್ಕನೆ ಶೋಭಿಸುತ್ತಾ ಸಕಲ ಜನ ಚೇತೋಹಾರಿಯಾಗಿ ಕಣ್ಗೊಳಿಸುತ್ತಿತ್ತು. (೯೬) ಇಂತು ಶರತ್ಕಾಲವು ಎಸೆವ ಮಿತ್ರಮಂಡಲತ್ವ ಮೊದಲಾದ ತನ್ನ ಗುಣಗಳಿಂದ ನಾಭಿಪ್ರಭುವಂಶ ಮೇರುವನ್ನು ಪೋಲುತ್ತ ಎಸೆಯುತ್ತಿತ್ತು (೯೭) ಎಂಬಲ್ಲಿಗೆ.

ಚತುರ್ಥಾಶ್ವಾಸಂ
ಮುಗಿದುದು.

## ಪಂಚಮಾಶ್ವಾಸಂ

(ಯುವರಾಜ ದಿಗ್ವಿಜಯ ವರ್ಣನಂ.)

ಅಂತು ಬಂದ ಶರತ್ಸಮಯದೊಳ್ ಯುವರಾಜನುಂ ಚಿತ್ರಭಾನು ಸಮೇತನಾಗಿ ಜನಕನೊಡ್ಡೋಲಗಕ್ಕೆ ವಂದು ಜನಕನಂ ನಮಿಸಿ ದಿಗ್ವಿಜಯಕ್ಕೆ ಬೆಸನಂ ಪೆತ್ತು (೧-೫) ಶುಭ ಮುಹೂರ್ತದೊಳ್ ಪಯಣಂಗೆಯ್ಯಲುಜ್ಜುಗಿಸಿದಂ (೬) ಆ ಪ್ರಸ್ತಾವದೊಳ್ ಪೊಯ್ಸಿದ ಭೇರೀಪಟಹ ಪ್ರಣಾದವು ದಶದಿಶಾ ವಿವರಮುಂ ವ್ಯಾಪಿಸಿತ್ತು. ಆನೆ, ಕುದುರೆ, ತೇರ್, ಕಾಲಾಳ್ಗಳ ದೞವು ಪ್ರಬಲವಾಗಿ ನೆಱೆಯಿತು (೬-೧೩) ಅಂತು ನೆಱೆದ ಚತುರಂಗ ಬಲ ಸಮೇತನಾದ ಯುವರಾಜಂ ರಾಜವಿಭವದಿಂ ರಾಜಭವನಮುಂ ಪೊಱಮಟ್ಟು ರಾಜಮಾರ್ಗದೊಳ್ ಬರ್ಪಾಗಳ್ (೧೩-೨೨) ನಗರ ನಾರೀಜನಮೆಲ್ಲಂ ಸಸಂಭ್ರಮ ಲೀಲಾಪ್ರೇಮವಿಸ್ಮಯಹರ್ಷಪ್ರಕರ್ಷದರ್ಶನಭ್ರಾಂತಮಾಗಿ ವಿವಿಧ ಶೃಂಗಾರ ಚೇಷ್ಟೆಗಳಂ ಗೆಯ್ಯುತ್ತಮಾ ಯುವರಾಜನಂ ತಣಿವಿಲ್ಲದೆ ನೋಡುತ್ತಿರ್ದುದು. (೨೨-೩೪) ಇಂತು ಪುರಮಾರ್ಗದಿಂದಂ ಪುರಮುಂ ಪೊಱಮಟ್ಟು ಮೊತ್ತಮೊದಲ್ ಪೂರ್ವ ದಿಶಾಭಿಮುಖನಾಗಿ ಬಲಭರದಿಂ ಶೇಷಕಮಠ ದಿಗ್ಗಜಾದಿಗಳ್ ಕುಸಿವಂತು ನಡೆದು ತದ್ದಿಶಾಮಂಡಳಿಕರಂ ಯುದ್ಧದೊಳ್ ಗೆಲ್ದುದಂ ಕಂಡು ಅಪರದಿಶಾ ಪುರಾಧಿಪರ್ ಯುದ್ಧಮುಂ ಮಾಡದೆಯೇ ತಮ್ಮಾಳ್ವ ಸಕಲ ವಸ್ತೂತ್ಕರಂಗಳಂ ತಂದೀಯೆ ಕೊಂಡು, ಮೂಡಣಿಂ ಮೊದಲ್ಗೊಂಡು ಪುಷ್ಕಲಾವತೀ ವಿಷಯದ ಅರವಿಂದವುರಾದಿ ಕನಕಪುರ ಪರ್ಯಂತದರಸುಗಳನಾಕ್ರಮಿಸುತ್ತಂ ಉತ್ತರಾಭಿಮುಖಮಾಗಿ ನಡೆದು ಶಿಖಂಡೆಮೆಂಬ ಮಂಡಲದೊಳಗೆ ಮರೆವರೆ ಸಂತ್ರಾಸಕಮೆಂಬ ಘೋರಾರಣ್ಯಂ ನೇತ್ರ ಗೋಚರಮಾದುದು. (೬೦) ಆಗಳ್ ಚಿತ್ರಭಾನುಮಿತ್ರಂಗೆ ಚಿತ್ರಸೇನನೆಂಬ ಸಾರಥಿ—'ಸ್ವಾಮೀ—ಇದು ಸಂತ್ರಾಸಕಮೆಂ

ಖರಣ್ಯಂ. ಇಲ್ಲಿಯ ಕಾರಂಗನೆಂಬ ಬೇಡರೊಡೆಯಂ ಅತಿ ಪ್ರಬಳನಾಗಿ ನಾಡೆಲ್ಲವುಂ ಪೀಡಿಸುತ್ತಿ ರ್ದ್ದ, ನಿಮ್ಮಮ್ಮನ ದಿಗ್ವಿಜಯ ಪ್ರಸ್ತಾವದೊಳಾಂತು ನಿಂದು ಪೋರ್ದಿದಂ. ಇಲ್ಲಿಯ ಅಶೋಕ ದಾಸವಣ ಮೊದಲಾದ ಕೆಚ್ಚನೆಯ ಪೂಗಳಾಗಳ್ ನಿನ್ನ ಪಿತೃಗೊಡ್ಡಿಸಿ ಸತ್ತರ ನೆತ್ತರಿನ್ನು ಮಾಱ ದಂತೆ ತೋಱುತ್ತಿರ್ದಪುವು,' ಎಂದು ತದ್ಗಹನ ವರ್ಣನಾವ್ಯಾಜದಿಂ ಪಿತೃ ದಿಗ್ವಿಜಯ ವೃತ್ತಾಂತ ಮನಱಪೆ (೬೦-೬೩) ಚಿತ್ರಭಾನುವುಂ ಆ ಗಹನದ ತಾಳ ಪುನ್ನಾಗಾದಿ ವಿವಿಧ ವೃಕ್ಷಂಗಳಂ ಚದು ರತೆಯಿಂ ವ್ಯಾವರ್ಣಿಸುತ್ತುಮಿರೆ (೬೩-೬೯) ಅರೆಗುವರಂ ವರಾಹ ಶಾರ್ದೂಲಾದಿ ಘಾತುಕ ಮೃಗಂಗಳ ಭಯಂಕರಾಕಾರ ಕೃತ್ಯಂಗಳಂ, ವನಮಹಿಷ ಹರಿಣಾದಿ ಪಶುಗಳ ಸ್ವರೂಪ ಕೃತ್ಯಂ ಗಳಂ (೬೯-೮೭) ಕುತೂಹಲದಿಂ ನೋಡುತ್ತುಂ; ಸಮೀಪದ ಶಬರ ಶಿಬಿರದೊಳ್ ವಿನೋದ ಹೇತು ವಪ್ಪ ಶಬರಶಬರೀವೇಷಭೂಷಾವ್ಯಾಪಾರಾದಿಗಳನಭಿವೀಕ್ಷಿಸುತ್ತುಂ ಬರೆವರೆ ತಚ್ಛಬರಾಧೀಶಂ ಶಂಬನೆಂಬೊಂ ಗಜದಂತಾದಿ ವನಜಾತ ವಸ್ತೂತ್ಕರಂಗಳಂ ಕಾಣ್ಕೆಗೊಟ್ಟು ವಿನಯದಿಂ ಬಂದೆಱಗೆ ಆತನ ಭೃತ್ಯಭಾವಮನೊಪ್ಪುಗೊಂಡು (೮೭-೧೦೩) ನಡೆವ ಯುವರಾಜಂಗೆ ಮುಂದೊಂದೆಡೆ ಯೊಳ್ ತೀಡುವ ಅದ್ಭುತಗಂಧವಹಮಾದ ಗಂಧವಾಹಂಗೆ ಬೆಱಗುವಟ್ಟು ನಿಂದಂದು ಆ ಗಹನವಾಸ್ತವ್ಯನಪ್ಪಾಕಾರಂಗನೆನಿಪ ಪುಳಿಂದನಾಯಡೆಯನಾರಯ್ದಲ್ಲಿಗೊಡಗೊಂಡೊಯ್ದು ತೋರ್ಪುದು ಮಲ್ಲಿ ಒಂದು ಮಹಾಕ್ಷವೃಕ್ಷದೊಳ್ ನಾಗಪಾಶದಿಂ ಬಿಗಿವಡೆದಿರ್ದ ಖಚರನಂ ಕಂಡು ತದವತಂಸಗಂಧಮಾಗಂಧವೆಂದು ನಿರ್ಣಯಿಸಿ (೧೦೮) ತತ್ಖಚರಂಗಾದಾಬಂಧನಂ ವಿರೋಧ ಕೃತಮೆಂದು ಬಗೆದು ತನಗೆ ಭವಾಂತರ ಪ್ರಿಯತೆಯಿಂದೆ ಬಳಾಹಕನೆಂಬ ಖೇಚರನಿತ್ತ ವಿಮೋ ಚನೀವಿದ್ಯಾಬಲದಿಂದಾತನ ಬಂಧಮುಂ ಬಿಡಿಸೆ ತತ್ಖಚರನಾತಂಗೆಱಗಿ ತನ್ನ ವೈರಿಯಂ ವಧಿಸಲಾತ ನಂ ಬೇಡಿ, ತನ್ನ ವೃತ್ತಾಂತಮುಂ ಕೇಳ್ವಾತಂಗೆ ಸಂಕ್ಷೇಪದಿಂ ಕೇಳಿಸಲುದ್ಯತನಾದನೆಂಬಲ್ಲಿಗೆ

ಪಂಚಮಾಶ್ವಾಸಂ

ಮುಗಿದುದು.

## ಷಷ್ಠಾಶ್ವಾಸಂ.

(ಶಿಶಿರ ಸಮಯವರ್ಣನಂ)

ಅಯ್ಯಾ ಅರಸೇ ಕೇಳು, ಈ ನನ್ನ ವೃತ್ತಾಂತವು ವಿಶೇಷ ಲಜ್ಜಾಕರವು. ನಾನು ಹೇಮ ಕೂಟದ ವಿದ್ಯಾಧರರಾಜನು. ನನ್ನಹೆಸರು ಚಿಂತಾಂಗನು, ನಾನು ನನ್ನ ಪ್ರಿಯೆಯೊಡಗೂಡಿ ಮಂದರಕಂದರದ ಕಲ್ಪದ್ರುಮೋದ್ಯಾನದಲ್ಲಿ ಕ್ರೀಡಿಸುತ್ತಿದ್ದು ಬಳಲಿ ನಿದ್ರಿಸಿದ್ದ ಸಮಯಮನೇ ನಿರೀಕ್ಷಿಸುತ್ತಿದ್ದ ಪುಷ್ಕರಪುರದ ಹಯಗ್ರೀವಂ ನನ್ನನೀನಾಗವಿದ್ಯೆಯಿಂದೆ ಬಂಧಿಸಿ ಎನ್ನೋಪಳಂ ಕೊಂಡು ಪೋದಂ. (೧-೩) ಈನೀಚನಿದ್ರಾವೃತ್ತಿಯಿಂದೀ ಪರಿಭವಮೆನಗೆ ಸಂಭವಿಸಿತು. ಇಲ್ಲದಿದ್ದೊಡೆನಗೆ ಮಾಱಾಂಪರಾರುಂಟು? ಆದೊಡಂ ನಿನ್ನಂತಹ ಮಹಾತ್ಮನ ದರ್ಶನಕ್ಕವಕಾಶವಿತ್ತ ಆತನೆನ ಗುಪಕಾರಿಯೇ ಆದನೆಂದು ಪೇಳಿದ ಚಿತ್ರಾಂಗನಂ ಕುಱಿತು ಯುವರಾಜಂ 'ಅಯ್ಯಾ—ಮಿತ್ರನೇ ಚಕ್ರವಾಳಪುರದ ವಿದ್ಯಾಧರಾಧಿಪತಿಯಾದ ಬಳಾಹಕನು ಎನಗೆ ಪರಮಪ್ರಿಯಮಿತ್ರನು. ಅವನ ಸಹಾಯವು ನಿನಗೆ ದೊರಕುವಂತೆ ಮಾಡುವೆನೆನ್ನಲು' (೩-೬) ಚಿತ್ರಾಂಗನು—'ಅರಸೇ ನಿನ್ನಪ್ರಸಾದವೇ ಎನಗೆ ಸಾಕು, ಇತರರ ನೆರವು ಎನಗೆ ಆವಶ್ಯಕವಿಲ್ಲ. ಎನ್ನ ಬಲದೊಡನೆ ಪೋಗಿ ಹಗೆ ಯನ್ನು ಗೆದ್ದು, ಎನ್ನ ಮಾದೇವಿಯೊಡಗೂಡಿ ಬಂದು ನಿನ್ನನ್ನು ನಮಸ್ಕರಿಸಿ ಯೆನ್ನಪೊಳಲ್ಗೆ ಪೋಪೆಂ, (೭) ಎಂದು ಚಿತ್ರಾಂಗನತ್ತಪೋಗಲ್ ಪದ್ಮ ಪುತ್ರಂ ಮಲೆತಿರ್ದ ಮತಂಗರಾಜನಂ ಸಂಹರಿಸಿ

ಆತನ ರಾಜ್ಯಮಂ ವಶಮಾಡಿಕೊಂಡು ಮುಂದೆ ನಡೆದು ಭಂಗುರವೇಣಿಯೆಂಬ ನದಿಯ ದಡಮಂ ಸೇರಲ್ ವೃಷಸೇನನೆಂಬ ವೃದ್ಧಪುರೋಹಿತಂ, ಕ್ಷತ್ರಶಿರೋಮಣೀ, ನಿನ್ನ ತಂದೆ ಮುನ್ನೆ (ಹಿಂದೆ) ತನ್ನ ದಿಗ್ವಿಜಯದಲ್ಲಿ ಇಲ್ಲಿಯವರೆಗೂ ಭೂಪರನ್ನು ಆಜ್ಞಾನವರ್ತಿಗಳನ್ನಾಗಿ ಮಾಡಿ ಈ ನದಿಯ ತೀರದಲ್ಲಿಯೇ ಜಯಸ್ತಂಭವನ್ನು ನಿಲ್ಲಿಸಿದ್ದನು. ನೀನೂ ಕೂಡ ಇಲ್ಲಿಯೇ ಬೀಡುಬಿಟ್ಟು ಯಶಸ್ತಂಭ ವನ್ನು ನಿಲ್ಲಿಸಬೇಕು. (೮-೧೭) ಅಲ್ಲದೆ ಯುದ್ಧಶ್ರಾಂತವಾದೀ ಬಲವು ಜಲತೃಣಸಮೃದ್ಧವಾದ ಈ ಸ್ಥಳದಲ್ಲಿಯೇ ಕೆಲವು ದಿವಸಗಳ ವರೆಗೆ ವಿಶ್ರಾಂತಿಯನ್ನೂ ಪಡೆಯಲಿ, ಮತ್ತು ಇಲ್ಲಿಗೆ ಏಕಗ ವ್ಯೂತಿ ಪ್ರಮಾಣಾಂತರದಲ್ಲಿ ಚಿತ್ರಕೂಟಗಿರಿಯಲ್ಲಿ ಸುಪಾರ್ಶ್ವಪರಮೇಶ್ವರರಿಂದಲಂಕೃತವಾದ ಚಿರಂತನ ವೆನಿಸಿದ ಸಿದ್ಧಶೇಖರವೆಂಬ ತ್ರಿಜಗತ್ಪಾವನಮಪ್ಪ ಉನ್ನತ ತೀರ್ಥವೊಂದಸೆಯುತ್ತಿರ್ಪುದು. (೧೮) ಬರಿಸಬರಿಸಕಂ ಫಾಲ್ಗುಣನಂದೀಶ್ವರಪೂಜೆಗೆ ಅಷ್ಟಾಹ್ನಿಕದಲ್ಲಿ ಅಲ್ಲಿ ಮಹಾ ಯಾತ್ರೆಯು ನೆರೆಯುವುದು. (೧೯) ನೀನೂ ಕೂಡ ಆ ದಿವಸ ಅಲ್ಲಿಗೆ ಹೋಗಿ ಜಿನಮಹಾಮಹಿಮೆ ಯನ್ನು ಮಾಡಿಸಲು ನಿನ್ನ ಈ ದಿಗ್ವಿಜಯಯಾತ್ರೆಗೆ ಸಫಲತೆಯುಂಟಾಗುವುದು (೨೦) ಎಂದು ಬಿನ್ನವಿಸಿದ ಪುರೋಹಿತನ ವಚನಮನನುಮತಿಸಿ ಗುಣತುಂಗನಾನದೀತೀರದಲ್ಲಿ ಬೀಡಂ ಬಿಟ್ಟು ಸುಖವಾಗಿ ವಾಸಿಸುತ್ತಿದ್ದನು. (೨೪)

ಇತ್ತ ಚಿತ್ರಾಂಗನು ಹಯವದನನ್ನುಮುಟ್ಟಿ ಯುದ್ಧವನ್ನಾರಂಭಿಸಿದನು. ಅನ್ಯಕಳತ್ರಾ ಪಹಾರಿಯಾದ ಹಯವದನನು ತನ್ನ ವಿದ್ಯೆಗಳು ಸಹಾಯಮಾಡದಿರಲು ಚಿತ್ರಾಂಗನ ಮಹಿಷಿ ಯನ್ನು ಬಿಟ್ಟು ಯುದ್ಧರಂಗದಿಂದ ಓಡಿಹೋದನು. (೨೭) ಚಿತ್ರಾಂಗನು ತನ್ನ ಪ್ರಿಯಭಾರ್ಯೆ ಯೊಡನೆ ವಿಮಾನಾರೂಢನಾಗಿ ಬಂದು ಯುವರಾಜ ಶಿಬಿರಪ್ರದೇಶವನ್ನು ಸಮೀಪಿಸುತ್ತಿರಲು ಯುವ ರಾಜಸೈನ್ಯವು ಯಾವನೋ ವಿಯಚ್ಚರನೊಬ್ಬನು ದಂಡೆತ್ತಿ ಬರುತ್ತಿರುವನೆಂದು ಭ್ರಾಂತಿಗೊಂಡು ಯುದ್ಧಕ್ಕೆ ಸಿದ್ಧವಾಗುತ್ತಿರಲು (೨೯) ಚಿತ್ರಾಂಗನು ತನ್ನ ಬರವನರಸಂಗೆ ಮುಂದಱಿಪಲಟ್ಟಿ ಗಗನ ತಳದಿ ನವನೀತಳಕ್ಕವತರಿಸಿ ದೌವಾರಿಕನಿವೇದಿತನಾಗರಸಂಗೆ ನಮಸ್ಕರಿಸಿ (೩೦) ಕದನದಲ್ಲಿ ಪಗೆಯಂ ಗೆಲ್ದು ತನ್ನ ಪತ್ನಿಯನ್ನು ಕರೆತಂದ ಸಂತೋಷದ ಸುದ್ದಿಯನ್ನು ತಿಳಿಸಿ ತಾನು ತಂದಿದ್ದ ಕುಲಧನಗಳನ್ನು ಅರಸನ ಮುಂದೊಟ್ಟಿ (೩೧) ಅರಸೇ, ನೀನು ಮಾಡಿದುಪಕಾರಕ್ಕೆ ಪ್ರತ್ಯುಪಕಾರವ ನ್ನೆಸಗತಕ್ಕ ಸೈಪೆನಗಿಲ್ಲ. ನನ್ನಭಕ್ತಿ ಪ್ರದರ್ಶಕವಾದ ಇವನ್ನು ಸ್ವೀಕರಿಸಬೇಕೆಂದು ವಿನಯದೊಡನೆ (೩೨-೩೩) ಅವಂಧ್ಯ ಕೋಪವೆಂಬ ಕೃಪಾಣವೊಂದು, ಸಮರಸಾಧಕವೆಂಬ ಕವಚವೊಂದು, ಜಯಾ ನಂದಕವೆಂಬ ಕಾರ್ಮುಕವೊಂದು ಆಹವದೋಹಳಮೆಂಬ ಬಾಣವೊಂದು, ನಂದಿನಿಯೆಂಬ ಹಾರ ಲತೆಯೊಂದು, ಕಳಭಾಷಿಣಿಯೆಂಬ ವೀಣೆಯೊಂದು, ಇವುಗಳೊಡನೆ, ಪರವಿದ್ಯಾಚ್ಛೇದಿನಿ, ಮೋಹಿನಿ, ಬಹುರೂಪಿಣಿಯೆಂಬ ಮೂಱು ವಿದ್ಯೆಗಳನ್ನೂ ಕಾಣ್ಕೆಗೊಟ್ಟು ನಿಜಪುರಕ್ಕೆ ತೆರಳಿದನು (೩೪) ಶರ ತ್ಕಾಲದಲ್ಲಿ ಅರಸನ ದಂಡಿಗೊದಗಿದ್ದ ಖೇದವನ್ನು ಮಾಣಿಪಂತೆ ಹಿಮಂತರ್ತುವು ಸಾರ್ತಂದುದು. (೩೫) ಉತ್ತರದಿಕ್ಕಿನ ಶೀತವಾತವು ಬೀಸಲಾರಂಭಿಸಿತು. (೩೬) ಚಂದ್ರಿಕೆಯು ಮಸುಮಸುಳನಾ ಯ್ತು (೩೭) ಮಂಜಿನುಬ್ಬರವು ಜಗತ್ತಿಗೆ ಪಾಂಡುಕಂಬಳವನ್ನು ಮುಸುಕಿಟ್ಟಂತೆ ವ್ಯಾಪಿಸಿತ್ತು. (೩೮)ಕಮಲವು ಶೀತಕ್ಕಗಿದು ಕೊಱಗಿತು. (೩೯-೪೦) ಸಿಂಧುವಾರ(೪೧) ಕುಂದ (೪೨) ಜಾದಿ (೪೩) ಕುಮುದಂಗಳು ವಿಕಸಿತಂಗಳಾಗಿ ಶೋಭಿಸುತ್ತಿವೆ. (೪೪) ಹಿಮವು ಅನಂಗತಪ್ತರನ್ನು ಅತಿಯಾಗಿ ಪೀಡಿಸುತ್ತಾ ಎಲ್ಲೆಲ್ಲಿಯೂ ತಾನೇ ತಾನಾಗಿ ವಿಜೃಂಭಿಸುತ್ತಿತ್ತು. (೪೫-೪೭) ಹಿಮವು ಬರು ಬರುತ್ತಾ ಶಿಶಿರವಾಗಿ ಪರಿಣಮಿಸಿತು. (೪೮) ಸೂರ್ಯನು ಕೂಡ ಶೀತಕ್ಕಗಿದು ಅಗ್ನಿದಿಕ್ಕನ್ನು

ಸಾರ್ದನು. (೪೯) ಮಾಘಡಂಬರವು ತಡೆಯಲು ಅಸಾಧ್ಯವಾಗಿತ್ತು. (೫೧) ಜಾತಿಕುಂದಗಳ ಉತ್ಸವವು ಹೆಚ್ಚಿತು. (೫೨) ಶಿಶಿರ ಪುಅಗ್ನಿಷ್ಟಿಕೆ, ಸ್ತ್ರೀಯರ ಕುಚತಟಗಳು, ಅಗರುವಹೊಗೆ, ಪೊಸ ಕುಂಕುಮದಣ್ಪು, ನೆಲಮಾಳಿಗೆವನೆ; ಇವುಗಳನ್ನು ಆಶ್ರಯಿಸಿದವರ ಸಮೀಪವನ್ನು ಸಾರಲು ಅಂಜಿ ದೂರದೂರವಾಗುತ್ತಿತ್ತು. (೫೩) ಪೌರನಾರೀಕದಂಬವು ನವಸಿಂಧುವಾರದಲದರ್ಣಂಗಲ ಕರ್ಣಪೂರವು, ನವಮಾಳಿಕಾಕುಸುಮಶೇಖರವು, ಲೋಧ್ರಪುಷ್ಪಪರಾಗೋದ್ವರ್ತನಗಳು ಇವುಗಳಿಂದ ಸಂತೋಷಗೊಂಡಿತು. (೫೪) ವಾಸರಕ್ಕೆ ತಾಪಚ್ಯುತಿಯೂ, ಕುಂದವಲ್ಲರಿಗೆ ಸುಮಶ್ರೀ ಸಂಪದವೂ ಉತ್ಪಲಿನಿಗೆ ಉದ್ಯದ್ವಿೀತರಾಗತ್ವವೂ, ಅಂಬುರುಹಶ್ರೇಣಿಗೆ ಉದಾತ್ತತೀಕ್ಷತ್ವವೂ, ಪೌಷ್ಯಕ್ಕೆ ವಿಶೇಷವಾಗಿ ದಿಗಂಬರಸಾಂಗತ್ಯವೂ ಉಂಟಾಯಿತು (೫೫) ಅಂತೆನಿಸಿದ ಶಿಶಿರಸಮಯಕ್ಕಲಂಕಾರವಾದ ಫಾಲ್ಗುಣದ ಶುಕ್ಲಾಷ್ಟಮಿಯಂದು ಅರಸಂ ನಂದೀಶ್ವರಪೂಜೆಗೆಂದು ಸಿದ್ಧಶೇಖರಜಿನಾಲಯಕ್ಕೆ ಸಪರಿವಾರನಾಗಿ ಹೋಗಿ ತ್ರಿಜಗದಧೀಶ್ವರ ಚೈತ್ಯಗೃಹಮಂ ಮೂಱುಸೂಱ್ ಬಲವಂದು ಜಿನನ ಪಾದಪದ್ಮಂಗಳ್ಗೆಱಗಿ ಬಂದಿಸಿದನೆಂಬಲ್ಲಿಗೆ

ಆರನೆಯ ಆಶ್ವಾಸಂ
ಮುಗಿದುದು.

## ಸಪ್ತಮಾಶ್ವಾಸಂ

### (ದೂತಾಗಮನ ವರ್ಣನಂ)

ಬಳಿಕ ಅರಸು ತೀರ್ಥಕರನಿಗೆ ಅಭಿಷೇಕಮಾಡಿ, ಅಷ್ಟವಿಧ ಮಂಗಳ ದ್ರವ್ಯಂಗಳಿಂದರ್ಚಿಸಿ, ಸಹಸ್ರನಾಮಸ್ತುತಿಪೂರ್ವಕವಾಗಿ ಅಷ್ಟಾಹ್ನಿಕಮಹವನ್ನು ನಿರ್ವರ್ತಿಸಿ, ಸ್ನಪನದ ಗಂಧೋದಕವನ್ನು ತಲೆಯಲ್ಲಿ ಧರಿಸಿ, ಹಲವು ಸ್ತೋತ್ರಗಳಿಂದ ಸ್ತುತಿಸಿ, ಸಿದ್ಧಶೇಷೆಯನ್ನು ಕೊಂಡು, (೧-೧೬) ಅಲ್ಲಿಂದ ಹೊರಟುಬಂದು ಇದಿರೊಳ್ ಸಮಾಧಿಯೊಳಗಿದ್ದ ದುರಿತಕ್ರಕಚಮುನಿವರರಿಗೆ ಪೊಡೆವಟ್ಟು ಅವರ ಆಶೀರ್ವಾದಮಂ ಪಡೆದು ಸಂತೋಷದಿಂದ ಕಟಕವನ್ನು ಬಂದು ಹೊಕ್ಕನು. ತನ್ನ ರಾಜಮಂದಿರದ ಬಾಗಿಲಲ್ಲಿ ಆನೆಯಿಂದಿಳಿದು ಅಲ್ಲಿ ನೆರೆದಿದ್ದ ಮಂಡಲಿಕಸಾಮಂತಸಚಿವಾದಿ ಮನ್ನೆಯರಿಂದೆ ಗೌರವಿಸಲ್ಪಟ್ಟು ಚಿತ್ರಭಾನುದತ್ತಹಸ್ತಾವಲಂಬನಾಗಿ ಆಸ್ಥಾನಮಂಟಪಕ್ಕೆ ಬಿಜಯಮಾಡಿಸಿ, ಸಿಂಹಾಸನಾಸೀನನಾಗಿರಲು (೧೭-೨೦) ದಂಡೇಶ ದಿಕ್ಕುಂಜರನಾದ ಕೀರ್ತಿವರ್ಮ ಸೇನಾಪತಿಯು ದಿಗ್ವಿಜಯಂಗೆಯ್ದು ಬಂದು ತಾನು ತಂದಿರ್ದ ಉತ್ಕೃಷ್ಟವಾದ ವಿಜಯವಸ್ತುಗಳನ್ನು ಸಮರ್ಪಿಸಿ ನಿಜೋಚಿತಾಸನದಲ್ಲಿ ಕುಳ್ಳಿರಲು ವಿಜಯಸೇನನೆಂಬ ಹಿತಪುರೋಹಿತನು ಆತನ ವಿಜಯ ವೃತ್ತಾಂತವನ್ನು ಬಿನ್ನವಿಸಲು, ಅರಸನು ಕೀರ್ತಿವರ್ಮನನ್ನು ಸಮಸ್ತಸಾರವಸ್ತುಗಳಿಂದ ತಣಿಪಿ ಬೀಡಿಂಗೆ ಕಳಿಪಿ ವಂದಿಮಾಗಧಾದಿಗಳ ಸ್ತೋತ್ರದಿಂದ ಉತ್ಸಾಹಗೊಂಡವನಾಗಿ ಅಂದಿನ ಒಡ್ಡೋಲಗವನ್ನು ವಿಸರ್ಜಿಸಿ ಅರಮನೆಯನ್ನು ಸೇರಿ ಸುಖದಿಂದಿರ್ದನು (೨೧-೨೪) ಮತ್ತೊಂದುದಿವಸದೊಳರಸಂ ಒಡ್ಡೋಲಗದಲ್ಲಿ ಅಂತಃಪುರ ಸ್ತ್ರೀಯರೊಡನೆ ಸಿಂಹಾಸನಾಸೀನನಾಗಿ, ಎರಡುಪಕ್ಕಗಳಲ್ಲಿಯೂ ಅಲಂಕೃತರಾದ ರಾಜರಸಮೂಹವು ಶೋಭಿಸುತ್ತಿರಲು, ಭಾರತಿಕವೃಂದವು ಅತಿನೈಪುಣ್ಯದಿಂದ ನೃತ್ಯವನ್ನು ಕೇಳಿಸುತ್ತಿರೆ ಅತ್ಯಂತವೈಭವದಿಂದಿರುತ್ತಿರ್ಪಂದು (೨೫-೩೬) ಪ್ರತೀಹಾರಿಯೊರ್ವಂ ಬಂದು ನಮಸ್ಕರಿಸಿ ರಾಜಾಧಿರಾಜಾ, ಜಯವರ್ಮ ಭೂಪತಿಯು ಅಟ್ಟಿದ ದಮನನೆಂಬ ರಾಯಭಾರಿಯು ಬಾಗಿಲಲ್ಲಿ ಬಂದಿರುವನು, ಎಂದು ಬಿನ್ನಪಂಗೆಯ್ದು ಮಹೀಶಲಬ್ಧಾನುಮತಿಯಾಗಿ ಪೋಗಿ ತಂದು ಕಾಣಿಸಲು ದಮನನು ಆಸ್ಥಾನವನ್ನು ಪ್ರವೇಶಿಸಿ ನಿಜೋಚಿತಾಸನದಲ್ಲಿ ಕುಳಿತುಕೊಂಡನು. ಬಳಿಕಅರಸು ಪ್ರಸಾ

ದದೃಷ್ಟಿಯಿಂದ ಆತನನ್ನು ನೋಡಿ, ಅಯ್ಯಾ, ನನ್ನ ಮಾವನಾದ ಜಯವರ್ಮಭೂಪತಿಗೆ ಕುಶಲವೇ? ಅವನ ಸಪ್ತಾಂಗದಲ್ಲಿ ಯಾವುದೊಂದು ಕೊರತೆಯೂ ಇಲ್ಲವಷ್ಟೆ? ಎಂದು ಕುಶಲ ಪ್ರಶ್ನೆಮಾಡಲು ಆ ದಮನನು ಮಹಾಸ್ವಾಮಿ, ನಮ್ಮೊಡೆಯ ಜಯವರ್ಮಭೂಪನು ಸರ್ವವಿಧದಲ್ಲಿಯೂ ಕುಶಲಿಯಾಗಿರುವನು. ಈಗ ಮಹತ್ತರವಾದ ಕಾರ್ಯವೊಂದೊದಗಿರುವುದರಿಂದ ನಿಮ್ಮ ಸಹಾಯವನ್ನು ಬಯಸಿ ನನ್ನನ್ನು ನಿಮ್ಮಲ್ಲಿಗೆ ಕಳುಹಿಸಿರುವನು. ನಿಮ್ಮ ತಂದೆಯ ತಂಗೆಯಾದ ಚಂದ್ರಿಕಾದೇವಿಗೂ ಭದ್ರಾವತೀಪುರನಾಥನಾದ ಜಯವರ್ಮನೃಪತಿಗೂ ಪುಟ್ಟಿದ ಸರ್ವಾಂಗಸುಂದರಿಯಾದ ಭಾನುಮತಿಯೆಂಬ ಕನ್ಯಾರತ್ನವನ್ನು ತನಗೆ ವಿವಾಹಮಾಡಿಕೊಡಬೇಕೆಂದು ಕನಕಪುರದ ಗಜಕರ್ಣನೆಂಬರಸು ದೂತನನಟ್ಟಿದನು. ಅರಸನು ಆ ದೂತನನ್ನು ಕುರಿತು, ಅಯ್ಯಾ, ತನ್ನಂತಹ ಗುಣವೃದ್ಧನೂ ಸನ್ನುತಕುಲೀನನೂ ಆದವನು ಕನ್ನೆಗೆ ಯೋಗ್ಯನೆ? ನೀನು ಹೇಳಿದುದೇ ಯೋಗ್ಯಮಲ್ಲದ ಇದು ಕರಣೀಯವಾದುದೇ? (೩೭-೪೯) ಎಂದು ಭಂಗಿ ಭಾಷಿತದಿಂದ ಸಮಾಧಾನಮಾಡಿ ಅವನ ಬೀಡಿಂಗೆ ಕಳುಹಿಸಿ, ಆಸ್ಥಾನವನ್ನು ವಿಸರ್ಜಿಸಿ, ಮಂತ್ರಾಲಯಕ್ಕೆ ಹೋಗಿ ನೀತಿಶಾಸ್ತ್ರಪಟುಗಳಾದ ಮಂತ್ರಿಗಳೊಡನೆ ಪ್ರಕೃತಕಾರ್ಯವನ್ನು ಚೆನ್ನಾಗಿ ವಿಮರ್ಶಿಸಿ.—ಆ ಗಜಕರ್ಣನು ವಂಶ ಸಂಪದಗಳಲ್ಲಿ ಮೇಲಾದವನಾದರೂ, ಭಾನುಮತಿಗೆ ಮಾತ್ರ ನೀನಲ್ಲದೆ ಮತ್ತಾವನೂ ಯೋಗ್ಯನಾದ ವರನಲ್ಲವೆಂಬದನ್ನು ನಿಶ್ಚಯಿಸಿ ಆ ಮರುದಿವಸ ಆಸ್ಥಾನಕ್ಕೆ ಗಜಕರ್ಣನೆಂಬ ದೂತನನ್ನು ಬರಮಾಡಿ ಅಯ್ಯಾ ದೂತನೇ, ಭಾನುಮತಿಗೆ ಪುಂಡರೀಕಿಣೀಶ್ವರನೂ, ನನ್ನ ತಂಗೆಯ ಮಗನೂ ಆದ ಮಹಾಪದ್ಮನೇ ಯಾವತೆಱದಿಂದ ನೋಡಿದರೂ ಉಚಿತನಾದ ವರನು. ಆದುದರಿಂದ ಈ ಕನ್ಯಾರತ್ನದ ಮಾತಂತಿರಲಿ, ನನ್ನ ಕಿಱಿಯ ಮಗಳಾದ ಮದಲೇಖೆಯನ್ನು ನಿಮ್ಮರಸನಿಗೆ ಅಕ್ಕರೆಯಿಂದ ಕೊಡುವೆನು, ಎಂದು ಹೇಳಿ ಹತ್ತಿರದಲ್ಲಿಯೇ ಇದ್ದ ಆ ಮದಲೇಖೆಯನ್ನು ತೋರಿಸಲು (೪೯-೫೫) ಆ ದೂತನು ವಿಷಾದವನ್ನು ತೋರಿಸುತ್ತಾ ಅರಸೇ! ನಿನ್ನ ಪಟ್ಟಮಹಿಷಿಯ ಪುತ್ರಿಯಾದ ಭಾನುಮತಿಯಿಂದ ನಮ್ಮರಸನು ವಿಶೇಷವಾಗಿ ಸಂತೋಷಿಸುವನಲ್ಲದೆ ಇತರ ಕನ್ಯಾರತ್ನವನ್ನು ಆತನು ಕಣ್ಣೆತ್ತಿಯೂ ನೋಡುವುದಿಲ್ಲ. ನೀವು ಈ ಬಗೆಯ ಬೀಳುಮೆಯ ಮಾತುಗಳನ್ನಾಡಿ ಭಾನುಮತಿಯನ್ನು ನಮ್ಮರಸನಿಗೆ ಕೊಡದಿದ್ದರೆ ಆತನೇ ಬಲಾತ್ಕಾರವಾಗಿ ಬಾಹುಬಲದಿಂದ ಕೊಂಡೊಯ್ಯುವನು. ನೀನು ಅಷ್ಟಕ್ಕೆ ಅವಕಾಶಕೊಟ್ಟರೆ ಈ ಕನ್ಯಾರತ್ನವೊಂದನ್ನು ಮಾತ್ರವಲ್ಲ; ನಿನ್ನೀರಾಷ್ಟ್ರವನ್ನೂ ಕಳೆದುಕೊಳ್ಳುವೆ (೫೫-೬೧) ಎಂದತಿಕ್ರಮಿಸಿ ನುಡಿದ ದೂತನ ಮಾತನ್ನು ಕೇಳಿ ಅರಸು ಮಿತಿಮೀಱಿದ ಕೋಪದಿಂದ ವಿಜೃಂಭಿಸುತ್ತಿರುವುದನ್ನು ಕಂಡು ಮಂತ್ರಿಗಳು—ಓ ದೂತನೇ—ಕಮಲವು ಸೂರ್ಯನಿಂದ ವಿಕಸಿಸುವಂತೆ ನಮ್ಮ ಅರಗುವರಿಯು (ಭಾನುಮತಿ) ಮಹಾಪದ್ಮನಿಂದಲ್ಲದೆ ಮತ್ತಾರಿಂದಲೂ ಸಂತೋಷವನ್ನು ಪಡೆಯಳು. ಅಲ್ಲದೆ ನಿಮ್ಮರಸನು, ಮದಮಲಿನನು, ಆಱಿಡಿದಾಣನು, ಉರುಮಾತಂಗ ಧರ್ಮಪುಳ್ಳವನು. ಇಂತಹ ಕೀಳ್ಮನುಜನನ್ನು ನಮ್ಮರಗುವರಿಯು ಕಣ್ಣೆತ್ತಿಯೂ ನೋಡುವುದಿಲ್ಲ, ಎಂದು ಇವೇ ಮೊದಲಾಗಿ ಹಲವು ಬಿರುನುಡಿಗಳನ್ನಾಡಿ ಧಿಕ್ಕರಿಸಿ ಕುಳುಹಿಸಲು (೬ು-೬೭) ಆ ದೂತನು ಹೋಗಿ ಗಜಕರ್ಣನಿಗೆ ಯಥಾವಸ್ಥಿತವಾಗಿ ನಡೆದ ಸಂಗತಿಯೆಲ್ಲವನ್ನೂ ತಿಳಿಸಿದನು. ಇದನ್ನು ಕೇಳಿದೊಡನೆಯೇ ಗಜಕರ್ಣನು ಅತ್ಯಂತ ಕೋಪಾಟೋಪವಿಜೃಂಭಿತನಾಗಿ ಚತುರಂಗಬಲದೊಡನೆ ಸಮಗ್ರಯುದ್ಧಸಾಮಗ್ರಿವೆರಸು ದಂಡೆತ್ತಿಬಂದು ಭದ್ರಾವತೀನಗರದ ಕೋಟೆಯನ್ನುಲಗ್ಗೆ ಹತ್ತಿರುವನು (೬೮-೬೯) ಜಯವರ್ಮನು ಯುದ್ಧಸಾಮಗ್ರಿಯೆಲ್ಲವನ್ನೂ ಅಣಿಮಾಡಿಕೊಂಡು ಸಿಟ್ಟಿನಿಂದಲೂ, ಸಹಜವಾದ ಕ್ಷತ್ರಪರಾಕ್ರಮದಿಂದಲೂ ಶತ್ರುವನ್ನು ಹುಟ್ಟಡಗಿಸುವ ಛಲದಿಂದ ಯುದ್ಧಕ್ಕೆ ಹೊರಡಲು ಮಂತ್ರಿಗಳು

ಆವನ ಯುದ್ಧೋದ್ಯೋಗವನ್ನು ಮಾರ್ಕೊಂಡು (೭೦-೭೭) ಮಹಾಸ್ವಾಮಿ, ತಾವು ಸಹಾಯ ರಹಿತರಾಗಿ ಸಹಸಾಯುದ್ಧಕ್ಕೆ ಹೊರಡಕೂಡದು, ನಿಮ್ಮ ಸೋದರಳಿಯನನ್ನು ದೂತರನ್ನಟ್ಟಿ ಬರ ಮಾಡಿಕೊಳ್ಳಿರಿ. ಆತನು, ಮದಿಸಿದ ಆನೆಯು ಕಮಲಕಾಸಾರವನ್ನು ಹೊಕ್ಕು ಧ್ವಂಸಮಾಡುವಂತೆ ಶತ್ರುಗಳನ್ನು ನಿರ್ಮೂಲಮಾಡಿ ಜಯಲಕ್ಷ್ಮಿಯನ್ನು ಎಳೆದು ತರುವನು, ಎನ್ನಲು ಜಯವರ್ಮ ಭೂ ಪನು ಅದಕ್ಕೆ ಸಮ್ಮತಿಸಿ ನಿಮ್ಮಲ್ಲಿಗೆ ನನ್ನನ್ನು ಕಳುಹಿಸಿರುವನು. ಪರಹಿತವೇ ಮುಖ್ಯಕರ್ತವ್ಯವೆಂಬ ವ್ರತವನ್ನು ಕೈಗೊಂಡಿರುವ ಸ್ವಾಮಿಯವರು ಈ ವಿಷಯದಲ್ಲಿ ಸಹಾಯಮಾಡಿ ನಮ್ಮೊಡೆಯನನ್ನು ಈ ಆಪತ್ತಿನಿಂದ ಉದ್ಧರಿಸಬೇಕು, (೭೮-೮೨) ಎಂದು ದಮನನೆಂಬ ದೂತಂ ಬಿನ್ನವಿಸಿದನೆಂಬಲ್ಲಿಗೆ

ಏಳನೆಯ ಅಶ್ವಾಸಂ

ಮುಗಿದುದು.

## ಅಷ್ಟಮಾಶ್ವಾಸಂ

(ಚಂದ್ರಿಕಾವಿಹಾರ ವರ್ಣನಂ)

ಬಳಿಕ ಮಹಾಪದ್ಮನು ಶರಣಾಗತರನ್ನು ರಕ್ಷಿಸುವುದೇ ಕ್ಷತ್ರಿಯ ಧರ್ಮವಾದುದರಿಂದ ನಾನು ನಿಮ್ಮೊಡೆಯನಿಗೆ ಸಹಾಯಮಾಡುವೆನು ಎಂದು ದೂತನನ್ನು ಕಳುಹಿಸಿ, ರಣಭೇರಿಯನ್ನು ಹೊಡೆಯಿಸಿ ಸೈನಿಕರಿಗೆಲ್ಲಾ ಯುದ್ಧಕ್ಕೆ ಹೊರಡಬೇಕೆಂಬುದನ್ನು ಸಾರಿಸಿದನು. (೧-೫) ಅಷ್ಟರಲ್ಲೇ ಹೊತ್ತು ಮುಳುಗಿತು. ಎಲ್ಲೆಲ್ಲಿಯೂ ಮುಂಗತ್ತಲು ಕವಿಯಿತು, ಬಳಿಕ ನಕ್ಷತ್ರಗಳು ಮಿಣು ಗುಟ್ಟಲಾರಂಭಿಸಿದುವು. ಚಂದ್ರನು ಉದಯಿಸಿ ಸಂಪೂರ್ಣಕಳೆಗಳಿಂದ ವಿರಾಜಿಸುತ್ತಿದ್ದನು. (೬-೧೫) ಈ ಸಮಯದಲ್ಲಿ ಮಹಾಪದ್ಮನು ಕಾವ್ಯಗೋಷ್ಠಿಯಿಂದ ಯಾಮಿನಿಯ ಪ್ರಥಮಯಾಮವನ್ನು ಕಳಿಪಿ ಓಲಗವನ್ನು ವಿಸರ್ಜಿಸಿ ಸೆಜ್ಜೆವನೆಗ ಬಿಜಯಂಗೆಯ್ದು ಸುಖಸುಪ್ತನಾಗಿ ನಿಶಾವಸಾನ ಸಮ ಯದಲ್ಲಿ, ಶೀತಳ ಪ್ರಭಾತಮಾರುತನ ತೀಟದಿಂದಲೂ, ಗೃಹದೀರ್ಘಿಕೆಗಳಲ್ಲಿಯ ಪಕ್ಷಿಗಳ ಕಲಕಲದಿಂ ದಲೂ, ವಂದಿಮಾಗಧಾದಿಗಳ ಸ್ತುತಿರವಗಳಿಂದಲೂ, ಉದಯಿಸಿದ ಸೂರ್ಯನ ತೇಜಸ್ಸಿನ ಬೆಳಗಿನಿಂ ದಲೂ ನಿದ್ರೆಯನ್ನು ಬಿಟ್ಟು ಎಚ್ಚತ್ತನು. (೧೫-೨೫)

ಆ ಪ್ರಸ್ತಾವದಲ್ಲಿ ನೃಪಜಯಪ್ರಸ್ಥಾನಭೇರಿಗಳು ಭೋರ್ಗರೆಯುತ್ತಿದ್ದುವು. ಚತು ರಂಗಬಲವು ಬಂದು ವಿಜಯ ಪ್ರಯಾಣಕ್ಕೆ ಹೊರಡಲು ಸಿದ್ಧವಾದುವು. ಮಾಂಡಳಿಕ ಸಾಮನ್ತ ರಾಜರೆಲ್ಲರೂ ಬಂದು ನೆರೆದರು. ಅರಸನು ಸಿದ್ಧವಾದ ಪಟ್ಟಗಜವನ್ನೇರಿ ಪ್ರಯಾಣಹೊರಟು (೨೬-೨೮) ಜಯಪ್ರಸ್ಥಾನ ಶಿಬಿರಕ್ಕೆ ಬಂದು, ಆ ದಿವಸವೆಲ್ಲಾ ಅಲ್ಲಿಯೇ ಬೀಡುಬಿಟ್ಟಿದ್ದು ಮಾರ ನೆಯದಿನ ಸೂರ್ಯೋದಯ ಸಮಯದಲ್ಲಿ ಸಿದ್ಧವಾಗಿದ್ದ ಭೇರಿ ನ್ನೇಳು ಶಂಖ ಕಾಹಳಾದಿ ವಾದ್ಯ ಧ್ವನಿಯು ದಿಗ್ವಿವರನ್ನು ಆವರಿಸುತ್ತಿರಲು ಚತುರಂಗಬಲದೊಡನೆ ಆ ಪ್ರಸ್ಥಾನ ಶಿಬಿರದಿಂದ ಮುಂ ದಣ ಪ್ರಯಾಣವನ್ನು ಬೆಳೆಯಿಸಿದನು. (೨೮-೩೧) ಈ ಚತುರಂಗಬಲದ ವಿಜಯಪ್ರಯಾಣ ಸಂ ರಂಭವು ಸಕಳಕ್ಷೋಣೀತಲಕ್ಷೋಭಕಾರಿಯಾಗಿತ್ತು. (೩೧-೪೫) ಇಂತುಗ್ರೋಗ್ರತರಸಾಮಗ್ರಿ ವೆರಸು ಕತಿಪಯ ಪ್ರಯಾಣಂಗಳಿಂದೆ ಭದ್ರಾವತೀಪುರವನ್ನು ಸೇರಿ ಮುತ್ತಿದ್ದ ಚತುರಂಗಬಲವನ್ನೂ ಎಚ್ಚಟ್ಟ ಸರ್ವಸ್ವವನ್ನೂ ಸೂಱೆಗೊಂಡು ಗಜಕರ್ಣನನ್ನು ಪಿಡಿವೊಲಂಗೊಂಡು ಜಯಶ್ರೀಯೊಳ್

ನೆರೆದು ನಗರಮಂ ಪ್ರವೇಶಿಸುವಲ್ಲಿ ಪೌರರೆಲ್ಲರಿಂದಲೂ ಅತ್ಯಂತ ಕುತೂಹಲ ಸಂತೋಷಗಳಿಂದ ನೋಡಲ್ಪಡುತ್ತಾ ರಾಜಬೀದಿಯನ್ನು ದಾಟಿ ಸೌಧಾಲಯಂಗಳನೊಳಕೊಂಡ ರಾಜಾಂಗಣವನ್ನು ಹೊಕ್ಕು, ಸೌಧತಲವನ್ನು ಸೇರಿ ಜಯವರ್ಮನ ವಿಶೇಷವಾದ ಆದರ ಸನ್ಮಾನ ಸ್ತುತಿಗಳಿಗೆ ಪಾತ್ರವಾದನು. (೪೫-೪೯) ಬಳಿಕ ವಿವಾಹಮಂಟಪವು ಅಣಿಯಾಯಿತು, ಸಕಲ ಪರಿಣಯ ಸಂಭಾರಗಳೂ ಸಿದ್ಧವಾದುವು. ಒಂದು ಶುಭಮುಹೂರ್ತದಲ್ಲಿ ಜಯವರ್ಮನು ಮಜ್ಜನ ವಸನಭೂಷಣಾದಿಗಳಿಂದ ಶೋಭಿಸುತ್ತಿರುವ ಮಹಾಪದ್ಮ ಭಾನುಮತಿಯರಿಗೆ ಪಾಣಿಗ್ರಹಣಮಹೋತ್ಸವವನ್ನು ನೆರವೇರಿಸಿದನು. (೫೦-೬೨)ಧರಾಮರರು ಹರಸಿದರು, ಮಂಗಳಪಾಠಕರು ಮಂಗಳವೃತ್ತಂಗಳನ್ನೋದಿದರು. ಜಯವರ್ಮನ ಅಪಾರವಾದ ದಾನಭೋಜನಾದಿಗಳಿಂದ ಎಲ್ಲರೂ ಅತ್ಯಂತವಾಗಿ ಸಂತೋಷಗೊಂಡರು. ಜಯವರ್ಮನ ಸಂತೋಷಕ್ಕೆ ಪಾರವೆಂಬುದೇ ಇಲ್ಲವಾಯಿತು ಇಂತು ಜಯವರ್ಮನು ಮಗಳ ಮದುವೆಯನ್ನು ಬಹು ವಿಜೃಂಭಣೆಯಿಂದ ನಡೆಯಿಸಿ ಕೆಲವು ದಿನಗಳವರೆಗೂ ಅಳಿಯನನ್ನು ತನ್ನರಮನೆಯಲ್ಲಿಯೇ ಇರಿಸಿಕೊಂಡಿದ್ದು ಒಂದುದಿನ ಶುಭಮುಹೂರ್ತದಲ್ಲಿ ಅವಿತವಾದ ಬಳುವಳಿಯಿತ್ತು ಅಳಿಯನನ್ನೂ ಮಗಳನ್ನೂ ಪುಂಡರೀಕಿಣೀ ನಗರಿಗೆ ಕಳುಹಿಸಿಕೊಟ್ಟನು. (೬೭-೭೧) ಮಹಾಪದ್ಮನು ನೂತನ ವಧೂಸಮೇತನಾಗಿ ಸುಖವಾಗಿ ಪ್ರಯಾಣಮಾಡುತ್ತಿದ್ದನು. ಆಗ ಒದಗಿಬಂದಿದ್ದ ಬೇಸಗೆಯ ತಾಪವು ಬಾಯಿಂದ ವರ್ಣಿಸುವುದಕ್ಕೂ ಸಾಧ್ಯವಿಲ್ಲದಂತಿತ್ತು. (೭೨-೭೮) ಆದಾರಿಯಲ್ಲಿ ಮನೋಹರವಾದ ವನವೊಂದು ಮಹಾಪದ್ಮನ ದೃಷ್ಟಿಗೋಚರವಾಯಿತು. (೭೪-೮೨) ಅರಸನು ಅಲ್ಲಿ ಬಿಡಾರಬಿಟ್ಟನು. ಅಂತಃಪುರಸ್ತ್ರೀಯರು ತಮ್ಮ ಸಖಿಯರೊಡನೆ ಹೂಗಳನ್ನು ಕೊಯ್ದು ಆಯಾಸಗೊಂಡು (೮೩-೮೮) ಜಲಕೇಳಿಯನ್ನಾಡಿ ಮಹಾಪದ್ಮನ ಮನಸ್ಸಿಗೆ ಹೆಚ್ಚಾಗಿ ಸಂತೋಷವನ್ನುಂಟುಮಾಡಿದರು. (೮೯-೯೪) ಅರಸು ಅಂದಿನ ದಿನವನ್ನು ಅಲ್ಲಿಯೇ ಕಳೆದು ಮರುದಿವಸ ಪ್ರಯಾಣವನ್ನು ಮುಂದುವರಿಸಿ ನಿಚ್ಚವಯಣಂ ಬಂದು ತನ್ನ ಪುಂಡರೀಕಿಣೀ ನಗರವನ್ನು ಸೇರಿ ಅರಮನೆಯನ್ನು ಪ್ರವೇಶಿಸಿ ಭಾನುಮತಿಯೊಡನೆ ಸುಖವಾಗಿರುತ್ತಿದ್ದನು. (೯೫) ಕೆಲವು ದಿವಸಗಳಲ್ಲಿ ಭಾನುಮತಿಯು ಗರ್ಭವತಿಯಾಗಿ ಧನದೇವನೆಂಬ ಸುಕುಮಾರನನ್ನು ಪ್ರಸವಿಸಿದಳು (೯೯) ರಾಜನು ಪುತ್ರೋತ್ಸವಾದಿಗಳನ್ನು ನೆರವೇರಿಸಿ ಸಂತೋಷದಿಂದಿದ್ದನು. ಒಂದು ದಿವಸ ರಾಜನು ಒಡ್ಡೋಲಗದಲ್ಲಿ ಕುಳಿತಿರಲು ಸೂರ್ಯಾಸ್ತವಾಯಿತು, ಕತ್ತಲೆಯು ಎಲ್ಲೆಲ್ಲಿಯೂ ಹರಡಿಕೊಂಡಿತು. (೯೬-೧೦೧) ನಕ್ಷತ್ರಗಳು ಮೂಡಿದುವು, ಚಂದ್ರನೂ ಉದಗಿರಿ ಶಿಖರಶೇಖರನಾದನು. ಆಗ ಮಹಾಪದ್ಮನು ಓಲಗವನ್ನು ವಿಸರ್ಜಿಸಿ ಒಳಹೊಕ್ಕು ನಿತ್ಯಕೃತ್ಯಗಳನ್ನು ನಿರ್ವರ್ತಿಸಿ ಚಂದ್ರಿಕೆಯ ಸಂಪತ್ತನ್ನು ಅಭಿನಂದಿಸಿ ಪುರವನ್ನು ಸುತ್ತಿ ವಿನೋದಗಳನ್ನು ನೋಡಬೇಕೆಂದು ಬಯಸಿ ನಾಗರಿಕ ವಿಟವಿದೂಷಕಾದಿಗಳೊಡವೆರೆದು(೧೦೧-೧೦೬) ರಾಜಭವನಮಂ ಪೊಱಮಟ್ಟು ಗಣಿಕಾವಾಟವನ್ನು ಪ್ರವೇಶಿಸಿ, ಅಲ್ಲಿ ಗಣಿಕಾಭುಜಂಗಾದಿಗಳ ಹಲವು ಬಗೆಯ ಶೃಂಗಾರಕೇಳಿಗಳನ್ನು ನೋಡುತ್ತಾ ಬರುತ್ತಿರಲು ಚಂದ್ರಾಸ್ತವಾಯಿತು. (೧೦೬-೧೧೮) ಸೂರ್ಯನು ಉದಯೋನ್ಮುಖನಾದನು. ಆ ಸಮಯದಲ್ಲಿ ಅರಸನು ಅರಮನೆಯನ್ನು ಸೇರಿ, ಪ್ರಾತಸ್ಸಂಧ್ಯಾವಂದನಾದಿ ನಿತ್ಯ ಕರ್ಮಗಳನ್ನು ನೆರವೇರಿಸಿ, ಆಸ್ಥಾನಮಂಟಪವನ್ನು ಸೇರಿ, ಒಡ್ಡೋಲಗದಲ್ಲಿರುತ್ತಾ ಬಹಿರುದ್ಯಾನವನದಲ್ಲಿ ಭೂತಹಿತ ಜಿನರು ಬಿಜಯಂಗೆಯ್ದಿರುವ ಸುದ್ದಿಯನ್ನು ತಂದು ತಿಳಿಸಿದ ಋಷಿನಿವೇದಕನಿಗೆ ಅಂಗಚಿತ್ತವನ್ನಿತ್ತು ಆ ಋಷಿಗಳಿರುವ ದಿಕ್ಕಿಗೆ ಏೞಡಿನಡೆದು ಸಾಷ್ಟಾಂಗ ಪ್ರಣಾಮಮಾಡಿ ವಂದನಾಭಕ್ತಿಯನ್ನು ಪೇೞಿ ಹಿರಿಯ ಋಷಿವರ್ಯರು ಇೞಿದಿದ್ದಸ್ಥಳಕ್ಕೆ ಹೋಗಬೇಕೆಂದು ಸನ್ನಾಹಭೇರಿಯನ್ನು ಹೊಯ್ಸಿ ಸಮ

ಸ್ತ್ರಾಂತಃಪುರದೊಡಗೂಡಿ ಮಾಂಡಲಿಕ ಸಾಮಂತಾದಿಗಳಿಂದ ಅನುಸರಿಸಲ್ಪಟ್ಟು ಬಹಿರುದ್ಯಾನವನ್ನು ಬಂದು ಸೇರಿದನು (೧೧೮-೧೨೦) ಎಂಬಲ್ಲಿಗೆ

ಎಂಟನೆಯ ಆಶ್ವಾಸಂ
ಮುಗಿದುದು.

## ನವಮಾಶ್ವಾಸಂ

(ಗರ್ಭಾವತರಣ ಕಲ್ಯಾಣವರ್ಣನಂ)

ಬಳಿಕ ಮಹಾಪದ್ಮನು ಬಹಿರುದ್ಯಾನವನ್ನು ಸೇರಿ ವಸ್ತುಸ್ತವಗುಣಸ್ತವ ರೂಪಸ್ತವಗಳಿಂದ ಭೂತಹಿತಜಿನರನ್ನು ಸ್ತುತಿಸಿ ಪೊಡೆವಟ್ಟು ಅಷ್ಟವಿುಂಗಳ ದ್ರವ್ಯಂಗಳಿಂದರ್ಚಿಸಿ ಗುರುಭಕ್ತಿಪೂರ್ವಕಂ ಪಂಚಮುಷ್ಟಿಯಿಂ ಬಂದಿಸಿ ತದೀಯಾಶೀರ್ವಾದವನ್ನು ಶಿರದಲ್ಲಿ ತಳೆದು ಸಮುಚಿತಾಸನದಲ್ಲಿ ಕುಳ್ಳಿರಲು (೧-೬) ಋಷಿವರ್ಯರು ಅಗಾಧ ಕೇವಳ ಬೋಧದಿಂದ ಈತನು ಅತ್ಯಾಸನ್ನಭವ್ಯನೆಂದು ತಿಳಿದು ಜಿನಮತ ತತ್ವವನ್ನುಪದೇಶಿಸಿದರು. ಮಹಾಪದ್ಮನು ಆ ಉಪದೇಶದಿಂದ ತತ್ವಗಳನ್ನು ಭಾವಿಸುತ್ತಾ ನಿರ್ವಿಣ್ಣನಾಗಿ ಸಂಸಾರಭೀರುಗಳಪ್ಪ ಸಾಸಿರ್ವರರಸುಮಕ್ಕಳ್ವೆರಸು ಜಿನದೀಕ್ಷೆಯಂ ಕೆಯ್ಕೊಂಡು ಗ್ರಾಮನಗರಾದಿಗಳಂ ವಿಹಾರಿಸುತ್ತುಂ ಷೋಡಶಭಾವನೆಗಳಿಂ ತೀರ್ಥಕರ ಪುಣ್ಯಮಂ ಕಟ್ಟಿ ತದಾರಾಧನವಿಧಿಯಿಂ ಮುಡಿಪಿ ಪ್ರಾಣತಕಲ್ಪದಲ್ಲಿ ದೇವನಾಗಿ ಸ್ವರ್ಗಸುಖವನ್ನನುಭವಿಸುತ್ತಿರ್ದನು.

ಅನ್ನೆಗಮಿತ್ತಲ್ ಜಂಬೂದ್ವೀಪದ ಭರತಖಂಡದಲ್ಲಿ ಕಾಶೀವಿಷಯವು ಸಕಲ ವಿಧವಾದ ಸುಖಕ್ಕೂ ತವರ್ಮನೆಯಾಗಿತ್ತು. ಆ ದೇಶವು ಯಾವ ಬಗೆಯಲ್ಲಿಯೂ ಭೋಗಭೂಮಿಗೆ ಕೀಳಾಗಿರಲಿಲ್ಲ. (೭-೧೮) ಅದರ ರಾಜಧಾನಿಯಾದ ಕಾಕಂದಿಪುರದ ಸೌಭಾಗ್ಯ ಸಂಪತ್ಸಮೃದ್ಧಿಗಳನ್ನು ಆದಿಶೇಷನಿಗೂ ಪೊಗಟಲಳವಲ್ಲ, (೧೯-೨೪) ಅಗಟ್ಟ್, ಪ್ರಾಕಾರಮುಂತಾದ ದುರ್ಗಗಳಿಂದ ಶತ್ರುಗಳಿಗೆ ಮನದಿಂದ ಪ್ರವೇಶಿಸುವುದಕ್ಕೂ ಸಾಧ್ಯವಿರಲಿಲ್ಲ. (೨೫-೩೨) ಅದನ್ನು ಸುಗ್ರೀವಭೂಪಾಲಕನು ಧರ್ಮದಿಂದ ಆಳುತ್ತಿದ್ದನು. ಅವನು ಅನಿವಾರ್ಯವೀರ್ಯನು, ವದಾನ್ಯಶಿರೋಮಣಿಯು, ರಿಪುಭಯಂಕರನು, ಶರಣಾಗತವಜ್ರಪಂಜರನು, ಇವನಿಗೆ ರೂಪವತಿಯೂ, ಗುಣವತಿಯೂ, ವಿನಯವತಿಯೂ ಆದ ಜಯರಾಮೆಯೆಂಬವಳು ಪಟ್ಟಮಹಿಷಿಯು, (೩೩-೪೭) ಇವರಿರ್ವರೂ ಸುಖಸಂಕಥಾ ವಿನೋದದಿಂದ ಸುಖವಾಗಿ ಕಾಲವನ್ನು ಕಳೆಯುತಿದ್ದರು (೪೮-೪೯).

ಒಂದುದಿವಸ ಸ್ವರ್ಗದಲ್ಲಿ ಸೌಧರ್ಮೇಂದ್ರನಿಗೆ ಆಸನ ಕಂಪವಾಯಿತು. ಆಗ ಪಾಕಶಾಸನನು ಓಹೋ! ಭರತಕ್ಷೇತ್ರದಲ್ಲಿ ತೀರ್ಥಕರನು ಅವತರಿಸುವನು! ಎಂಬುದನ್ನು ಜಲಕ್ಕನೆ ಅವಧಿಬೋಧದಿಂದ ತಿಳಿದು, ಕುಬೇರನನ್ನು ಕರೆದು "ಅಯ್ಯಾ ಮಿತ್ರನೇ, ಇನ್ನು ಆರು ತಿಂಗಳಲ್ಲಿ ಕಾಕಂದಿಯಲ್ಲಿ ತೀರ್ಥಕರನು ಅವತರಿಸುವನು. ನೀನು ಆ ನಗರದೊಳಗೆ ಪಂಚರನ್ನದ ಮಳೆಯನ್ನು ಸುರಿಸುವುದು" ಎಂದು ಅಪ್ಪಣೆಮಾಡಲು ಕುಬೇರನು ಇಂದ್ರನ ಬೆಸದಂತೆ ಮೂಱುವರೆಕೋಟಿಯಷ್ಟು ರತ್ನಗಳನ್ನು ಮಳೆಯಂತೆ ಕಾಕಂದಿಯಲ್ಲಿ ಸುರಿಸಿದನು. ಬಳಿಕ ಇಂದ್ರನು ಜಯರಾಮಾದೇವಿಯ ಗರ್ಭಶೋಧನ ಮೊದಲಾದ ಊಳಿಗಕ್ಕಾಗಿ ಕುಳಾಚಳಗಳಲ್ಲಿ ವಾಸಿಸುವ ಶ್ರೀ, ಹ್ರೀ, ಮೊದಲಾದ ಹಲವು ದೇವಿಯರನ್ನು ಕಳುಹಿಸಿಕೊಟ್ಟನು. ಅವರೆಲ್ಲರೂ ಒಟ್ಟಾಗಿಬಂದು ಜಯರಾಮಾದೇವಿಗೆ ನಮಸ್ಕರಿಸಿ ತಮ್ಮ ಬಂದ ಕೆಲಸವನ್ನು ನಿವೇದಿಸಿ, ಅನುಮತಿಯನ್ನುಪಡೆದು, ಆಡಪ, ಚಾಮರ ಮೊದಲಾದ ಎಲ್ಲಾ ಊಳಿಗದಲ್ಲೂ ವ್ಯಾಪೃತರಾಗಿರುತ್ತಾ ರಾಣಿಯನ್ನು ಸೇವಿಸುತ್ತಿದ್ದರು. (೫೦-೯೦)

ಒಂದು ಪುಣ್ಯದಿನದಲ್ಲಿ ಜಯರಾಮಾದೇವಿಯು ಚತುರ್ಥಸ್ನಾನವಂ ಮಿಂದು, ಬೆಳ್ವಸದನಂಗೊಂಡು ಭೂಪನ ಸೂಳಿಗ್ಗೆವಂದು ಸುಖಸುಪ್ತೆಯಾಗಿರ್ದು (೯೧-೯೭) ನಿಶಾವಸಾನದಲ್ಲಿ ಸಿಂಹ, ಆನೆ ಮೊದಲಾದ ಹದಿನಾರು ವಸ್ತುಗಳನ್ನು ಸ್ವಪ್ನದಲ್ಲಿ ಕಂಡು, ಒಡನೆಯೇ ಪ್ರಭಾತಶೀತಮಾರುತನಿಂದಲೂ, ವಂದಿಸ್ತುತಿಗಳಿಂದಲೂ ಎಚ್ಚತ್ತು, ಸ್ನಾನ ಮೊದಲಾದ ನಿತ್ಯಕೃತ್ಯಗಳನ್ನು ನಿರ್ವರ್ತಿಸಿ ಕೈಗೆಯ್ದು ಪರಿಜನಪರೀತೆಯಾಗಿ ಆಸ್ಥಾನಕ್ಕೆಬಂದು ಅರಸನ ಪಕ್ಕದ ಅರ್ಧಾಸನದಲ್ಲಿ ಕುಳಿತು ತನ್ನ ಕಂಡ ಕನಸೆಲ್ಲವನ್ನೂ ಮನಃಪ್ರಿಯನಲ್ಲಿ ಬಿನ್ನವಿಸಿದಳು. ಆ ಅರಸು ಅವಧಿ ಬೋಧದಿಂದ ಆ ಸ್ವಪ್ನಗಳ ಫಲವನ್ನರಿತು ಮನಃಪ್ರಿಯೆಯನ್ನು ನೋಡಿ, "ವಲ್ಲಭೇ ಈ ಸ್ವಪ್ನಫಲಗಳ ಹೆಚ್ಚು ವಿವರಣವು ಸಾಕು. ನಿನ್ನುದರದಲ್ಲಿ ತೀರ್ಥಕರನು ಅವತರಿಸುವನು" ಎನ್ನಲು ಆಕೆಯು ತುಂಬಾಸಂತಸಗೊಂಡು ತನ್ನಂತಃಪುರಕ್ಕೆ ಹಿಂದಿರುಗಿ ಬಂದು ಸುಖದಲ್ಲಿರ್ದ್ದಳು. (೯೭-೧೧೩)

ಅತ್ತ ಪ್ರಾಣತಕಲ್ಪದಲ್ಲಿ ದೇವನಾಗಿದ್ದ ಮಹಾಪದ್ಮಚರನು ತನ್ನ ಸ್ವರ್ಗಸುಖಾನುಭವ ಹೇತುವಾಗಿರ್ದ ಪುಣ್ಯವು ಕುಂದಲು, ಫಾಲ್ಗುಣಕೃಷ್ಣನವಮೀರಾತ್ರ್ಯಂತದಲ್ಲಿ ಮೂಲ ನಕ್ಷತ್ರದಲ್ಲಿ ಜಯರಾಮಾ ಮಹಾದೇವಿಯ ಗರ್ಭವನ್ನು ಪ್ರವೇಶಿಸಿದನು. ಜಯರಾಮಾದೇವಿಯ ಗರ್ಭವು ದಿನದಿನಕ್ಕೂ ಬಳೆಯುತ್ತಿದ್ದಿತು. ಸುಗ್ರೀವ ಮಹಾರಾಜನು ಅವಳು ಬಯಸಿದ ವಸ್ತುವು ಸ್ವರ್ಗದಲ್ಲಿದ್ದರೂ ಬಿಡದೆ ತರಿಸಿಕೊಟ್ಟು ಆಕೆಯ ಗರ್ಭಿಣೀದೋಹದವನ್ನು ಕೊರತೆಯಿಲ್ಲದೆ ನೆರವೇರಿಸುತ್ತಿದ್ದನೆಂಬಲ್ಲಿಗೆ.

ಒಂಭತ್ತನೆಯ ಆಶ್ವಾಸಂ
ಮುಗಿದುದು.

## ದಶಮಾಶ್ವಾಸಂ
(ದೇವಾಗಮವರ್ಣನಂ)

ಇಂತು ಪರಿಪೂರ್ಣಗರ್ಭೆಯಾದ ಜಯರಾಮಾದೇವಿಗೆ ನವಮಾಸವು ತುಂಬಲು ವ್ಯಂಜನನಮಾಸದಲ್ಲಿ,ಮಾರ್ಗಶಿರ ಬಹುಳ ದಶಮಿಯ ದಿವಸ, ತ್ರೈಲೋಕ್ಯನಾಥನಾದ ಜಿನನು ಆಕೆಯ ಗರ್ಭದಿಂದವತರಿಸಿದನು. ಆ ಸಮಯದಲ್ಲಿ ಪಂಚಭೂತಗಳೂ ಪ್ರಸನ್ನವಾಗಿದ್ದುವು. ದೇವತೆಗಳ ದುಂದುಭಿಧ್ವನಿ, ಪುಷ್ಪವರ್ಷ ಮೊದಲಾದ ಹಲವು ಮಹಾಪುರುಷಜನನ ಸೂಚಕವಾದ ಅದ್ಭುತಕಾರ್ಯಗಳು ಸಂಭವಿಸಿದುವು. (೧-೪) ಸೌಧರ್ಮೇಂದ್ರನು ತನ್ನ ಆಸನ ಕಂಪವಾಗಲು ಅವಧಿಜ್ಞಾನದಿಂದ ಭೂಲೋಕದಲ್ಲಿ ಜಿನನು ಅವತರಿಸಿರುವುದನ್ನು ತಿಳಿದು, ಸಂತುಷ್ಟನಾಗಿ ಚತುರ್ವಿಧಾಮರಸಂದೋಹದಿಂ ಕೂಡಿ ಕಾಕಂದಿಗೆ ಬಂದು, ಆ ನಗರದ ಹೊರಗಡೆಯಲ್ಲಿಯೇ ಪರಿವಾರದವರನ್ನು ನಿಲ್ಲಿಸಿ ಶಚಿಯೊಡಗೂಡಿ ಸುಗ್ರೀವರಾಜನ ರಾಜಭವನಕ್ಕೆ ಬಂದು ಸೂತಿಕಾಗೃಹದ ಬಾಗಿಲಲ್ಲಿ ನಿಂತು, ಮಗುವನ್ನೆತ್ತಿಕೊಂಡು ಬರುವಂತೆ ಬೆಸನಿತ್ತು ಶಚಿಯನ್ನು ಸೂತಿಕಾಗೃಹಕ್ಕೆ ಕಳುಹಿಸಲು ಆ ಶಚಿಯು ಸೂತಿಕಾಗೃಹವನ್ನು ಹೊಕ್ಕು ಆ ಜಿನಬಾಲನನ್ನು ತನ್ನ ಕೆಯ್ಗಳಲ್ಲಿ ಎತ್ತಿಕೊಂಡು ಆಕೆಯ ಮಗ್ಗುಲಲ್ಲಿ ಮಾಯಾ ಶಿಶುವೊಂದನ್ನು ಮಲಗಿಸಿ ಹೊರಗೆ ಬಂದು ಐರಾವತಸ್ಕಂಧಾಸೀನನಾಗಿದ್ದ ತನ್ನ ಪತಿಯ ಕೈಯಲ್ಲಿ ಕೊಟ್ಟಳು. (೫-೧೮) ಇಂದ್ರನು ಆ ಜಿನಶಿಶುವನ್ನು ಭಕ್ತಿಯಿಂದೆತ್ತಿಕೊಂಡು ತೊಡೆಯ ಮೇಲೆ ಮಲಗಿಸಿಕೊಂಡು ಆನಂದಸಾಗರದಲ್ಲಿ ಮುಳುಗಿದನು. ಈಶಾನೇಂದ್ರಸನತ್ಕುಮಾರಮಾಹೇಂದ್ರ ಕಲ್ಪೇಂದ್ರರು ತಮ್ಮತಮ್ಮ ಆನೆಗಳನ್ನು ಐರಾವತದ ಪಕ್ಕಕ್ಕೆ ಚಾಚಿದರು. ಈಶಾನೇಂದ್ರನು ಬೆಳ್ಗೊಡೆಯನ್ನು ಹಿಡಿದನು. ಸನತ್ಕುಮಾರಮಾಹೇಂದ್ರ ಕಲ್ಪಾಧಿಪತಿಗಳು ಚಾಮರಗಳನ್ನು ಬೀಸುತ್ತಿದ್ದರು. ಬ್ರಹ್ಮಬ್ರಹ್ಮೋತ್ತರ ಲಾಂತವ ಕಾಪಿಷ್ಠಕಲ್ಪಾಧಿಪತಿಗಳು ಕುಂಚವನ್ನಿಕ್ಕಿದರು. ಉಳಿದ

ಶುಕ್ರ ಮಹಾಶುಕ್ರ ಮೊದಲಾದ ಕಲ್ಪಪತಿಗಳೊಂಬದಿಂಬರುಂ ಅಖಿಳಪಾಳಿ ಧ್ವಜಗಳನ್ನು ಹಿಡಿದರು. ಇಂತು ಸಕಲವೈಭವದೊಡನೆ (೧೯-೨೬) ಇಂದ್ರನು ಜಿನನ ಜನ್ಮಾಭಿಷೇಕಕಲ್ಯಾಣವನ್ನು ನೆರವೇರಿಸಲು ಮಂದರಾಭಿಮುಖನಾದನು ಸಾರ್ಧ ಸಪ್ತಕೋಟಿ ದೇವಭೇರಿಗಳು ಮೊಳಗಿದುವು. ಇಂದ್ರನ ಸನ್ನೆಯನ್ನರಿದು ದೇವತೆಗಳೆಲ್ಲರೂ ಹಾರಿಗೊಂಡು ತಂತಮ್ಮ ವಿಮಾನಂಗಳಲ್ಲಿ ಕುಳಿತು ಮಂದರಾಭಿಮುಖವಾಗಿ ಹೊರಟರು. ಆ ದೇವಾಗಮನವು ತುಂಬಾ ರಮಣೀಯವಾಗಿತ್ತು. ಆಗ ಐರಾವತವು ವಿಗುರ್ವಣದಿಂದ ಅದ್ಭುತವಾದ ರೂಪವನ್ನುತಾಳಿ ಹೊರಟಿತು. (೨೭-೪೫) [ಅದಕ್ಕೆ ಮೂವತ್ತೆರಡು ಮುಖಗಳು. ಒಂದೊಂದು ಮುಖಕ್ಕೂ ಕೊಂಬುಗಳೆಂಟೆಂಟು, ಒಂದೊಂದು ಕೊಂಬಿನಲ್ಲೂ ಎರಡೆರಡು ಕೊಳಗಳು. ಒಂದೊಂದು ಕೊಳದಲ್ಲಿಯೂ ಅರಲ್ದ ಕಮಲಗಳು ಮೂವತ್ತೆರಡು. ಒಂದೊಂದು ಕಮಲಕ್ಕೂ ದಳಗಳು ಮೂವತ್ತೆರಡು, ಒಂದೊಂದು ದಳದಮೇಲೂ ನರ್ತಿಸುವ ಅಪ್ಸರಸ್ತ್ರೀಯರು ಮೂವತ್ತೆರಡುಮಂದಿ ಅವರು ಆ ಎಸಳ್ಗಳನ್ನು ಮೆಟ್ಟದೆಯೇ ನರ್ತಿಸುತ್ತಿರುವರು.] (೪೫-೫೮) ಇಂತು ದೇವತೆಗಳು ಬರೆ ಬರೆ ಮಂದರಗಿರಿಯು ಮುಂದೆ ಕಣ್ಗೆ ಗೋಚರಿಸಿತು. ಇಂದ್ರನು ಅದರ ಪ್ರಕೃತಿ ಸೌಂದರ್ಯವನ್ನು ಶಚಿಗೆ ತೋರಿಸಿ ವರ್ಣಿಸುತ್ತಾ (೪೬-೬೫) ಬಂದು ಮಂದರಗಿರಿಯನ್ನು ಪ್ರದಕ್ಷಿಣ ನಮಸ್ಕಾರಂಗಳಿಂದರ್ಚಿಸಿ ದೇವತಾಪರಿವಾರದೊಡನೆ ಮೇಲಕ್ಕೆ ಏರಿದನು. ಭದ್ರಶಾಲ, ನಂದನ ಸೌಮನಸ, ಪಾಂಡುಕವೆಂಬ ಪೂರ್ವಾದಿಯಾಗಿ ನಾಲ್ಕುದಿಕ್ಕಿನ ಮೇಖಲೆಗಳನ್ನು ತೊಲಿಲ್ದು ಪಾಂಡುಕವನದ ಪೂರ್ವದಿಗ್ಭಾಗದಲ್ಲಿ ಪಳಚ್ಚನೆಸೆವ ಅರ್ಧಚಂದ್ರಾಕೃತಿಯ ಪಾಂಡುಕಶಿಲಾತಳವನ್ನು ಮುಟ್ಟಿವಂದು (೬೬-೭೩) ಆ ಕಲ್ಲಿನಮೇಲೆ ಅಭಿಷವಮಂಡಪವನ್ನು ಕುಬೇರನಿಂದ ನಿರ್ಮಾಪಿಸಿ ಅದರ ಮಧ್ಯದಲ್ಲಿ ಜಿನಶಿಶುವನ್ನು ಪೂರ್ವಾಭಿಮುಖವಾಗಿ ಮಲಗಿಸಿದನು. ಎಲ್ಲ ದಿಕ್ಪಾಲಕರೂ ತಂತಮ್ಮ ವಾಹನಾಯುಧ ಕಾಂತಾಪರಿಜನ ಪ್ರಸಾಧನಚಿಹ್ನಾನಂತ ವಿಭೂತಿಗಳಿಂದ ಉಚಿತಪ್ರದೇಶಗಳಲ್ಲಿ ನಿಂತರು. ಇಂದ್ರಾಣಿಯು ಮಂಗಳ ವಸ್ತುಗಳೆಲ್ಲವನ್ನೂ ಪಸರಿಸುತ್ತಿದ್ದಳು. ಇತರ ದೇವಿಯರೂ ಆ ಕಾರ್ಯದಲ್ಲಿ ಸಹಾಯಮಾಡುತ್ತಿದ್ದರು (೭೪-೮೬) ದೇವತೆಗಳೆಲ್ಲರೂ ಅಷ್ಟಯೋಜನಾವಗಾಹದ ಅಷ್ಟಕೋಣಗಳಿಂದ ಶೋಭಿಸುವ ನವರತ್ನಗಳ ಕೊಡೆಗಳನ್ನು ಹಿಡಿದುಕೊಂಡು ಕ್ಷೀರ ಸಮುದ್ರದವರೆಗೂ ಎರಡು ವರಸೆಯಾಗಿ ನಿಂತರು. ಕಾಳಾಗುರುವಿನ ಧೂಪದಹೊಗೆಯು ಆ ಮಂಟಪವನ್ನೆಲ್ಲಾ ಆವರಿಸಿ ದಿಗಂತಗಳನ್ನೂ ಮುಟ್ಟುತ್ತಿತ್ತು. ಇಂದ್ರನು, ಗಂಧಾಕ್ಷತಪುಷ್ಪಗಳಿಂದ ಜಿನನಾಥನಿಗ ಅರ್ಘ್ಯೋದ್ಧರಣೋಚಿತ ಕ್ರಿಯೆಯನ್ನು ನೆರವೇರಿಸಿದನೆಂಬಲ್ಲಿಗೆ

ದಶಮಾಶ್ವಾಸಂ

ಮುಗಿದುದು.

## ಏಕಾದಶಾಶ್ವಾಸಂ

(ಜನ್ಮಾಭಿಷೇಕೋತ್ಸವ ವರ್ಣನಂ)

ಅನಂತರದಲ್ಲಿ ಪ್ರಥಮದ್ವಿತೀಯ ಕಲ್ಪಾಮರೇಂದ್ರರ್ ಸರ್ವಜ್ಞನ ಉಭಯಪಾರ್ಶ್ವಂಗಳಲ್ಲಿಯುಂ ಉತ್ತರದಕ್ಷಿಣಾಭಿಮುಖರುಂ, ಸಜ್ಜೀಕೃತಮಜ್ಜನೋಪಕರಣರುಮಾಗಿ ಮಜ್ಜನಂಗೆಯ್ಯಲುಜ್ಜುಗಿಸಿದರ್. ಹಲವು ದೇವವಾದ್ಯಗಳು ಭೋರ್ಗರೆಯುತ್ತಿದ್ದುವು. ದೇವತೆಗಳೆಲ್ಲರೂ ನೊಸಲಲ್ಲಿ ಕೆಯ್ಗಳನ್ನುಮುಗಿದು ಜಯಜಯಧ್ವನಿಯನ್ನು ಮಾಡಿದರು. ಇಂದ್ರನು ಪದ್ಮಾದಿಸರೋವರಗಳ ನೀರಿನಿಂದ ಮೊದಲು ಅಭಿಷೇಕಮಾಡಿದನು. ಕ್ರಮಕ್ರಮವಾಗಿ ಎಳನೀರು, ಕಬ್ಬಿನರಸ, ಮಾವಿನಹಣ್ಣಿನರಸ ಇವುಗಳ ಅಭಿಷೇಕವೂ ನಡೆಯಿತು. ಬಳಿಕ ಇಂದ್ರನು ಕ್ಷೀರಸಮುದ್ರದವರೆಗೂ ಗೋಡೆಕಟ್ಟಿದಂತೆ ವರಸೆಯಾಗಿ ನಿಂತು ನೀರನ್ನು ನವರತ್ನಘಟಗಳಿಂದ ಮೊಗೆದು ದೇವತೆಗಳು ನೀಡುತ್ತಿರಲು

(೧-೩೦) ವಿಗುರ್ವಣರೂಪದಿಂದೆ ಸಾವಿರಾರು ತೋಳುಗಳನ್ನು ಪಡೆದು ಆ ಗಡಿಗೆಗಳೆಲ್ಲವನ್ನೂ ತೆಗೆದು ಕೊಂಡು ಜಿನಶಿಶುವಿಗೆ ಅಭಿಷೇಕಮಾಡಿದನು. ಜಿನಶಿಶುವು ತನ್ನಮೇಲೆ ನಿರಂತರವಾಗಿ ಸುರಿಯುತ್ತಿದ್ದ ನೀರಿನಿಂದ ಉಸಿರುಕಟ್ಟಿ ಒಂದಾವೃತ್ತಿಸೀನಲು ದೇವವಿಮಾನ ಕೋಟಗಳೆಲ್ಲವೂ ದಿಕ್ಕುಪಾಲಾಗಿ ಚೆದರಿಹೋದುವು. ಕ್ಷೀರಾಭಿಷೇಕಕಾರ್ಯವು ಮುಗಿದ ಬಳಿಕ ಗಂಧೋದಕಸ್ನಾನವನ್ನು ಮಾಡಿಸಲು (೩೦-೪೬) ಆ ಗಂಧೋದಕ ವ್ಯಾಪನೆಯಿಂದ ಆ ದೇವತೆಗಳಿರಲಿ ಆ ಬೆಟ್ಟದ ಕಲ್ಮರಗಿಡುಬಳ್ಳಿಗಳೆಲ್ಲವೂ ಪವಿತ್ರವಾದುವು (೪೬-೫೦) ಇಂತು ಇಂದ್ರನು ಜನ್ಮಾಭಿಷೇಕವನ್ನು ಕ್ರಮವಾಗಿ ನಿರ್ವರ್ತಿಸಿ, ಅಕ್ಷತಾದ್ಯಷ್ಟವಿಧಾರ್ಚನಂಗಳನ್ನು ಮಾಡಿ ವಸ್ತುಗುಣರೂಪಸ್ತವಗಳಿಂದ ಸ್ತುತಿಯಿಸಿ, ಮೆಯ್ಯನ್ನು ಒಣಗಿದ ವಸ್ತ್ರದಿಂ ಮೊರಸಿ (೫೧-೫೯) ನೀರಾಜನವನ್ನು ಸಮರ್ಪಿಸಿದನು. (೬೦) ಬಳಿಕ ಶಚಿಯು ಜಿನಶಿಶುವನ್ನು ಕೆಯ್ಗಳಿಂದ ಹಿಡಿದೆತ್ತಿ ತನ್ನ ತೊಡೆಯಲ್ಲಿ ಮಲಗಿಸಿಕೊಂಡು ಮೆಯ್ಗೆ ಸುಗಂಧವನ್ನು ಲೇಪಿಸಿ, ಅನರ್ಘ್ಯವಾದ ನವರತ್ನದಾಭರಣಗಳನ್ನು ತೊಡಿಸಿದಳು. ಇಂತಲಂಕೃತನಾಗಿ ಶೋಭಿಸುವ ಜಿನ ಶಿಶುವನ್ನು ಇಂದ್ರನು ತನ್ನ ಸಾವಿರ ಕಣ್ಣುಗಳಿಂದಲೂ ನೋಡಿನೋಡಿ ತೃಪ್ತಿಯನ್ನೇ ಪಡೆಯಲಿಲ್ಲ (೬೦-೬೫) ಮೆಂಬಲ್ಲಿಗೆ

ಪನ್ನೊಂದನೆಯ ಆಶ್ವಾಸಂ
ಮುಗಿದುದು.

## ದ್ವಾದಶಾಶ್ವಾಸಂ

(ಕುಮಾರಪರಿಣಯನೋತ್ಸವ ವರ್ಣನಂ)

ಅಂತು ದೇವೇಂದ್ರನು ಜನ್ಮಾಭಿಷೇಕೋತ್ಸವವನ್ನು ಸಾಂಗವಾಗಿ ನೆರವೇರಿಸಿ, ಐರಾವತವನ್ನು ಏಱಿ, ಸಕಲ ದೇವತೆಗಳಿಂದಲೂ ಪರಿವೃತನಾಗಿ ದಕ್ಷಿಣಾಭಿಮುಖವಾಗಿ ಪ್ರಯಾಣ ಹೊರಟು ಕಾಕಂದೀನಗರವನ್ನು ಬಂದು ಸೇರಿ ಮುನ್ನಮೆ ನಿರ್ಮಿತವಾಗಿರ್ದ ಮಣಿಮಂಟಪಮಧ್ಯದಲ್ಲಿ ತೊಳಗುವ ಸಿಂಹಾಸನದಮೇಲೆ ಆ ಶಿಶುವನ್ನು ಇರಿಸಿ, ಅಕ್ಕಪಕ್ಕಗಳಲ್ಲಿ ಉಚಿತಾಸನಗಳಲ್ಲಿ ದಿಕ್ಪಾಲರೊಡನೆ ಕುಳಿತುಕೊಂಡಿದ್ದನು. ಸುಗ್ರೀವಮಹಾರಾಜನು ತನ್ನ ಪಟ್ಟಮಹಿಷಿಯೊಡಗೂಡಿ ಪುತ್ರಮುಖಾವಲೋಕನೋತ್ಸುಕನಾಗಿ ಅಲ್ಲಿಗೆ ಬಂದು ಎರಡನೆಯ ದಿವಿಜರಾಜನಂತ ಸಮುಚಿತವಾದ ಆಸನದಲ್ಲಿ ಕುಳಿತನು. (೧-೭) ಆಗ ಇಂದ್ರನು ಸುಗ್ರೀವಮಹಾರಾಜನನ್ನು ನೋಡಿ, ಮಹಾತ್ಮನೇ, ತ್ರೈಲೋಕ್ಯಾಧೀಶನಾದ ಈ ಜಿನನು ನಿನಗೆ ಮಗನಾಗಿರುವನು. ನಾನು ಈತನ ಜನ್ಮಾಭಿಷೇಕವನ್ನು ಮಂದರಗಿರಿಯಲ್ಲಿ ನಿರ್ವರ್ತಿಸಿ ಕೃತಾರ್ಥನಾಗಿ ಮತ್ತೆ ತಂದು ಇಲ್ಲಿ ಬಿಟ್ಟಿರುವೆನು. ನೀವು ಭುವನತ್ರಯ ಗುರುವಿಗೂ ಗುರುಗಳಾದುದರಿಂದ ನಿಮ್ಮಂತಹ ಧನ್ಯರು ಮತ್ತಾರಿರುವರು! ಎಂದು ವಿನಯೋಕ್ತಿಗಳನ್ನಾಡಿ ಅವರನ್ನು ಉಚಿತ ದ್ರವ್ಯಗಳಿಂದ ಪೂಜಿಸಿದನು. ಸುರಜನರೂ ಪುರಜನರೂ ಪರಮಾನಂದ ಪರವಶೀಭೂತರಾಗಿರಲು ಅರಸನು ಜಾತಕರ್ಮೋತ್ಸವಕಲ್ಯಾಣದೊಸಗೆಯನ್ನು ಮಾಡಿಸಿದನು. (೮-೧೫) ನಗರವೆಲ್ಲವೂ ಧ್ವಜಪತಾಕಾದಿಗಳಿಂದ ಅಲಂಕೃತವಾಗಿ ಶೋಭಿಸುತ್ತಿತ್ತು. ಆ ಮಹೋತ್ಸವದಲ್ಲಿ ಇಂದ್ರನ ಬೆಸದಿಂದ ಕಲ್ಪಾಮರಮುಖರಿಗಳು ಮೇಲಾಗಿ ಹಾಡಿದರು. ದಿವಿಜೇಂದ್ರವಾದಕರು ವಾದ್ಯಗಳನ್ನು ಬಾಜಿಸಿದರು (೧೬-೨೭) ಇಂತಾ ದೇವಸಂಗೀತವು ತುಂಬಾಮನೋಹರವಾಗಿತ್ತು.

ಈ ಸಂದರ್ಭದಲ್ಲಿ ಇಂದ್ರನು ಪುಷ್ಪಾಂಜಲಿಯನ್ನು ಚೆಲ್ಲಿ ರಂಗಂಬೊಕ್ಕು ಆರಭಟೀವೃತ್ತಿಯಿಂದ ತಾಂಡವವನ್ನು ಆರಂಭಿಸಿದನು. (೨೮-೪೦) ಊರ್ವಶಿ ಮೊದಲಾದ ಅಚ್ಚರಿಯರೂ ನಾಟ್ಯವಾಡಿದರು. ಇಂತು ಲಾಸ್ಯತಾಂಡವಗಳು ನೋಟಕರ ಕಣ್ಮನಗಳನ್ನು ಆಕರ್ಷಿಸುತ್ತಿತ್ತು. (೪೦-೪೪)

ಕೆಲವುಮಂದಿ ಅಚ್ಚರಿಯರೂ ದೇವಕುಮಾರರೂ ಇಂದ್ರನ ಅಂಗೈ, ತೋಳು, ಉಗುರುಗಳು ಇವುಗಳ ಮೇಲೆ ನಿಂತು ನಾಟ್ಯವಾಡಿದರು. (೪೫-೪೬) ಇಂದ್ರನ ಈ ಆನಂದ ನೃತ್ಯವು ಬ್ರಹ್ಮಾಂಡವೆಲ್ಲವನ್ನೂ ವ್ಯಾಪಿಸಿತು. ಸಭೆಯೆಲ್ಲವೂ ನಾಟ್ಯರಸಾಮೃತಪೂರದಲ್ಲಿ ತೇಂಕಾಡುತ್ತಿತ್ತು. ಇಂತು ಇಂದ್ರನು ತನ್ನ ನರ್ತನವು ಮುಗಿದ ಬಳಿಕ (೪೬-೫೦) ನಾಮಕರಣ ಮಹೋತ್ಸವ ಸಮಯದಲ್ಲಿ ವಿತತಪುಣ್ಯೋದಯವುಳ್ಳವನೂ, ಕುವಲಯಕಮಲೋತ್ಸವಕರನೂ ಆದ ಈ ಜಿನಕುಮಾರನಿಗೆ ಸುವಿಧಿ, ಪುಷ್ಪದಂತ ಎಂಬ ಅನ್ವರ್ಥವಾದ ಹೆಸರನ್ನಿಟ್ಟು, (೫೩) ಹಲವು ಮಂದಿ ದೇವತೆಗಳಾದ ದಾದಿಯರನ್ನು ಈ ಜಿನಶಿಶುವಿನ ಪೋಷಣೆಗೆ ನಿಯಮಿಸಿ, ಓರಗೆಯ ಹಲವು ದೇವಕುಮಾರರನ್ನು ಜಿನಶಿಶುವಿನ ಆಟದ ಗೆಳೆಯರಾಗಿರುವಂತೆ ಬೆಸಸಿ ಕೃತಾರ್ಥನಾಗಿ ತನ್ನ ಕಲ್ಪಕ್ಕೆ ಪ್ರಯಾಣ ಬೆಳೆಸಿದನು. (೫೩-೫೭) ಇತ್ತ ಜಿನಾರ್ಭಕನು ಏಟಿಗ್ಗಿವಾಡಿವದ ತಿಂಗಳಂತೆ ದಿನದಿನಕ್ಕೂ ತೇಜೋವಿಶೇಷವನ್ನು ಪಡೆದು ಬೆಳೆಯುತ್ತಿದ್ದನು. ಜಿನಾರ್ಭಕನ ಅತಿಶಯವಾದ ಬಾಲಕೇಳಿಗಳು ತಂದೆತಾಯ್ವಿರಿಗೆ ಅಧಿಕವಾದ ಸಂತೋಷವನ್ನುಂಟುಮಾಡಿದುವು. (೫೮-೬೭) ಅಂತು ಜಿನಕುಮಾರನು ತನ್ನ ಬಾಲ್ಯಕಾಲವನ್ನು ಕಳೆದು ಕೌಮಾರಕಾಲದಲ್ಲಿ ಸಕಳವಿದ್ಯಾವಿಳಾಸ ಭವನನಾದನು. ಕ್ಷತ್ರಿಯೋಚಿತವಾದ ವಾಹನಾದಿಗಳನ್ನು ಏರುವುದು, ಅಸ್ತ್ರಶಸ್ತ್ರಗಳನ್ನು ಪ್ರಯೋಗಿಸುವುದು ಮೊದಲಾದ ವೀರವಿದ್ಯೆಗಳಲ್ಲಿಯೂ ಈ ಜಿನಕುಮಾರನು ಅದ್ವಿತೀಯನಾದನು. ದೇವಸ್ತ್ರೀಯರೂ, ದೇವಕುವರರೂ ಅತ್ಯಂತ ಭಕ್ತಿವಿನಯ ಪ್ರೀತಿಗಳಿಂದ ಜಿನಕುಮಾರನನ್ನು ಓಲಗಿಸುತ್ತಿದ್ದರು, (೬೭-೭೫) ಈ ಜಿನಕುಮಾರನ ಚರಮದೇಹವು ಅತ್ಯುತ್ತಮವಾದ ಲಕ್ಷಣಗಳಿಂದ ಕೂಡಿ ಚಂದ್ರಬಿಂಬದಂತೆ ತೊಳಗುತ್ತಿತ್ತು (೭೬-೮೦) ಬಳಿಕ ಕೌಮಾರಕಾಲವು ಕಳೆದಬಳಿಕ ಯೌವನಕಾಲವು ಪ್ರಾಪ್ತವಾಯಿತು. ಸುಗ್ರೀವಮಹಾರಾಜನು ಮಗನ ಯೌವನವನ್ನು ನೋಡಿ ವಂಶಾಭಿವೃದ್ಧಿಗಾಗಿ ಆತನಿಗೆ ಮದುವೆಯನ್ನು ಮಾಡಬೇಕೆಂಬ ಸಂಕಲ್ಪದಿಂದ ತನ್ನ ಹೆಂಡತಿಯೊಡನೆ ಈ ವಿಷಯವನ್ನಾಲೋಚಿಸಿ ಮಗನ ಹತ್ತಿರಬಂದು ಕುಳಿತು ಭಯಭಕ್ತಿಗಳಿಂದ ಕನ್ಯಾವರಣ ವಿಷಯವನ್ನು ತಿಳಿಸಿ ನಗೆಮೊಗದಿಂದ ಆತನ ಅನುಮತಿಯನ್ನು ಪಡೆದಂತಾಗಿ ಮಂತ್ರಿಗಳಿಗೆ ಈ ವಿಚಾರವನ್ನು ತಿಳಿಸಿ, ಮದುವೆಗೆ ತಕ್ಕ ಸಾಮಗ್ರಿಗಳನ್ನು ಅಣಿಮಾಡಿ ಕುಲೀನೆಯರಾದ ಸಾವಿರಮಂದಿ ಕ್ಷತ್ರಿಯ ಕುಮಾರಿಯರನ್ನು ತಂದು ಶುಭಲಗ್ನದಲ್ಲಿ ವಿವಾಹ ಮಂಗಳೋತ್ಸವವನ್ನು ನೆರವೇರಿಸಿದನು. (೮೦-೮೬) ಇಂದ್ರಾದಿಗಳೆಲ್ಲರೂ ಬಂದು ಈ ಉತ್ಸವವನ್ನು ಸ್ವಲ್ಪವೂ ಕೊರತೆಯಿಲ್ಲದಂತೆ ನಡೆಯಿಸಿದರು. ಸುವಿಧಿಕುಮಾರನು ನವವಧುಗಳೊಡವೆರೆದು ಸುಖವಾಗಿರುತ್ತಿದ್ದನು. (೮೭-೧೧೩) ಸುಗ್ರೀವ ಮಹಾರಾಜನು ಒಂದು ದಿವಸ ಪ್ರಾಪ್ತಯೌವನನೂ, ಕೃತದಾರಪರಿಗ್ರಹನೂ ಆದ ಸುವಿಧಿಕುಮಾರನಿಗೆ ಒಳ್ಳೆಯ ಮುಹೂರ್ತದಲ್ಲಿ ರಾಜ್ಯಾಭಿಷೇಕ ಮಹೋತ್ಸವವನ್ನು ನಡೆಸಿದ (೧೧೪) ನೆಂಬಲ್ಲಿಗೆ

ಪನ್ನೆರಡನೆಯ ಆಶ್ವಾಸಂ

ಮುಗಿದುದು.

## ತ್ರಯೋದಶಾಶ್ವಾಸಂ

(ಪರಿನಿಷ್ಕ್ರಮಣ ಕಲ್ಯಾಣವರ್ಣನಂ)

ಪುಷ್ಪದಂತ ಮಹಾರಾಜನು ತಂದೆಯಿತ್ತ ರಾಜ್ಯಭಾರವನ್ನು ವಿಧಿಯಿಲ್ಲದೆ ತಳೆದು ಶತ್ರುನಿಗ್ರಹ ಶಿಷ್ಟಪರಿಪಾಲನಕ್ರಮದಿಂದ ಧರ್ಮಮಾರ್ಗದಲ್ಲಿ ರಾಜ್ಯವನ್ನಾಳಲಾರಂಭಿಸಿದನು. (೧-೭) ಆತನ ಸಾವಿರಪತ್ನಿಯರಲ್ಲಿ ಚಂದ್ರಿಳಪುರಾಧಿಪ ಸಿಂಹರಥರಾಜನ ಮಗಳು ರೂಪ ವಿಭ್ರಮ ವಿಲಾಸ

ಗುಣಾನ್ವಿತೆಯಾದ ಚಂದ್ರಿಕಾದೇವಿಯು ಪಟ್ಟಮಹಿಷಿಯಾಗಿದ್ದಳು. ಇಂತು ಕೆಲಕಾಲವು ಕಳೆಯಲು ಚಂದ್ರಿಕಾದೇವಿಯು ಗರ್ಭವನ್ನು ಧರಿಸಿ ಕೀರ್ತಿಧರನೆಂಬ ಸುಕುಮಾರನನ್ನು ಪಡೆದಳು. (೮-೧೦) ಬಳಿಕ ಮಲಯಮಾನಿಲೆ, ಮದನಲತೆ, ಮಹಾನಂದೆ, ಜಯನಂದೆ, ಚಿತ್ರಲೇಖೆ, ಕನಕಲತೆ ಮೊದಲಾದ ಕೆಲವುಮಂದಿ ಪ್ರಸಿದ್ಧೆಯರಾದ ಅರಸಿಯರು ನರದೇವ, ಇಂದ್ರವರ್ಮ, ಹರಿಷೇಣ, ವಿಜಯ, ಅಶನಿಘೋಷ ಅನಂತ, ವರುಣ, ಅಜಬಾಹು, ಸಂಜಯ, ನಿರನುಪಪ್ರಾಣ, ಜಯ ಮೊದಲಾದ ಹಲವು ವೀರಸುತರನ್ನು ಪಡೆದರು. ದ್ವಿಗುಣಿಸಿದ ಚತುರ್ವಿಂಶತಿ ತೀರ್ಥಕರರಂತೆ ಈ ನಾಲ್ವತ್ತೆಣ್ಟರು ಕುಮಾರರೂ ಪ್ರಸಿದ್ಧರಾಗಿದ್ದರು. (೮-೧೨) ಇವರಲ್ಲಿ ಹಿರಿಯವನಾದ ಕೀರ್ತಿಧರನು ಯುವರಾಜ ಪಟ್ಟವನ್ನು ಪಡೆದನು. (೧೩-೧೫) ಇಂತು ಸುಖದಿಂದ ರಾಜ್ಯಭಾರಂಗೆಯ್ಯುತ್ತಿರ್ದ ಸುವಿಧಿಜಿನನಿಗೆ ಅಯ್ವತ್ತುಸಾವಿರ ಪೂರ್ವದೊಡನೆ ಇಪ್ಪತ್ತಯ್ದು ಪೂರ್ವಾಂಗಕಾಲವು ಕಳೆಯಿತು. (೧೬) ಆ ಕಾಲಕ್ಕೆ ಸರಿಯಾಗಿ ನಿದಾಘಕಾಲವು ಪ್ರಾಪ್ತವಾಯಿತು. ಸುವಿಧಿರಾಜನು ಉಪವನವಿಹಾರ ಶಿಶಿರಕೇಳೀಲೀಲೆಯಿಂದ ತತ್ಕಾಲೋಚಿತ ಕ್ರಿಯೆಗಳನ್ನಾಚರಿಸುತ್ತಿದ್ದನು. ಒಂದುದಿವಸ ಸೂರ್ಯಾಸ್ತಕಾಲದಲ್ಲಿ ಅರಸನು ಆಸ್ಥಾನವನ್ನು ವಿಸರ್ಜಿಸಿ ಚಂದ್ರಶಾಲೆಯನ್ನುಸೇರಿ ತತ್ಕಾಲದಲ್ಲಿ ಉದಯಿಸಿ ವಿಜೃಂಭಿಸುತ್ತಿರುವ ಚಂದ್ರಬಿಂಬದ ರಾಮಣೀಯಕವನ್ನು ನೋಡುತ್ತಾ ಅಭಿನಂದಿಸುತ್ತಿರಲು ಆಕಾಶದಿಂದ ಒಂದು ಉಳ್ಕೆಯು ಭೋಂಕನೆ ನೆಲದಲ್ಲಿ ಬಿದ್ದಿತು. (೧೭-೨೬) ಅರಸನು ಅದನ್ನುನೋಡಿ ಸಂಸಾರರಾಜ್ಯ ಸಂಪತ್ತುಗಳಲ್ಲಿ ನಿರ್ವೇದಪರನಾಗಿ, (೨೭-೪೩) ದ್ವಾದಶಾನುಪ್ರೇಕ್ಷೆಗಳನ್ನು ಕ್ರಮವಾಗಿ ಸ್ಮೃತಿಪಥಕ್ಕೆ ತಂದು ನಿದ್ರಾಹೀನನಾಗಿ ಚಿಂತಿಸುತ್ತಿರಲು (೪೪) ಪ್ರಭಾತ ಶೀತ ಮಾರುತವು ಬೀಸಲಾರಂಭಿಸಿತು. (೪೮) ಕ್ರಮವಾಗಿ ಚಂದ್ರನು ಕಳೆಗುಂದಲು ಸೂರ್ಯನು ಉದಯಿಸಿದನು. (೪೯-೬೦) ಆ ಸಮಯದಲ್ಲಿ ಬ್ರಹ್ಮಲೋಕಾಂತದಿಂದ ಸಾರಸ್ವತಾದಿ ಎಂಟುಮಂದಿ ಲೋಕಾಂತಿಕ ದೇವರು ಬಂದು ಸುವಿಧಿಮಹಾರಾಜನಿಗೆ ರಾಜ್ಯಭೋಗಗಳನ್ನು ತ್ಯಜಿಸಿ ವಿರಕ್ತನಾಗಿ ಜಿನದೀಕ್ಷೆಯನ್ನು ತೆಗೆದುಕೊಳ್ಳುವ ವಿಷಯವನ್ನು ಎಚ್ಚರಿಸಿ ತಮ್ಮ ಲೋಕಗಳಿಗೆ ತೆರಳಿದರು. (೬೨-೭೧) ಬಳಿಕ ಜಿನದೀಕ್ಷೆಯನ್ನು ಸ್ವೀಕರಿಸಲು ಕೃತಸಂಕಲ್ಪನಾದ ಸುವಿಧಿಯು ತನ್ನ ಹಿರಿಯಮಗನೂ, ಯುವರಾಜನೂ ಆಗಿದ್ದ ಕೀರ್ತಿಧರನಲ್ಲಿ ರಾಜ್ಯಭಾರವನ್ನಿರಿಸಿ ಪರಿನಿಷ್ಕ್ರಮಣಕ್ಕೆ ಸಿದ್ಧನಾದನು. (೭೨-೭೬) ಈ ವಿಷಯವನ್ನು ಆಸನಕಂಪದಿಂದ ಅರಿದ ಇಂದ್ರನು ಬಂದು, ಹಿಂದೆ ಮಂದರದಲ್ಲಿ ಜನ್ಮಾಭಿಷೆಕವನ್ನು ಮಾಡಿದಂತೆ ಇಂದು ಅರಮನೆಯಲ್ಲಿಯೇ ಪರಿನಿಷ್ಕ್ರಮಣಾಭಿಷೇಕಮಹೋತ್ಸವವನ್ನು ನೆರವೇರಿಸಿದನು. (೭೭-೮೦) ಇಷ್ಟರಲ್ಲಿಯೇ ಸೂರ್ಯಪ್ರಭವೆಂಬ ದಿವ್ಯ ಸಿವಿಗೆಯು ಸಿದ್ಧವಾಗಿ ಬಂದು ನಿಂತಿತು. ಸುವಿಧಿಜಿನನು ಸಿಂಹಾಸನದಿಂದಿಳಿದು ಸಿವಿಗೆಯನ್ನೇರಿದನು. ಮೊದಲು ಅರಸರು ಏಳಡಿಯವರೆಗೂ ಆ ವಿಮಾನವನ್ನು ಹೊತ್ತುಕೊಂಡೊಯ್ದರು. ಬಳಿಕ ನಭದಲ್ಲಿ ಏಳಡಿಯನ್ನು ಅಂಬರಚರರೂ, ಮತ್ತೆ ಏಳಡಿಯನ್ನು ಸುರಾಸುರರೂ, ಮುಂದೆ ಏಳಡಿಯನ್ನು ಇಂದ್ರರೂ ಹೊತ್ತು ಮುಂದುವರಿದರು. ಆ ಪುರಕ್ಕೆ ಸಮೀಪದಲ್ಲಿದ್ದ ಪುಷ್ಪಕೋದ್ಯಾನದಲ್ಲಿ ಸಿವಿಗೆಯನ್ನು ಇಂದ್ರರು ತಂದಿಳಿಸಿದರು. (೮೦-೮೭) ನಗರದಲ್ಲಿ ಪೌರರೂ, ಬಂಧುಜನಗಳೂ ಅರಸನ ವಿಯೋಗವನ್ನು ಸಹಿಸಲಾರದೆ ಹಲವು ಬಗೆಯಲ್ಲಿ ಹಂಬಲಿಸುತ್ತಿದ್ದರು. ರಾಣೀವಾಸದವರೆಲ್ಲರೂ ಅತ್ಯಧಿಕವಾದ ವಿರಹತಾಪದಿಂದ ದುಃಖಸಾಗರದಲ್ಲಿ ಮುಳುಗಿ ಹಲವು ಬಗೆಯಲ್ಲಿ ಹಂಬಲಿಸುತ್ತಿರುವುದನ್ನು ಕಂಡು ಸೌವಿದಲ್ಲರು ಅವರನ್ನು ಉಚಿತೋಕ್ತಿಗಳಿಂದ ಸಮಾಧಾನಮಾಡಿದರು. (೮೮-೧೦೧) ಇತ್ತ ಸುವಿಧಿರಾಜನು ಸಿವಿಗೆಯಿಂದಿಳಿದು ಆ ಪುಷ್ಪಕೋದ್ಯಾನದಲ್ಲಿ ಇಂದ್ರ

ನಿರ್ಮಾಪಿತವಾದ ಮಂಟಪದ ಮಧ್ಯದಲ್ಲಿ ಶೋಭಿಸುವ ಚಂದ್ರಕಾಂತಶಿಲಾಪಟ್ಟವನ್ನು ಏಱಿ ಕುಳಿತು. "ನಮಸ್ಸಿದ್ಧೇಭ್ಯ" ಎಂಬ ಮಂತ್ರೋಚ್ಚಾರಣ ಪುರಸ್ಸರವಾಗಿ ಆತ್ಮಕೇಶಾವಳಿಗಳನ್ನು ಪಱಿದು ಬಿಸುಟು, ಷಷ್ಠೋಪವಾಸದಿಂದ ಜಿನದೀಕ್ಷೆಯನ್ನು ಕೈಕೊಂಡನು. ಬೞಿಕ ಇಂದ್ರನು ನಿರ್ವಾಣಪತಿಯಾದ ಸುವಿಧಿಜಿನನನ್ನು ಅರ್ಚಿಸಿ ತೃತೀಯ ಕಲ್ಯಾಣೋತ್ಸವವನ್ನು ನಿರ್ವರ್ತಿಸಿ ತನ್ನ ಕಲ್ಪಕ್ಕೆ ಹೊರಟು ಹೋದನು. ಆ ಸುವಿಧಿ ಮುನೀಶ್ವರನು ಧ್ಯಾನಾಧೀನಮಾನಸನಾಗಿ ಎರಡು ದಿವಸವಿರ್ದು ಮೂರನೆಯ ದಿವಸಂ ಕೆಯ್ಯೆತ್ತಿಕೊಂಡು ಪಾರಣೆಗಾಗಿ ಮಾರ್ಗಪ್ರಕಾಶವನ್ನು ಮಾಡಲೆಂದು ಈರ್ಯಾವಿಶುದ್ಧಿಯಿಂದ ಆ ಉದ್ಯಾನವನವನ್ನು ಬಿಟ್ಟು ಹೊರಟು ಬರುತ್ತಾ (೧೦೧-೧೦೮) ದಾರಿಯಲ್ಲಿ ಸಿಕ್ಕಿದ ಶೈಲಪುರವನ್ನು ಹೊಕ್ಕು ಆ ನಗರದಧಿರಾಜನ ಅರಮನೆಯ ಮುಂದೆ ಬರಲು ಪುಷ್ಪಮಿತ್ರನೆಂಬಾ ನಗರದರಸು ಮಂಗಳದ್ರವ್ಯಾಷ್ಟಕಗಳೊಡನೆ ಇದಿರ್ಗೊಂಡುವಂದು ಪಂಚಮುಷ್ಟಿಯಿಂ ಬಂದಿಸಿ ಶ್ರದ್ಧಾದಿ ಸಪ್ತಗುಣಗಳೂ ಪ್ರತಿಗ್ರಹಾದಿ ನವವಿಧಪುಣ್ಯಗಳೂ ಸಮಸಂದಿರಲು ಆ ಮುನಿವರನನ್ನು ನಿಲ್ಲಿಸಿದನು. ಅರಮನೆಯಲ್ಲೆಲ್ಲಾ ಸಂಪತ್ತು ಬಂದು ನೆರೆದಂತೆ ಅತ್ಯಂತಶೋಭೆಯೂ, ಜನಗಳಲ್ಲಿ ಉಲ್ಲಾಸವೂ ಮೇರೆ ಮೀರಿತ್ತು. (೧೦೮-೧೨೨) ಅರಸು ಆ ಮುನಿಯನ್ನು ಉತ್ತಮವಾದ ಪೀಠದಲ್ಲಿ ಕುಳ್ಳಿರಿಸಿ ತತ್ಪಾದಪದ್ಮಗಳನ್ನು ತೊಳೆದು ತತ್ತೀರ್ಥಸೇಚನದಿಂದ ಪುತ್ರಮಿತ್ರ ಕಳತ್ರ ಸಹಿತನಾಗಿ ಪರಿಶುದ್ಧನಾದ (೧೨೩) ನೆಂಬಲ್ಲಿಗೆ

ಪದಿಮೂಱನೆಯ ಆಶ್ವಾಸಂ
ಮುಗಿದುದು

## ಚತುರ್ದಶಾಶ್ವಾಸಂ

ಬೞಿಕ ಅರಸು ಗಂಧೋದಕವೊದಲಾದ ಅಷ್ಟವಿಧ ಪೂಜಾದ್ರವ್ಯಗಳಿಂದ ಆ ಮುನೀಶ್ವರನನ್ನು ಅರ್ಚಿಸಿ (೧-೮) ಅವನ ಮೃದುಲವಾದ ಪಾಣಿಪಾತ್ರದಲ್ಲಿ ನಿರ್ಮಲವಾದ ಪಾಯಸವನ್ನಿಕ್ಕಿದನು. ಇಂತು ಜಗತ್ಪವಿತ್ರ ಪಾತ್ರನಿಗೆ ಪುಷ್ಪಮಿತ್ರನು ಶುದ್ಧಾಹಾರ ದಾನಮಾಡಲು, ಅರಮನೆಯಲ್ಲಿ ಸುವರ್ಣವೃಷ್ಟಿಯೂ, ಪುಷ್ಪವರ್ಷವೂ ಸುರಿದುವು. ದೇವದುಂದುಭಿಗಳೂ, ದೇವರ ಅಹೋ (ದಾನ)ಧ್ವಾನವೂ ದಿಗಂತವನ್ನೆಲ್ಲಾ ವ್ಯಾಪಿಸಿತು. ಶೀತಲ ಸುರಭಿ ಮಂದಮಾರುತವು ಎತ್ತೆತ್ತಲೂ ಬೀಸುತ್ತಿತ್ತು. ಇಂತು ಪಂಚಾಶ್ಚರ್ಯಗಳು ನಡೆದ ಬಳಿಕ ಅರಸು ಮುನಿಗಳ ಪಾದದಲ್ಲಿ ಉಪಚಾರೋಕ್ತಿಗಳನ್ನು ಹೇಳಿ ನಮಸ್ಕರಿಸಿದನು (೯-೧೩) ಆ ಮುನಿಯು ಇಂತು ತನ್ನ ಕಾಯಸ್ಥಿತಿಯನ್ನು ನಿರ್ವರ್ತಿಸಿಕೊಂಡು ಶೈಲಪುರವನ್ನು ಬಿಟ್ಟು ಹೊರಟುಬಂದು ಗ್ರಾಮ ನಗರ ಖೇಡ ಖರ್ವಡಮಡಂಬ ದ್ರೋಣಾಮುಖ ನಿಗಮ ಪತ್ತನಾದಿಗಳನ್ನು ಪಾದನ್ಯಾಸದಿಂದ ಪವಿತ್ರೀಕರಿಸುತ್ತಾ ಮೌನವ್ರತವನ್ನು ಹಿಡಿದು ಗೌರವತ್ರಯ, ದಂಡತ್ರಯ, ಶಲ್ಯತ್ರಯ, ಕಾಲತ್ರಯಗಳನ್ನು ದೂರಮಾಡಿ ಅಪ್ರತಿಹತಯೋಗತ್ರಯವನ್ನವಲಂಬಿಸಿ, ಆತ್ತಗುಪ್ತಿತ್ರಿತಯನಾಗಿ ಕ್ಷಮೆಮೊದಲಾದ ಪತ್ತು ಧರ್ಮಗಳನ್ನೂ, ಮೂವತ್ತಾರು ಗುಣಗಳನ್ನೂ ಪಡೆದು ಘಾತಿಕರ್ಮಗಳನ್ನು ಘಾತಿಸಲು ಆರಂಭಿಸಿದನು. (೧೩-೧೬) ಬುದ್ಧಿಕ್ರಿಯಾದ್ಯಷ್ಟವಿಧಋದ್ಧಿಗಳನ್ನೂ, ನಾಮ ಸತ್ಯರೂಪಮೊದಲಾದ ದಶವಿಧಸತ್ಯಗಳನ್ನೂ, ಕಾಯಶುದ್ಧ್ಯಾದ್ಯಷ್ಟವಿಧ ಶುದ್ಧಿಗಳನ್ನೂ, ಅನಶನಾದಿ ಷಡ್ವಿಧಬಾಹ್ಯತಪಸ್ಸುಗಳನ್ನೂ, ಪ್ರಾಯಶ್ಚಿತ್ತಾದಿ ಷಡ್ವಿಧ ಅಂತರತಪಸ್ಸುಗಳನ್ನೂ ಸ್ವೀಕರಿಸಿ ಕ್ಷುತ್ಪಿಪಾಸಾದಿ ದ್ವಾವಿಂಶತ್ಪರೀಷಹಗಳನ್ನು ಜಯಿಸಿ, ಷಡ್ಜೀವನಿಕಾಯದಯೆಯನ್ನು, ಆಶ್ರಯಿಸಿ, ಜೀವಾದಿಸಪ್ತ ತತ್ವವಿಚಾರವನ್ನು, ನೈಗಮಸಂಗ್ರಹಾದಿ ಸಪ್ತನಯಭಾವನೆಯನ್ನೂ ಭಾವಿಸಿ ಅನಂತಾನುಬಂಧಿಕ್ರೋಧಮಾ

ನಾದಿ ಚತುಷ್ಕಷಾಯಗಳಿಗೂ, ಶಬ್ದಸ್ಪರ್ಶಾದಿ ಪಂಚೇಂದ್ರಿಯ ವಿಷಯಗಳಿಗೂ ವಿಚ್ಛಿತ್ತಿಯನ್ನೆ
ಸಗಿದ ಆ ಯೋಗಿಗೆ ಸಮಗ್ರಸಮತೆಯು ಸಮನಿಸಿತು. (೧೭)

ಇಂತು ಪುಷ್ಪದಂತ ಮಹಾಯೋಗಿಯು ಮಹಾತಪಃಶ್ರೀನಿವಾಸಿಯಾಗಿ ಮುನ್ನಿನ ಪುಷ್ಪೋ
ದ್ಯಾನಕ್ಕೆ ವಂದು ಪ್ರತಿಮಾಯೋಗದಲ್ಲಿ ನಿಲ್ಲಲು ಆ ವನದಲ್ಲೆಲ್ಲಾ ಶಾಂತರಸವು ಹರಡಿಕೊಂಡಿತೋ!
ಎನ್ನುವಂತೆ ಸಕಲಪ್ರಾಣಿಗಳೂ ತಂತಮ್ಮ ಕ್ರೌರ್ಯವನ್ನೂ ಜಾತಿದ್ವೇಷಗಳನ್ನೂ ಬಿಸುಟು ಶಾಂತ
ಭಾವದಿಂದೆ ವರ್ತಿಸುತ್ತಿದ್ದುವು. (೧೮-೨೦) ಯೋಗೋಪಯೋಗ ಸ್ಥಿತನಾದ ಆ ಪುಷ್ಪದಂತ ಮುನಿ
ಪನು ಇಂತು ಧ್ಯಾನಾಧೀನನಾಗಿ ಆಜ್ಞಾವಿಚಯಮೊದಲಾದ ನಾಲ್ಕುಬಗೆಯ ಧರ್ಮಧ್ಯಾನವನ್ನು ಚಿಂ
ತಿಸ ತೊಡಗಿದನು. ಬಳಿಕ ಅನಂತ ಚತುಷ್ಟಯವನ್ನೂ, ವಿತರ್ಕಾದಿಸಿದ್ಧಾಷ್ಟಗುಣಗಳನ್ನೂ ಅಚಂ
ಚಲವಾದ ಮನದಲ್ಲಿ ಸಂತತಭಾವಿಸಿದನು. (೨೧-೨೭) ಅಂತು ಘಾತಿಕರ್ಮಚತುಷ್ಟಯವು ನಷ್ಟ
ವಾಗಲು ನಿಜವಾದ ಕೇವಲಜ್ಞಾನವು ಅಂಕುರಿಸಿ ಬಳೆದು ಪ್ರಜ್ವಲಿಸತೊಡಗಿತು. (೨೮-೪೦) ಇಂ
ದ್ರನು ಆಸನಕಂಪದಿಂದ ಪುಷ್ಪದಂತ ಜಿನನ ಕೇವಲ ಜ್ಞಾನೋತ್ಪತ್ತಿಯನ್ನು ಅರಿದು ಸಪರಿವಾರ
ನಾಗಿ ಬಂದು ಆ ಚತುರ್ಥಕಲ್ಯಾಣೋತ್ಸವಕ್ಕಾಗಿ (೪೧-೪೨) ಕುಬೇರನಿಂದ ಸಮವಸೃತಿ ಮಂಟಪ
ವನ್ನು ನಿರ್ಮಾಣಮಾಡಿಸಿದನು. ಸುವಿಧಿ ಜಿನನು ಆ ಸಮವಸೃತಿಮಂಟಪದ ನಡುವಿದ್ದ ಸಿಂಹಾಸನ
ವನ್ನೇರಿ ಕುಳಿತನು. (೪೩-೪೯) ಇಂದ್ರನು ಕೇವಲ ಕಲ್ಯಾಣೋತ್ಸವವನ್ನು ನೆರವೇರಿಸಿ, ಸಾಸಿರ
ದೆಂಟು ಅನ್ವರ್ಥನಾಮಗಳಿಂದ ಸ್ತುತಿಸಿ ಸ್ವರ್ಗಾಯಕ್ಕೆ ಹೋದನು. (೫೦) ಇತ್ತ ಸುವಿಧಜಿನನ
ಸಮವಸರಣವು ಗಣಧರರೇ ಮೊದಲಾದ ದ್ವಾದಶಗಣಗಳಿಂದ ಅಧಿಕಶೋಭಿಸುತ್ತಿತ್ತು. ಬಳಿಕ
ಸಂಚರಿಸಲಾರಂಭಿಸಿದ ಆ ಮಂಟಪದಲ್ಲಿ ಜಿನನು ಲೋಕವೆಲ್ಲವನ್ನೂ ಧರ್ಮೋಪದೇಶಮಾಡುತ್ತಾ
ಸುತ್ತಾಡಿ ಒಂದು ತಿಂಗಳಕಾಲ ವಿಹಾರವನ್ನು ನಿಲ್ಲಿಸಿ ಮತ್ತೆ ಪ್ರತಿಮಾಯೋಗದಲ್ಲಿ ದೃಢಸಂಕಲ್ಪ
ನಾಗಿ ನಿಂತನು. ಅನಾದಿಯಾಗಿ ಸಕ್ರಾಂತ್ಯವಾಗಿದ್ದ ಕರ್ಮಗಳೆಲ್ಲವೂ ನಿರ್ಮೂಲವಾಗಿ ನಾಶವಾ
ಗಲು ಸಹಜವಾಗಿದ್ದ ಸಿದ್ಧಾಷ್ಟಗುಣಗಳು ಮತ್ತೆ ಉಜ್ಜ್ವಲಿಸಹತ್ತಿತು. ಸುವಿಧಿಜಿನನು ಭಾದ್ರಪದ
ಶುಕ್ಲಾಷ್ಟಮಿಯಂದು ಮೂಲನಕ್ಷತ್ರದಲ್ಲಿ ಅಪರಾಹ್ಣಕಾಲದಲ್ಲಿ ಪರಮ ಶ್ರೀಮುಕ್ತಿಲಕ್ಷ್ಮಿಯನ್ನು
ಕೈಯ್ಕೊಂಡನು. (೫೧-೫೩) ಒಡನೆಯೇ ಇಂದ್ರನು ಸಪರಿವಾರನಾಗಿ ಅಲ್ಲಿಗೆ ಬಂದು ಪರಿನಿರ್ವಾಣ
ಮಹಾಕಲ್ಯಾಣ ಪೂಜೆಯನ್ನು ಯಥಾವತ್ತಾಗಿ ಮಾಡಿ, ಆನಂದನೃತ್ಯವನ್ನು ನರ್ತಿಸಿ ಹೋದನು.
ಸುವಿಧಿಜಿನನು ಪರಮಸುಖವನ್ನು ತಾಳಿದನು. (೫೪) ಇತ್ತ ತಂದೆಯ ವಿಯೋಗದಿಂದ ಸಂತಾಪ
ವಾಂತ ಕೀರ್ತಿವರ್ಮನು ಬಹುವಾಗಿ ಅತ್ತು ಕೊನೆಗೆ ವಿದರ್ಭಗಣಧರಸ್ವಾಮಿಗಳ ಶಾಂತಿವಚನ
ದಿಂದ ವ್ಯಸನವನ್ನು ತೊಲಗಿಸಿ ತಾನೂ ಗುರುನಿರ್ವಾಣಭೂಮಿಯನ್ನರ್ಚಿಸಿ ಕೃತಾರ್ಥನಾಗ
ಬೇಕೆಂದು ಸಕಲವಿಧ ಪೂಜಾಸಾಮಗ್ರಿವೆರಸು ಅಲ್ಲಿ ಬಂದು ದೇವೇಂದ್ರನು ಮಾಡಿದ ಪೂಜೆಗ
ಇಮ್ಮಡಿಯೆನ್ನುವಂತೆ ನಿರ್ವಾಣಸ್ಥಳಪೂಜೆಯನ್ನು ನೆರವೇರಿಸಿ ಕೀರ್ತಿಯನ್ನೂ, ಆತ್ಮಾಕೃತಿಯ
ನ್ನೂ ಪಡೆದನು. (೫೫) ಕಾವ್ಯಸತ್ಕಶಾರ್ಣವ ಮೃಗಲಕ್ಷನಾದ ಗುಣವರ್ಮಕವಿಯ ಲಕ್ಷಣಬದ್ಧ
ವಾದ ವಾಗ್ವನಿತೆಯನ್ನು ಬುಧರೆಲ್ಲರೂ ಒಲ್ದುಬಣ್ಣಿಸುವರು (೫೬) ಬಂಕರಸನಂಕದ ಮಾಚೆಯನ
ಮಹದೇವಿ ಸೋಮನ ಚಾಮ ಇವರಿರ್ವರಿಗೂ ಜನಿಸಿದ ನವಿಲ್ಗುಂದದ ಮಾದಿರಾಜನು ಈ ಪ್ರಬಂಧ
ವನ್ನು ಬರೆದನು (೫೭) ಈ ಮಾದಿರಾಜವಿಬುಧನ ಅಕ್ಷರವಿನ್ಯಾಸವು ಅತ್ಯುತ್ಕೃಷ್ಟವಾಗಿತ್ತು
(೫೮) ಎಂಬಲ್ಲಿಗೆ ಪುಷ್ಪದಂತ ಕಥಾಭಾಗದೊಳ್ ಉಪಸಂಹಾರ ಭಾಗವಾದ

ಪದಿನಾಲ್ಕನೆಯಾಶ್ವಾಸಂ
ಮುಗಿದುದು.

# ಮುನ್ನುಡಿ

ಈ ಗ್ರಂಥವು ಮೂರು ಹಸ್ತಲಿಖಿತಪ್ರತಿಗಳ ಪರಾಮರ್ಶದಿಂದ ಮುದ್ರಿತವಾಗಿರುವುದು. ಇವುಗಳಲ್ಲೊಂದು ಮದ್ರಾಸ್‌ಸರ್ಕಾರದ ಪ್ರಾಚ್ಯಪುಸ್ತಕಕೋಶಾಗಾರದಲ್ಲಿ (ಓರಿಯಂಟಲ್ ಮ್ಯಾನುಸ್ಕ್ರಿಪ್ಟ್ ಲೈಬ್ರರಿಯಲ್ಲಿ) ಸಂಗೃಹೀತವಾಗಿರುವ ತಾಳಪತ್ರಾತ್ಮಕವಾದ ಹಸ್ತಲಿಖಿತ ಪ್ರತಿಯು. ಎರಡನೆಯದು ಮೈಸೂರು ಸರ್ಕಾರದ ಪ್ರಾಚ್ಯಪುಸ್ತಕಕೋಶಾಗಾರದಲ್ಲಿ ಸಂಗ್ರಹಿಸಿ ಇಡಲ್ಪಟ್ಟಿರುವ ತಾಳಪತ್ರದ ಪ್ರತಿಯು. ಮೂರನೆಯದು ಇದೇ ಪ್ರಾಚ್ಯಕೋಶಾಗಾರದಲ್ಲಿಯ ಕಾಗದದ ಹಸ್ತಲಿಖಿತ ಪ್ರತಿಯು. ಈ ಮೂರು ಪ್ರತಿಗಳಲ್ಲೂ ಲೇಖಕ ಪ್ರಮಾದಜನ್ಯಗಳಾದ ಅಕ್ಷರಸ್ಖಾಲಿತ್ಯಾದಿಗಳೂ, ಗ್ರಂಥಪಾತಗಳೂ ಹೇರಳವಾಗಿ ಉಂಟು. ಮೊದಲನೆಯ ಪ್ರತಿಯ ಗ್ರಂಥಾಂತ್ಯದಲ್ಲಿ ಈ ಗ್ರಂಥವನ್ನು ಪ್ರತಿಮಾಡಿದ ನವಿಲ್ಗುಂದದ ಮಾದಿರಾಜನ ಪ್ರಶಸ್ತ್ಯಬೋಧಕವಾದ ಎರಡು ಪದ್ಯಗಳು ಹೆಚ್ಚಾಗಿವೆ. ಈ ಪದ್ಯಗಳ ಬಂಧ ಗೌರವವನ್ನೂ, ವಿಷಯ ಗೌರವವನ್ನೂ ಪರಾಮರ್ಶಿಸಿದರೆ ಈ ಮಾದಿರಾಜನೂ ಒಬ್ಬ ಪ್ರಸಿದ್ಧಕವಿಯಾಗಿರಬೇಕೆಂದು ಊಹಿಸಲು ಅವಕಾಶವುಂಟು. ಈತನು ಪ್ರಕೃತಕವಿಯ ಪ್ರತ್ಯಕ್ಷದಲ್ಲಿಯೇ ಈ ಗ್ರಂಥವನ್ನು ಪ್ರತಿಮಾಡಿದನೋ, ಅಥವಾ ಕಾಲಾನಂತರದಲ್ಲಿ ಪ್ರತಿಮಾಡಿದನೋ ಎಂಬ ಸಂದೇಹವನ್ನು ದೂರೀಕರಿಸಲು ನಿಷ್ಕೃಷ್ಟ ಸಾಧನಗಳಾವುವೂ ಅದ್ಯಾಪಿ ದೊರಕಿಲ್ಲ. ಸ್ವತಂತ್ರವಾಗಿ ಉತ್ತಮಕಾವ್ಯವನ್ನು ಬರೆಯತಕ್ಕ ಸಾಮರ್ಥ್ಯವುಳ್ಳ ಇಂತಹ ಪ್ರೌಢ ಕವಿಯು ಈ ಗ್ರಂಥವನ್ನು ಪ್ರತಿಮಾಡಿರುವುದನ್ನು ನೋಡಿದರೆ ಈ ಗ್ರಂಥವು ಅತ್ಯುತ್ತಮವಾದುದೆಂದು ಹೇಳಲು ಸ್ವಲ್ಪವೂ ಸಂಶಯವಿರಲಾರದು. ಮೂರನೆಯಪ್ರತಿಯಲ್ಲಿ ಹಲವು ಪ್ರಕ್ಷಿಪ್ತಪದ್ಯಗಳೂ, ಗದ್ಯಗಳೂ ಅಲ್ಲಲ್ಲಿ ಸೇರಿಸಲ್ಪಟ್ಟಿರುವುವು. ಹೀಗೆ ಸೇರಿಸಲ್ಪಟ್ಟಿರುವ ಗ್ರಂಥಭಾಗದಲ್ಲಿ, ಅನನ್ವಯವೂ, ಅಶುದ್ಧಪದವಾಕ್ಯ ಪ್ರಯೋಗಗಳೂ, ಹೊಸಗನ್ನಡ ಶೈಲಿಯೂ ಇರುವುದರಿಂದ ಅದನ್ನು ಮುದ್ರಣದಲ್ಲಿ ಸೇರಿಸಲಿಲ್ಲ.[1]

ಗ್ರಂಥಪಾತಮೊದಲಾದ ದೋಷಗಳು ಅಲ್ಲಲ್ಲೇ ಅಲ್ಪಸ್ವಲ್ಪವಾಗಿ ಇದ್ದರೂ ಗ್ರಂಥದ ಸಂಪೂರ್ಣರಸಾಸ್ವಾದಕ್ಕೆ ಯಾವ ಕೊರತೆಯೂ ಇಲ್ಲವೆಂದು ಮಾತ್ರ ಇಲ್ಲಿ ನಾವು ಹೇಳಬಹುದು. ಲಲಿತವೂ, ಸರಸವೂ ಆದ ಈ ಪ್ರಬಂಧದ ಪ್ರಯೋಜನವನ್ನು ಕನ್ನಡಿಗರು ಪಡೆದು ನಮ್ಮ ಶ್ರಮವನ್ನು ಸಾರ್ಥಕಗೊಳಿಸುವರೆಂದು ವಿದ್ವಜ್ಜನ ಸಾನ್ನಿಧ್ಯದಲ್ಲಿ ನಮ್ಮ ಸವಿನಯ ಪ್ರಾರ್ಥನೆಯು.

## ಕಾವ್ಯವಿಚಾರಂ

ಈ ಗ್ರಂಥವು ಜೈನಮತೀಯರಲ್ಲಿ ಶಲಾಕಾಪುರುಷರೆಂದು (ಕಾರಣಪುರುಷರೆಂದು) ಪ್ರಸಿದ್ಧರಾದ ಅರುವತ್ತು ಮೂವರಲ್ಲಿ (ತ್ರಿಷಷ್ಟಿ ಲಕ್ಷಣ ಶಲಾಕಾಪುರುಷರಲ್ಲಿ) ೯ ನೆಯ ತೀರ್ಥಂಕರನಾದ "ಪುಷ್ಪದಂತಜಿನನ" (ಸುವಿಧಿಜಿನನ) ಚರಿತವನ್ನು ತಿಳಿಸುವ ಚಂಪೂರೂಪವಾದ ಗ್ರಂಥವು. ಇದರಲ್ಲಿ ಹದಿನಾಲ್ಕು ಆಶ್ವಾಸಗಳಲ್ಲಿ ಒಟ್ಟು ೧೩೪೫ ಪದ್ಯಗಳೂ, ಹಲವು ಗದ್ಯಗಳೂ ಇರುವುವು. ಬಂಧವು ಲಲಿತವಾಗಿಯೂ ಸುರಸವಾಗಿಯೂ ಇರುವುದು. ಅಲ್ಲಲ್ಲಿ ಕನ್ನಡ ನಾಡಿನಲ್ಲಿ ವ್ಯವಹಾರದಲ್ಲಿರುವ

---

[1] ಮಾದರಿಗಾಗಿ ಈ ಪ್ರತಿಯ ಸ್ವಲ್ಪಭಾಗವನ್ನು ೬ ನೆಯ ಪರಿಶಿಷ್ಟವಾಗಿ ಕೊಟ್ಟಿದೆ.

281—E

ಹಲವು ನ್ಯಾಯನೀತಿಗಳು[1] ಛಂದೋರೂಪದಲ್ಲಿ ನಿಬದ್ಧವಾಗಿ ಸೇರಿಸಲ್ಪಟ್ಟಿರುವುವು. ಕಾವ್ಯರಸಾಸ್ವಾದಕ್ಕೆ ಮಾಂದ್ಯವನ್ನುಂಟುಮಾಡುವುದರಿಂದ ಕಾವ್ಯಶರೀರದಲ್ಲಿ ಗಣಭೂತಗಳೆಂದು ಆಲಂಕಾರಿಕರಿಂದ ನಿರ್ಣೀತವಾಗಿ ಪಂಪಾದಿ ಮಹಾಕವಿಗಳಿಂದ ಪ್ರಯುಕ್ತವಾಗದಿರುವ, ವೃತ್ತ್ಯನುಪ್ರಾಸಯಮಕಾದಿ ಶಬ್ದಾಲಂಕಾರಗಳು[2] ಈ ಕಾವ್ಯದಲ್ಲಿ ಅಲ್ಲಲ್ಲಿ ಹೇರಳವಾಗಿ ದೊರಕುವುವು. ಸಾರಸ್ವತಪ್ರಪಂಚದಲ್ಲಿ ಸಿದ್ಧಾಂತವಡೆದಿರುವಧ್ವನಿಯು ಕಾವ್ಯಕ್ಕೆ ಪ್ರಾಣಭೂತವೆಂಬುದನ್ನು ಈತನು ಪೀಠಿಕಾ ಪ್ರಕರಣದಲ್ಲಿ ಉಪಪಾದಿಸಿರುವುದು ಮಾತ್ರವಲ್ಲದೆ[3], ಆಚರಣೆಯಲ್ಲಿಯೂ ತಂದಿರುವನು, ಜನಗಳ್ಲ ವಾಡಿಕೆಯಾಗಿರುವ ಹಲವು ನಾಣ್ಣುಡಿಗಳನ್ನು ಛಂದಸ್ಸಿನಲ್ಲಿ ಸೇರಿಸಿ ಹೇಳಿರುವನು[4]. ಹಲವು ಸಂಸ್ಕೃತವಾಕ್ಯಗಳೂ ಅಲ್ಲಲ್ಲಿ ಅನುವಾದಮಾಡಲ್ಪಟ್ಟಿರುವುವು[5]. ಶಾಸ್ತ್ರೀಯವಾದ ಸಂಸ್ಕೃತದಲ್ಲಿರುವ ಹಲವು ನ್ಯಾಯಗಳನ್ನು ಸಂದರ್ಭಗಳಲ್ಲಿ ಸೇರಿಸಿರುವನು[6]. ತ್ರಿಷಷ್ಟಿ ಶಲಾಕಾಪುರುಷರ ಚರಿತದಲ್ಲಿ ಈ ಪುಷ್ಪದಂತಚರಿತದ ಕಥಾಭಾಗವು ಅತ್ಯಂತ ಕಿರಿದಾದುದು. ಇದನ್ನೇ ಕವಿಯು ಪೀಠಿಕೆಯಲ್ಲಿ 'ಕತೆ ಕಿಱಿದಾದೊಡಂ.......' ಎಂದೂ ಹೇಳಿರುವನು.

ಈ ಪುರಾಣದ ಕಥಾಭಾಗವು ಆದಿಪುರಾಣ, ಶಾಂತಿಪುರಾಣಗಳ ಕಥಾಭಾಗದಂತೆ ಹಲವು ಜನ್ಮಾಂತರ ಕಥಾಶೃಂಖಲೆಗಳ ತೊಡಕಿನಿಂದ ವಾಚಕರ ಮನಕ್ಕೆ ಬೇಸರವನ್ನು ಹುಟ್ಟಿಸುವಂತಿಲ್ಲ. ಕಥಾಭಾಗವೇ ಇಲ್ಲವೆಂದು ಹೇಳುವಷ್ಟು ಅತ್ಯಲ್ಪವಾದ[7] ಈ ಕಥೆಯನ್ನು ಬಳೆಯಿಸಿ ಪಂಪಾದಿಕವಿಗಳ ಗ್ರಂಥಕ್ಕೆ ಯಾವಭಾಗದಲ್ಲಿಯೂ ಕಡಿಮೆಯಾಗಿಲ್ಲವೆನ್ನುವಂತೆ ಹದಿನಾಲ್ಕಾಶ್ವಾಸಗಳುಳ್ಳ ದೊಡ್ಡ ಕಾವ್ಯವನ್ನಾಗಿ ಹೊಸೆದಿರುವ ಈ ಕವಿಯ ಬುದ್ಧಿಚಾತುರ್ಯವು ಶ್ಲಾಘನೀಯವಾದುದೇ ಸರಿ. ವರ್ಣನಾಭಾಗವನ್ನು ಇಷ್ಟು ಹೆಚ್ಚಾಗಿ ಸೇರಿಸಿದ್ದರೂ ಯಾವುದೊಂದುಭಾಗವೂ, ಅಪ್ರಕೃತವಾದುದು, ಅಸಂಬದ್ಧವಾದುದು, ಎಂದು ಯಾವ ಸೂಕ್ಷ್ಮದರ್ಶಿಯೂ ಆಕ್ಷೇಪಿಸುವುದಕ್ಕೆ ಅವಕಾಶವನ್ನು ಕೊಡದಂತಿರುವ ಔಚಿತ್ಯವಿಚಾರವು ಶ್ಲಾಘನೀಯತಮವಾಗಿಯೇ ಇರುವುದು. ಜೈನಪುರಾಣದ ತೀರ್ಥಂಕರಚರಿತ್ರದಲ್ಲಿ ತೀರ್ಥಕರರ ಪಂಚಕಲ್ಯಾಣವು[8] ವರ್ಣಿತವಾಗುವುದು, ಶಾಂತರಸವೇ

---

[1] ಪುಲಿಗಂಜಿ ಪುತ್ತನೆಱೀದೊಕ್ಕರೆ ಹಾವು ಕೊಂದುದು (ಇವು ಮೊದಲಾದುವು)

[2] ೧-೬. ೨-೫೦, ೫೧, ೫೨, ೫೩. ೯-೮, ೧೧, ೨೪, ೨೫. ೧೩-೩೩. ೮-೮೯, ೧೪-೮, ೫-೬೮

[3] ೧-೩೩, ೩೮.

[4] ಹರಣಮುಳ್ಳೊಡೆ ಹಾಡಿಯುಣಲಕ್ಕೆ ಬರ್ಪುದು, ದೇವಂಗಾಱದೆ ಧರ್ಮಿಯಂಬಡಿದರ್,
ಬಡವಂ ಬಡಿವಂಜಿಸುವಂ ಬಲ್ಲಿತ್ತನೆಂದು, ಇರೆ ಇರೆ ಪಾವೆ ಕಾಲವಶದಿಂ ನೆಲಮುಕ್ಕೆನಿಪಂತೆ.
ಕಳಲ್ಗಡೆ ಮರ್ದು (ಇವು ಮೊದಲಾದುವು)

[5] ಸಕಲಕರ್ಮ ವಿಪ್ರಮೋಕ್ಷೋ ಮೋಕ್ಷಃ, ಪ್ರಾಯೇಣ ಸೇಷ್ಯಾಃ ಸ್ತ್ರಿಯಃ ೧೩-೯೨. ಇತ್ಯಾದಿ.

[6] ಅಂಧವರ್ತಕನ್ಯಾಯ. ಅಜಾಕೃಪಾಣೀಯ. ಕಾಕತಾಳೀಯ. (ಇವೇ ಮೊದಲಾದುವು.)
ಪರಿಶಿಷ್ಟ. ೪ ಮತ್ತು ೫ ನ್ನು ನೋಡಲು ಸ್ಪಷ್ಟವಾಗುವುದು.

[7] ಪರಿಶಿಷ್ಟ ೪-೫ ರಲ್ಲಿರುವ ಚಾವುಂಡರಾಯಪುರಾಣ ಶ್ರೀ ಪುರಾಣಗಳ ಕಥಾಭಾಗವನ್ನು ನೋಡಿದರೆ ಇದು ವ್ಯಕ್ತವಾಗುವುದು.

[8] ಗರ್ಭಾವತರಣ ಕಲ್ಯಾಣ, ಜನ್ಮಾಭಿಷೇಕ ಕಲ್ಯಾಣ, ಪರಿನಿಷ್ಕ್ರಮಣ ಕಲ್ಯಾಣ, ಕೇವಲಜ್ಞಾನೋದಯ ಕಲ್ಯಾಣ, ಸಮವಸರಣ ಕಲ್ಯಾಣ.

ಪ್ರಧಾನವಾದ ರಸವು. ಶೃಂಗಾರಾದಿ ಇತರ ರಸಗಳು ಈ ಪ್ರಧಾನರಸವನ್ನು ತಿರೋಹಿತವಮಾಡದೆ ತದನುಜೀವಿಗಳಾಗಿಯೇ ಅಲ್ಲಲ್ಲಿ ಕಂಗೊಳಿಸುವುವು. ಶೃಂಗಾರರಸವೇ ಕಾವ್ಯಗಳಲ್ಲಿ ಪ್ರೇಕ್ಷಾವತ್ಪ್ರವೃತ್ತ್ಯಂಗವಾಗಿರುವುದು. ಕಟುಕೌಷಧಗಳಲ್ಲಿ ಪ್ರವೃತ್ತಿಯುಂಟಾಗಲು ಶಿಶುಗಳಿಗೆ ಶರ್ಕರಾದಿಗಳನ್ನು ಮಿಶ್ರಮಾಡಿ ಉಪಯೋಗಿಸುವಂತೆ ಸಾಮಾನ್ಯವಾಗಿ ಅನಿಷ್ಟವಾದ ಮೋಕ್ಷಸುಖದಲ್ಲಿ ಮಂದಾದರರಾದವರನ್ನು ಆಕರ್ಷಿಸುವುದಕ್ಕಾಗಿ ಕಾವ್ಯಗಳಲ್ಲಿ ಶೃಂಗಾರಾದಿರಸಗಳು ಅಂಗಗಳಾಗಿ ಇದ್ದೇ ಇರಬೇಕಾಗುವುದು ಈ ರಸವೇ ಕಾವ್ಯಜೀವಾತುವು. ಆದುದರಿಂದಲೇ ಭೋಜನು, ತನ್ನ ಅಲಂಕಾರ ಗ್ರಂಥಗಳಲ್ಲಿ[1] "ಶೃಂಗಾರ ಏಕ ಏವ ರಸಃ" ಶೃಂಗಾರವೆಂಬುದೊಂದೇ ರಸವೆಂದು ಸಯುಕ್ತಿಕವಾಗಿ ಉಪಪಾದಿಸಿರುವನು. ಮೋಕ್ಷದಲ್ಲಿ ಅಭಿನಿವೇಶವನ್ನುಂಟುಮಾಡುವ ಶಾಂತರಸಪೂರ್ಣವಾದ ಗ್ರಂಥದಲ್ಲಿ ಶೃಂಗಾರಾದಿರಸಗಳನ್ನು ಅತಿವಿಸ್ತೃತಗಳನ್ನಾಗಿ ವರ್ಣಿಸಿ ಮುಖ್ಯ ಶಾಂತರಸವನ್ನು ತಿರೋಹಿತವಮಾಡದೆ ತತ್ಪೋಷಕಗಳಾಗಿರುವಂತೆ ವರ್ಣಿಸುವುದೇ ಕವಿಯ ಪ್ರತಿಭಾಚಾತುರ್ಯವು. ಅದನ್ನು ಈ ಗ್ರಂಥದಲ್ಲಿ ಹಲವೆಡೆಗಳಲ್ಲಿ ನೋಡಬಹುದು.

ಜೈನಪುರಾಣಕ್ಕೆ ಅಂಗಗಳು ಎಂಟು — ಎಂದು ಪಂಪನು ಆದಿಪುರಾಣದಲ್ಲಿ ಹೇಳಿರುವನು,[2] ಜನ್ನನಾದರೋ ತನ್ನ ಅನಂತನಾಥ ಪುರಾಣದಲ್ಲಿ 'ಪುರಾಣಕ್ಕೆ ಅಂಗವು ಐದು, ಕಾವ್ಯರೂಪವಾದ ಪುರಾಣಕ್ಕೆ ಎಂಟು' ಎಂದು ಹೇಳಿರುವನು[3], ವೈದಿಕರು ಪುರಾಣಲಕ್ಷಣದಲ್ಲಿ "ಸರ್ಗಶ್ಚ ಪ್ರತಿಸರ್ಗಶ್ಚ ವಂಶೋ ಮನ್ವಂತರಾಣಿ ಚ ‖ ವಂಶಾನುಚರಿತಂ ಚೇತಿ ಲಕ್ಷಣಾನಾಂ ತು ಪಂಚಕಮ್" ಎಂದು ಪುರಾಣಕ್ಕೆ ಅಂಗಗಳು ಐದೆಂದು ಹೇಳುವರು. ಈ ಲಕ್ಷಣಗಳು ಅವರವರ ಮತಗಳ ಮೂಲತತ್ವಗಳನ್ನನುಸರಿಸಿ ಭಿನ್ನಭಿನ್ನನಾಗಿರುವುವು. ಜೈನರು ಪ್ರಪಂಚಕ್ಕೆ ಸ್ಥಿತಿಯೊಂದನ್ನಲ್ಲದೆ ಉತ್ಪತ್ತಿನಾಶಗಳನ್ನು ಒಪ್ಪಿಕೊಳ್ಳುವುದಿಲ್ಲ. ಲೋಕದಲ್ಲಿರುವ ವಸ್ತುಗಳಲ್ಲಿ ಸ್ವರೂಪ ಪರಿಣಾಮವನ್ನು ಮಾತ್ರ ಹೇಳುವರು, ಆದುದರಿಂದ ಇವರು ಆದಿಯಲ್ಲಿ ಲೋಕಸ್ವರೂಪವನ್ನು ಅನಾದಿನಿಧನವೆಂದು ಪುರಾಣಗಳಲ್ಲಿ ಹೇಳುವರು. ವೈದಿಕಮತದವರು ಈ ಪ್ರಪಂಚಕ್ಕೆ ಸೃಷ್ಟಿ, ಸ್ಥಿತಿ, ಲಯಗಳನ್ನು ಒಪ್ಪಿಕೊಳ್ಳುವುದರಿಂದ, ಈ ಸೃಷ್ಟಿ ಸ್ಥಿತಿ ಲಯಗಳ ಕ್ರಮವನ್ನೂ, ಇವೆಲ್ಲಕ್ಕೂ ನಿಯಂತೃವಾದ ಸರ್ವಶಕ್ತನೂ ಸರ್ವಜ್ಞನೂ ಆದ ಈಶ್ವರನ ಸ್ವರೂಪಗುಣವಿಭವಪ್ರಾಪ್ತ್ಯಾದಿಗಳನ್ನೂ ವರ್ಣಿಸು

---

[1] ಸರಸ್ವತೀ ಕಂಠಾಭರಣ, ಶೃಂಗಾರ ಪ್ರಕಾಶಗಳೆಂಬ ಲಕ್ಷಣ ಗ್ರಂಥಗಳಲ್ಲಿ.

[2] ಆ ಪುರಾಣಕ್ಕಂ - ಲೋಕಾಕಾರಕಥನಮುಂ, ದೇಶನಿವೇಶೋಪದೇಶಮುಂ ತ್ಪುರಿವರ್ಣನಮುಂ, ರಾಜ್ಯರಾಮಣೀಯಕಾಖ್ಯಾನಮುಂ, ತೀರ್ಥಮಹಿಮ ... ಗರ್ತಿಸ್ವರೂಪನಿರೂಪಣಮುಂ, ತಪೋದಾನವಿಧಾನ ವರ್ಣನಮು ಮೆಂದಿಂತವಯವಂಗಳೆಂಟಕ್ಕುಂ (ಆದಿ-ಆ-೧-ಗ-೧೦).

[3] ಮುನಿಮಾರ್ಗೋಕ್ತ ಪುರಾಣಪದ್ಧತಿಗೆ ಲೋಕಾ
ರ್ತನಮುಂ ವ್ಯಾಪ್ತಚತುರ್ಗತಿ ಸ್ಥಿತಿಗಳುಂ ಭಾ
ರ್ತನಮುಂ ತತ್ಫಲಸಿದ್ಧಿಯುಂ ನೆಗಳ್ದುದೈದಂಗ
ವ್ಯನಿಬಂಧೋಚಿತ ಮೆಂಟು ದೇಶನಗರೀರಾ

ವುದು ಪುರಾಣವೆಂದು ಪುರಾಣಲಕ್ಷಣವನ್ನು ಅಂಗೀಕರಿಸಿರುವರು. ಈ ಕಾವ್ಯದಲ್ಲಿ ಜೈನಪುರಾಣಾಂಗಗಳೆಂಟೂ ಸಂಪೂರ್ಣವಾಗಿರುವುವು. ಲೋಕಾಕಾರಕಥನವು ಪ್ರಥಮಾಶ್ವಾಸ ೮೩ ನೆಯ ಪದ್ಯದಿಂದ ೯೦ ರ ವರೆಗೂ ವರ್ಣಿತವಾಗಿರುವುದು. ದೇಶನಿವೇಶೋಪವರ್ಣನವು ಎರಡನೆಯ ಆಶ್ವಾಸದ ೧೪ ನೆಯ ಪದ್ಯದವರೆಗೂ ವಿಸ್ತೃತವಾಗಿರುವುದು. ನಗರಸಂಪದ್ವರ್ಣನ ರಾಜ್ಯರಾಮಣೀಯಕಾಖ್ಯಾನ ಇವೆರಡರಿಂದ ಎರಡನೆಯ ಆಶ್ವಾಸವು ಕೊನೆಗಂಡಿರುವುದು ಅಲ್ಲದೆ ೯ ನೆಯ ಆಶ್ವಾಸದಲ್ಲಿಯೂ ಈ ವರ್ಣನವುಂಟು. ತೀರ್ಥಮಾಹಿಮಾನುವರ್ಣನವು ೧೦ ನೆಯ ಅಶ್ವಾಸದಲ್ಲಿ ಉಂಟು. ಚತುರ್ಗತಿ ಸ್ವರೂಪನಿರೂಪಣವು ಆ-೧೩ ಪದ್ಯ ೯೨ ರಿಂದ ಮುಂದೆ ಹೇಳಿದೆ. ಉಳಿದುವೆರಡಂಗಗಳೂ ಆ-೧೪ ರಲ್ಲಿ ವರ್ಣಿತವಾಗಿವೆ.

ಇವನ ಕಾವ್ಯದಲ್ಲಿ ಅಲ್ಲಲ್ಲಿ ಕಂಡುಬರುವ ಪ್ರಾಚೀನಕಾವ್ಯಗಳ ಛಾಯಾನುವಾದಗಳು ಸ್ವಪ್ರತಿಭಾಶಕ್ತಿಯಿಂದ ಮಾರ್ಪಡಿಸಲ್ಪಟ್ಟು ನವೀನತ್ವವನ್ನು ಪಡೆದಿರುವುದರಿಂದ ಕವಿಯ ಯಶಸ್ಸಿಗೆ ಇನಿತಾದರೂ ಕುಂದನ್ನು ತರುವಂತಿಲ್ಲ. ಮಾದರಿಗಾಗಿ ಒಂದೆರಡನ್ನು ಇಲ್ಲಿಕೊಟ್ಟಿದೆ.

ತಂತಮ್ಮ ರಾಜ್ಯಚಿಹ್ನಂ । ತಂತಮ್ಮ ಮಹಾವಿಭೂತಿ ತಂತಮ್ಮ ಬಲಂ ॥
ತಂತಮ್ಮೆಸೆವ ವಿಳಾಸಂ । ತಂತಮ್ಮೆರ್ಪಡೆಯೊಳೋಳಿಯಿಂ ಕುಳ್ಳಿರ್ದರ್ ॥

ಪಂ ಭಾ. ೩-೪೩

ತಂತಮ್ಮ ವಾಹನಾಯುಧ । ಕಾಂತಾಜನ ಪರಿಜನಪ್ರಸಾಧನ ಚಿಹ್ನಾ ॥
ನಂತವಿಭೂತಿಯಿನುಚಿತದಿ । ಗಂತದೊಳುಚಿತಾಸನ ಪ್ರದೇಶಮೊಳಿರ್ದರ್ ॥

ಪುಷ್ಪ ೧೦-೮೧

ಉದ್ಯೋತಿತವಿಶ್ವರ್ ಕೃತ । ವಿದ್ಯರ್ ಸೋಷ್ಮಪ್ರತಾಪರಖಿಲಾಂತಪದ ॥
ಕ್ಕಾದ್ಯರ್ ವ್ಯಂಜನದಂತನ । ವದ್ಯರ್ ಮೂವತ್ತುಮೂವರಾದರ್ ದೇವರ್ ॥

ಕಾವ್ಯಾವಲೋಕನ-೨

ಅಂಶುಪ್ರಭರುದ್ಯೋತಿತ । ವಂಶರ್ ಪುಟ್ಟಿದರನುಪಮ ಪುರುಪು ।
ಾಂಶರ್ ದ್ವಿಗುಣಿಸಿದ ಚತು । ರ್ವಿಂಶತಿತೀರ್ಥಕರರೆನಿಸಿ ನಾಲ್ವತ್ತೆಣ್ಬರ್ ॥

ಪುಷ್ಪ—೧೩-೧೨

ಕಱುತ್ತಡಗಿಡಲ್ ಸುಟ್ಟುಂ ಬೞಿಕ್ಕಲ್ಲಿ ನೂ ।
ಯಂ ನೆಗಱಿಪಂತು............. ॥

ಪುಷ್ಪ ೪-೫೨

ತಿ ಮಿಂಧನೇದ್ಧೋ
ನಃ ಕರೋತಿ ॥

ರಘು ೯-೮೦

......ಧ್ಯಾನಸ್ತಿಮಿತ ಲೋಚನಃ ।
ಕ್ಷಣಮಾತ್ರ ಮೃಷಿಸ್ತಸ್ಥೌ ಸುಪ್ತಮೀನ ಇವ ಹ್ರದಃ ॥

ರಘು ೧-೭೩

ಧ್ಯಾನಾರ್ಥಿಸ್ಸೈಕ...... ಕಮಲಾಕರಮಂ

ಪುಷ್ಪ-೧೪-೩.

ಪ್ರಾಸಿನವಿಚಾರದಲ್ಲಿ ಱಟಿ ಕುಳಕ್ಷಳಂಗಳಿಗೂ, ಲಕಾರಕುಳಕ್ಕೂ ಒಂದೆರಡೆಡೆಗಳಲ್ಲಿ ಪ್ರಾಸವು ನಿಬದ್ಧವಾಗಿರುವುದು.[1]

## ಗ್ರಂಥಕರ್ತೃವಿಚಾರಂ

ಈ ಪುಷ್ಪದಂತ ಪುರಾಣವನ್ನು ಬರೆದ ಕವಿಯ ಹೆಸರು **ಗುಣವರ್ಮ**ನೆಂದು.

ಇದನ್ನೀಕವಿಯು—

ಪ್ರಕಟಂ ಸುಕವಿಮಧುವ್ರತ ।
ನಿಕರಮನೆಱಗಿಸುವ ಚೂತಮಂಜರಿ ಕುಕವಿ ॥
ಪ್ರಕರ ಮಧುಪಕ್ಕೆ ಕೃತಿ ಚಂ ।
ಪಕಮಂಜರಿ ಯೆನಿಸೆ ಪೇೞ್ದಮಂ **ಗುಣವರ್ಮಂ** ॥ ೧-೬೧ ॥

ಎಂಬ ಪದ್ಯದಲ್ಲೂ—

ಇದು ಸಮಸ್ತಭುವನ...... .....ಮಾನಸ **ಗುಣವರ್ಮ** ನಿರ್ಮಿತಮಪ್ಪ ಪುಷ್ಪದಂತ ಪುರಾಣದೊಳ್

ಎಂದು ಆಶ್ವಾಸಾಂತಿಮಗದ್ಯಗಳಲ್ಲೂ ತಾನೇ ಹೇಳಿಕೊಂಡಿರುವನು. ಈ ಕವಿಯು ತನ್ನ ಗ್ರಂಥದ ಪೀಠಿಕೆಯಲ್ಲಿ ಪೂರ್ವ ಕವಿಸ್ತವನಾವಸರದಲ್ಲಿ "ಗುಣವರ್ಮ" ನೆಂಬ ಮತ್ತೊಬ್ಬ ಕವಿಯನ್ನು ಸ್ತುತಿಸಿರುವುದರಿಂದಲೂ, ನಾಗವರ್ಮನ "ಕಾವ್ಯಾವಲೋಕನ," ಅಭಿನವವಾದಿ ವಿದ್ಯಾನಂದನ "ಕಾವ್ಯಸಾರ" ಇವುಗಳಲ್ಲಿ ಉದಾಹೃತವಾಗಿರುವ ಹರಿವಂಶ ಮತ್ತು ಶೂದ್ರಕ ವೆಂಬ ಗ್ರಂಥಗಳ ಕರ್ತೃವೂ ಆದ ಗುಣವರ್ಮನೆಂಬುವನು ಸು. ಕ್ರಿ. ಶ. ೯೦೦ ಇದ್ದವನೆಂದು ತಿಳಿದು ಬರುವುದದರಿಂಲೂ ಆತನು ಏತತ್ಕವಿಗಿಂತಲೂ ಭಿನ್ನನೆಂಬುದು ಸ್ಪಷ್ಟವು; ಈ ಕಾರಣವನ್ನೇ ಉದಹರಿಸಿ ಕವಿಚರಿತ್ರಕಾರರು ಒಂದನೆಯ ಗುಣವರ್ಮ, ಎರಡನೆಯ ಗುಣವರ್ಮಎಂದು ತಾವು ಬರೆದಿರುವ ಕವಿಚರಿತೆಯಲ್ಲಿ ಬೇರೆ ಬೇರೆಯಾಗಿ ಇವರಿಬ್ಬರನ್ನೂ ವ್ಯವಹರಿಸಿರುವರು.

[1] ೨-೫೧, ೪-೬೩. ೬-೧೩, ೪೨. ೩-೫೪. ೮-೧೦೮, ೧೧೦. ೧೦-೪. ೧೨-೬೬.

ಇವನು ಜೈನಮತಕ್ಕೆ ಸೇರಿದವನು. ಜೈನಪುರಾಣವಾದ ಈ ಗ್ರಂಥವನ್ನು ಬರೆದಿರುವುದು ಮಾತ್ರವಲ್ಲದೆ ಗ್ರಂಥಮಧ್ಯದಲ್ಲಿಯೂ ಅಲ್ಲಲ್ಲಿ ತಾನು ಜಿನಮತದವನೆಂದು ಹೇಳಿಕೊಂಡಿರುವನು.[1] ಹಲವೆಡೆಗಳಲ್ಲಿ ಜಿನಮತಕ್ಕೆ ಸಂಬಂಧಿಸಿದ ವರ್ಣನೆಗಳೇ ಕಂಡುಬರುವುವು.[2] ಈತನಿಗೆ "ಕವಿತಿಲಕ"[3] "(೧-೬೦) ಸರಸ್ವತೀ ಕರ್ಣಪೂರ"[3] (೪) ಸಹಜಕವಿಸರೋವರಹಂಸ[3] "ಪ್ರಭುಗುಣಾಬ್ಜಿನೀಕಳಹಂಸ"[4] (ಆ. ಆದಿ) "ಗುಣರತ್ನಭೂಷಣ"[4] "ಭವ್ಯರತ್ನಾಕರ", [4]ಶ್ರೀರಾಜವಿದ್ಯಾಧರ"[5] "ಮಾನಮೇರು"[5] 'ಸಾಕ್ಷರಸಮಯಾವಲಂಬಿ"[5] ಮುಂತಾದ ಬಿರುದುಗಳಿದ್ದುವು. ಈತನ ವಾಕ್ಚಾತುರ್ಯವನ್ನೂ, ಕವಿತ್ವದ ಮೇಲ್ಮೆಯನ್ನೂ ಪಂಡಿತರು ಆ ಕಾಲದಲ್ಲಿ ಪ್ರಸಿದ್ಧರಾಜನಾಗಿದ್ದ ವಜ್ರದೇವ ನರನಾಥನ ಆಸ್ಥಾನದಲ್ಲಿ ಶ್ಲಾಘಿಸುತ್ತಿದ್ದರೆಂದು ಪೀಠಿಕಾಪ್ರಕರಣದ "ಭಾವಿಸೆ. ಚಿತ್ರಮುನಲ್... ..."(೧-೫೬) ಎಂಬ ಪದ್ಯದಿಂದ ಆರಂಭಿಸಿ "ಎಂದೋರಂತಿರೆ ವಜ್ರದೇವನರನಾಥಾಸ್ಥಾನದೊಳ್ ಕೂರ್ತು... .."(೧-೬೭) ಎಂಬ ಪದ್ಯದವರೆಗೂ ತಾನೇ ಹೇಳಿಕೊಂಡಿರುವನು. ಈ ವಜ್ರದೇವನಾರೆಂಬುದನ್ನು ನಿರ್ಧರಿಸಬೇಕಾದುದು ಪ್ರಕೃತದಲ್ಲಿ ಅತಿ ಮುಖ್ಯ ವಿಷಯವಾಗಿರುವುದು.[6] ಪ್ರಾಚೀನಕವಿಗಳ ಪದ್ಯರತ್ನಗಳನ್ನು ಆರಿಸಿ ತೆಗೆದು "ಸೂಕ್ತಿ ಸುಧಾರ್ಣ"ವೆಂಬ ರತ್ನಮಾಲಿಕೆಯನ್ನು ರಚಿಸಿದ ಮಲ್ಲಿಕಾರ್ಜುನನ ಕಾವ್ಯರತ್ನಮಾಲಿಕೆಯಲ್ಲಿ ಈ ಕವಿಯ ಪದ್ಯರತ್ನಗಳೂ ಸೇರಿರುವುವೆಂದ ಮೇಲೆ ಈ ಕವಿಯ ಉಕ್ತಿಯು ಆತ್ಮಸ್ತುತಿಯಾಗಿ ಪರಿಣಮಿಸದೆ ಸಹಜಗುಣವನ್ನು ಪ್ರೇಕ್ಷಾವತ್ಪ್ರವೃತ್ತಿಗಾಗಿ ಅನುವಾದ ಮಾಡಿದಂತೆಯೇ ಆಗಿರುವುದು.

ವಜ್ರದೇವನ ಆಸ್ಥಾನದಲ್ಲಿ ಪ್ರಸ್ತುತವಾದ ತನ್ನ ಪಾಂಡಿತ್ಯ ಪ್ರಶಂಸೆಯಿಂದ ಸಂತುಷ್ಟನಾದ ಶಾಂತಿವರ್ಮನು ತನ್ನನ್ನು ಪ್ರೋತ್ಸಾಹಿಸಿದುದರಿಂದ ಈಪುಷ್ಪದಂತ ಪುರಾಣವೆಂಬ ಜಿನಕಥೆಯನ್ನು ಬರೆದಂತೆ ಕವಿಯು ಪೀಠಿಕಾ ಪ್ರಕರಣದಲ್ಲಿ "ಎಂದೋರಂತಿರೆ......ಶಾಂತಿವರ್ಮಂ ದೀನಾನತವರ್ಮನಾದರಿಸಿ ಪೇಟಿಂದೊಡೀಗಳ್ ಮನಂದಂದೆಂ"......೧-೬೭) ಎಂದು ಹೇಳಿರುವನು. ಮತ್ತು ಈ ಕಾವ್ಯರಚನೆಗೆ ಶಾಂತಿವರ್ಮನ ಪ್ರೋತ್ಸಾಹವು ಸಾಮಾನ್ಯವಾದುದೆಂದು ಹೇಳದೆ ಈ ಕೃತಿ

---

[1] ಪಿರಿಮುಜಿನನುತಿಗಳ್ಳವ। ಪರಮುಶ್ರೀವಿಭವಮೊಯ್ದುದೆಂದಾರ್ ನುಡಿವರ್ ॥
ಪರಮಾಣುಮಾತ್ರಮುಮೃತದ । ಪರಿಸೇವನೆ ಘಟಸಲಮರದೇನಮುಂತ್ವಂ ॥ ೧-೬೪ ॥
ಸ್ವೀಕೃತಜಿನಧರ್ಮನನಂ। ಗೀಕೃತಖಳಧರ್ಮ ನಮಳವಾಣೀಕರುಣಾಂ ॥
ಗೀಕೃತಕವಿತಾವರ್ಮನ। ಪಾಕೃತ ದುಷ್ಕರ್ಮ ನಮಮ ಕವಿಗುಣವರ್ಮಂ ॥ ೧-೬೩ ॥
ಇದು ಸಮಸ್ತಭುವನ ಸಂಸ್ತುತಜಿನಾಗಮ ಕುಮುದ್ವತೀಚಾರು....ಗುಣವರ್ಮನಿರ್ಮಿತ ಮಪ್ಪ .. ೨. ಅಂತ್ಯಗದ್ಯ.

[2] ಒಂದೆರಡು ಕಡೆಗಳಲ್ಲಿಮಾತ್ರ ಇದಕ್ಕೆ ವಿರುದ್ಧವಾದ ವರ್ಣನೆಗಳೂ ಇರುವುದು. ಆ ೮-೧೬.

[3] ಈ ಬಿರುದುಗಳು ವಿದ್ಯಾನಿಮಿತ್ತವಾಗಿ ಬಂದುವು. [4]ಇವು ಮತೋದ್ಧಾರನಿಮಿತ್ತವಾಗಿ ಬಂದುವು.

[5] ತನ್ನ ಆಶ್ರಯದಾತೃವಾದ ರಾಜನ ಸಂಬಂಧದಿಂದ ಬಂದುವು.

ಕವಿಗಳು ತಮ್ಮ ಬಿರುದುಗಳನ್ನು, ತಾವುರಚಿಸುವ ಕಾವ್ಯಗಳಲ್ಲಿ, ತಮ್ಮ ರಾಜರಿಗೂ ಕಥಾನಾಯಕನಿಗೂ ಅವರ ಬಿರುದುಗಳನ್ನು ತಮಗೂ ಸಂಬಂಧಿಸಿಕೊಂಡು ಹೇಳುವ ಪದ್ಧತಿಯುಂಟು.

[6] ಈ ಮುನ್ನುಡಿಯ ಪು ix ಟಿಪ್ಪಣಿ.

ಪುಟ. x ರಲ್ಲಿ ಕೊಟ್ಟಿರುವ ಶಾಸನವು ಈ ವಿಷಯದಲ್ಲಿ ಸ್ವಲ್ಪ ಬೆಳಕನ್ನು ಬೀರುವುದು.

ಯನ್ನು ತನ್ನ ಮಗಳೆಂದು ರೂಪಿಸಿ ಅದನ್ನು ವರಿಸಿದ ಶಾಂತಿವರ್ಮನನ್ನೇ ತನ್ನ ಅಳಿಯನನ್ನಾಗಿ ಭಾವಿಸಿ, (ಸಾಮಾನ್ಯ ಅಳಿಯನಲ್ಲ ವಿಷ್ಣುಗೆ ಸಮಾನನಾದವನು) ವಿಷ್ಣುವು ತನ್ನನ್ನೇ ಕ್ಷೀರಸಮುದ್ರಕ್ಕೆ ಸಮರ್ಪಿಸಿ ಲಕ್ಷ್ಮಿಯನ್ನೂ, ಕೌಸ್ತುಭರತ್ನವನ್ನೂ ಕೊಂಡಂತೆ ಈ ಶಾಂತಿವರ್ಮನು ಕವಿಗೆ ತನ್ನನ್ನೇ ಸಮರ್ಪಿಸಿ ಕೀರ್ತಿಯನ್ನೂ, ಈ ಕಾವ್ಯರತ್ನವನ್ನೂ ಕೊಂಡಂತೆ ಹೇಳಿರುವುದರಿಂದ (ಪ್ರಥಮ. ಆಶ್ವಾ. ೬೮ ರಿಂದ ೭೦) ಪ್ರಾಯಶಃ ಆತನಿಂದ ದ್ರವ್ಯಾದಿಯಾಗಿ ಯಾವ ಪ್ರತಿಫಲವನ್ನೂ ಅಪೇಕ್ಷಿಸದೆ ಕೇವಲ ಅನುರಾಗದಿಂದಲೇ ಈ ಕಾವ್ಯವನ್ನು ಆತನಿಗೆ ಸಮರ್ಪಿಸಿದಂತೆ ತೋರುವುದು. ಶಾಂತಿವರ್ಮನ ಸ್ತೋತ್ರವನ್ನು ಪೀಠಿಕೆಯಲ್ಲಿ ವಿಶೇಷವಾಗಿ ಸ್ತುತಿಸಿದ್ದರೂ,[1] ಆತನ ದೇಶ ಕುಲಗೋತ್ರಾದಿಗಳೊಂದನ್ನೂ ಸ್ಪಷ್ಟವಾಗಿ ಹೇಳಲಿಲ್ಲ. ಆದರೆ ಈ ಶಾಂತಿಯನ್ನು ಕಥಾನಾಯಕನಿಗೆ ಅಭಿನ್ನನೆಂದು ಅಲ್ಲಲ್ಲಿ ವರ್ಣಿಸಿರುವ ಈತನ ಪದ್ಧತಿಯಂತೆ ವಿವಾಹಿತನಾದ ಪದ್ಮರಸನನ್ನು ಸ್ತುತಿಪಾಠಕರಿಂದ ಆ. ೮-೬೭ ನೆಯ ಪದ್ಯದಲ್ಲಿ ಹೊಗಳಿಸಿರುವುದನ್ನು ಗಮನಿಸುವುದರಿಂದ ಈ ಶಾಂತಿಯ ತಂದೆ ಬೊಪ್ಪನು, ತಾಯಿ ಮಾದಾಂಬಿಕೆ, ಹೆಂಡಿತಿ ಭಾಮಲೆ, ಅಧಿರಾಜನು ಕಾರ್ತವೀರ್ಯ, ಎಂಬಂಶಗಳು ತಿಳಿದುಬರುವುವು. ಈ ಶಾಂತಿನಾಥನ ಬಿರುದಿಗಾಗಿಯೇ (೧-೮೦) ನೆಯ ಗದ್ಯವನ್ನು ರಚಿಸಿರುವನು. ಬಿರುದುಗಳಲ್ಲಿ “ಕರ್ಣಾಟಕೀಕರ್ಣಾವಂತ” ಮೊದಲಾದ ಈ [2]ನಾಲ್ಕು ಬಿರುದುಗಳನ್ನು ನೋಡಿದರೆ ಶಾಂತಿಯು ತಾನೊಬ್ಬ ನಾಡಪ್ರಭುವಾಗಿದ್ದರೂ ತನ್ನ ಒಡೆಯನಿಗಾಗಿ ಕರ್ಣಾಟಕ, ಕೇರಳ, ಮಳೆಯ, ಸಿಂಹಳಗಳೆಂಬ ದಕ್ಷಿಣದೇಶದ ಪಶ್ಚಿಮ ದಕ್ಷಿಣಭಾಗಗಳ ಅಧಿಪತಿಯಾಗಿದ್ದನೆಂದು ಮಾತ್ರ ತಿಳಿಯ ಬಹುದು. ಈತನ ಗುರುವು ಮುನಿಚಂದ್ರ ಪಂಡಿತನೆಂಬುದು [3]“ಇದು......ಶ್ರೀಮದುಭಯಕವಿ ಕಮಳಗರ್ಭ ಮುನಿಚಂದ್ರಪಂಡಿತದೇವ ಸುವ್ಯಕ್ತಸೂಕ್ತಿ ಚಂ

---

[1] ಆದಿಪುರಾಣವನ್ನು ಬರೆದ ಪಂಪನು ತನ್ನ ಆಶ್ರಯದಾತೃವಾದ ಅರಿಕೇಸರಿಯ ಹೆಸರನ್ನೇ ತನ್ನ ಆದಿಪುರಾಣದಲ್ಲಿ ಯಾವ ಸಂದರ್ಭದಲ್ಲಿಯೂ ಹೇಳಲಿಲ್ಲ. ಆದರೆ ಅವನನ್ನು ಉದ್ದೇಶಿಸಿ ಅರ್ಜುನ ಸಾಮ್ಯದಿಂದ ವಿಕ್ರಮಾರ್ಜುನವಿಜಯವೆಂಬ ಬೇರೊಂದು ಗ್ರಂಥವನ್ನೇನೋ ಬರೆದಿರುವನು. ಪೊನ್ನನು ತನಗೆ ಆಶ್ರಯವನ್ನುಕೊಟ್ಟದ್ದ ರಾಜನನ್ನುದ್ದೇಶಿಸಿ ಭುವನೈಕರಾಮಾಭ್ಯುದಯವೆಂಬ ಗ್ರಂಥವನ್ನು ಬೇರೆಯಾಗಿ ಬರೆದಿದ್ದರೂ (ಇದು ಕೇವಲ ಊಹಾಲಬ್ಧವಾದುದು). ಶಾಂತಿಪುರಾಣವನ್ನು ಬರಿಯಿಸಿದ ಮಲ್ಲಪಾರ್ಯ ಪುನ್ನಮಾರ್ಯ ದಂಡನಾಥರನ್ನು ತನ್ನ ಶಾಂತಿಪುರಾಣದ ಪೀಠಿಕೆಯಲ್ಲಿ ವಿಶೇಷವಾಗಿ ಸ್ತುತಿಸಿರುವನಲ್ಲದೆ ತನ್ನ ಗುರುವಾದ ಜಿನಚಂದ್ರನನ್ನೂ ಶಾಂತಿನಾಥಜಿನನಿಗೆ ಅಭಿನ್ನನೆಂದು ಕಾವ್ಯದ ಹಲವೆಡೆಗಳಲ್ಲಿ ಹೇಳಿರುವನು. ರನ್ನನಾದರೋ ತನ್ನಿಂದ ಅಜಿತಪುರಾಣವನ್ನು ಬರೆಸಿದ ಅತ್ತಿಮಬ್ಬೆಯ ಚರಿತ್ರೆಯನ್ನೇ ಸಂಕ್ಷೇಪವಾಗಿ ತನ್ನಪುರಾಣದ ಪೀಠಿಕಾ ಪ್ರಕರಣದಲ್ಲಿ ಹೇಳಿರುವನು. ಈ ಕವಿಯಾದರೋ ತನ್ನ ಆಶ್ರಯ ದಾತೃವಾದ ಶಾಂತಿವರ್ಮನನ್ನು ಪೀಠಿಕೆಯಲ್ಲಿ ವಿಶೇಷವಾಗಿ ಸ್ತುತಿಸಿರುವುದು ಮಾತ್ರವಲ್ಲದೆ ಕಥಾನಾಯಕನಾದ ಪುಷ್ಪದಂತನಿಗೆ ಅಭಿನ್ನನೆಂದೂ ಅಲ್ಲಲ್ಲಿ ವರ್ಣಿಸಿರುವನು.

[2] “ಕರ್ಣಾಟಕೀ ಕರ್ಣಾವತಂಸನುಂ, ಮಳೆಯಮಾನಿನೀ ಮನೋಮಾನಸಹಂಸನುಂ, ಕೇರಳೀ ಕುಚಕಲಶತಾರಹಾರನುಂ, ಸಿಂಹಳ ಸೀಮಂತಿನೀ ಸಿಂಧೂರನುಮೆನಿಸಿ ನೆಗಳ್ವ ನಾಡಪ್ರಭುನಭೋಮಣಿ ಶಾಂತಿವರ್ಮನ ಯಶೋಲತೆಗಾಲಂಬಮಾಗಿ ಮನೋಹರಮಾದ ಕಥಾವನಿತೆಗುದ್ಭವಸ್ಥಾನಮೆಂತೆಂದೊಡೆ”—ಇವು ಮೊದಲಾದ ಕಾವ್ಯಭಾಗಗಳಿಂದ ಇದು ಸ್ಪಷ್ಟವಾಗುವುದು.

[3] ಆಶ್ವಾಸಾಂತ್ಯ ಪದ್ಯಗಳಿಂದ ಇದು ಸ್ಪಷ್ಟಪಡುವುದು.

ದ್ರಿಕಾಪಠನಪರಿಪುಷ್ಟಮಾನಸಮರಾಳ **ಗುಣವರ್ಮ**......"ಎಂಬ ಆಶ್ವಾಸಾಂತ್ಯ ಗದ್ಯಗಳಿಂದ ಸ್ಪಷ್ಟವಾಗುವುದು. ಈ ಮುನಿಚಂದ್ರಪಂಡಿತನು ಉಭಯಕವಿಯಾದುದರಿಂದ ಕನ್ನಡದಲ್ಲಿಯೂ ಪ್ರಸಿದ್ಧಕವಿಯಾಗಿದ್ದಿರಬಹುದು.

ಈತನು ತನ್ನ ಗ್ರಂಥದ ಕಾಲವನ್ನು ಕಂಠೋಕ್ತವಾಗಿ ಎಲ್ಲಿಯೂ ಹೇಳಿಲ್ಲ. ಪೂರ್ವಕವಿಸ್ತವಾವಸರದಲ್ಲಿ [1]ಗುಣವರ್ಮಾದಿ ಪೂರ್ವಕವಿಗಳೊಡನೆ ಜನ್ನಿಗನನ್ನೂ (೧೨೦೦-೧೨೩೫) ಸೇರಿಸಿ ಹೇಳಿರುವುದರಿಂದ ೧೨೩೫ ಕ್ಕಿಂತ (೧೩ ನೆಯ ಶತಮಾನದ ಆರಂಭಕ್ಕೆ) ಹಿಂದಣವನಲ್ಲವೆಂದು ಸ್ಪಷ್ಟವಾಗುವುದು. ಅಂತೆಯೇ ಮಲ್ಲಿಕಾರ್ಜುನನು (೧೨೪೫ ಅಥವಾ ೧೨೬೦) ತನ್ನ ಸೂಕ್ತಿ ಸುಧಾರ್ಣವದಲ್ಲಿ ಈ ಪುಷ್ಪದಂತ ಪುರಾಣದ ಪದ್ಯಗಳನ್ನು ಉದ್ಧರಿಸಿರುವುದರಿಂದ ೧೩ ನೆಯ ಶತಮಾನದ ಪೂರ್ವಾರ್ಧಕ್ಕಿಂತ ಮುಂದಣವನಲ್ಲವೆಂದೂ ನಿರ್ಧರವಾಗಿ ಹೇಳಬಹುದು ಈತನು ತನಗೆ ಆಶ್ರಯವನ್ನಿತ್ತು ಈ ಕಾವ್ಯವನ್ನು ಬರೆಯಿಸಿ ಸ್ವೀಕರಿಸಿದವನು ನಾಟ್ಯಪ್ರಭು ಶಾಂತಿವರ್ಮನೆಂದೂ, ಗುರುವು ಮುನಿಚಂದ್ರ ಪಂಡಿತನೆಂದೂ ಈ ಕಾವ್ಯದಲ್ಲಿ ಹಲವೆಡೆಗಳಲ್ಲಿ ಹೇಳಿಕೊಂಡಿರುವನು. ಆದರೆ ಸೌಂದತ್ತಿಯ (ಸುಗಂಧವರ್ತಿ) ರಟ್ಟರಸರಲ್ಲಿ ಲಕ್ಷ್ಮೀದೇವನ ಮಗನಾದ IV ಕಾರ್ತವೀರ್ಯನಿಗೆ[2] ಲಕ್ಷ್ಮೀದೇವನೆಂಬ ಮಗನಿದ್ದನು. ಇವನ ಗುರು ಅಟ್ಟರಾಜ್ಯ ಪ್ರತಿಷ್ಠಾಚಾರ್ಯನೆಂಬ ಬಿರುದುಳ್ಳ ಮುನಿಚಂದ್ರ ಪಂಡಿತನು. ಈತನು ಕಾರ್ತವೀರ್ಯನಿಗೆ ಮಂತ್ರಿ ಮತ್ತು ಗುರು, ಕಾರ್ತವೀರ್ಯನ ಮಗ

---

[1] ಅನುಗುಣಮಾಗಿ ಕೂಡೆ ಗುಣವರ್ಮನ ಪೊಯ್ಸಿರಿ ಪಂಪನೋಜೆ ಪೊ।
ನ್ನನ ಪೊಸದೇಸೆ ರನ್ನನ ಗುಣೋನ್ನತಿ ಯುಗ್ಗಳನೊಳ್ಪು ನಾಗವ॥
ರ್ಮನ ಬಹುರೀತಿ ನೇಮಿಯ ಚಮತ್ಕೃತಿ ಜನ್ನಿಗನಿಂಪು ನಾಗಚಂ।
ದ್ರನ ರಸವೃತ್ತಿ ರಂಜಿಸುಗೆ ನಿರ್ಣಯಮೆನ್ನಯ ನವ್ಯಕಾವ್ಯದೊಳ್॥ ೧-೩೬ ॥

[2] ಧರಣೀಶಾಗ್ರಣಿ ಕಾರ್ತವೀರ್ಯ ಸುತನಪ್ಪೀ ಲಕ್ಷ್ಮಿದೇವಂಗೆ ಸು।
ಸ್ಥಿರಮಪ್ಪಂತಿರೆ ಧಾತ್ರಿಯಂ ನಯದಿನೇಕಾಯತ್ತಮಂ ಮಾಡಿದಂ॥
ವರಬಾಹಾಬಳದಿಂ ವಿರೋಧಿನೃಪರಂ ಬೆಂಕೊಂಡನೀ ವಾಣಸಾ।
ಭರಣಂ ಶ್ರೀಮುನಿಚಂದ್ರದೇವನಸುಹೃನ್ಮಾತಂಗಕಂಠೀರವಂ॥

ಆರ್ಯಂ ಸಚಿವರೊಳತಿಚಾ।
ತುರ್ಯಂ ಅಟ್ಟೋರ್ವಿಪಪ್ರತಿಷ್ಠಾಚಾರ್ಯಂ॥
ಕಾರ್ಯಧುರಂಧರತೆಯೊಳ್ ।
ದಾರ್ಯದೊಳಾರಿಂದವಧಿಕನೀ ಮುನಿಚಂದ್ರಂ॥

ಆ ಮುನಿಚಂದ್ರ ದೇವನಲಮಾತ್ಯರಿಳಾಸ್ತುತರಿಷ್ಟ ಶಿಷ್ಯರಿಂ।
ತಾಮಣಿ ಕಾಮರಾಜ ತನಯಂ ಕರಣಾಗ್ರಣಿ ಶಾಂತಿನಾಥನು॥
ದ್ದಾಮಪರಾಕ್ರಮಂ ನೆಗಟ್ಟಿ ಕೊಂಡಿಯನಾಗ ನುದಾರಚಾರು ಲ।
ಕ್ಷ್ಮೀಮುಹಿಮಾವಳಂಬನ ಸುಖಾನುಭವಂ ಸಲೆ ಮಲ್ಲಿಕಾರ್ಜುನಂ॥

ಎನೆ ನೆಗಟ್ಟಿ ಮಲ್ಲಿಕಾರ್ಜುನನ ವಂಶಾವತಾರಮೆಂತೆಂದೊಡೆ.

ಲಕ್ಷ್ಮೀದೇವನಿಗೆ ಶಸ್ತ್ರಶಾಸ್ತ್ರ ಶಿಕ್ಷಾಗುರುವು. ಕರಣಿ ಕಾಗ್ರಣಿ ಶಾಂತಿವರ್ಮ, ಕೊಂಡಿಯನಾಗ, ಮಲ್ಲಿಕಾರ್ಜುನ ಎಂಬ ಮೂವರು ಈತನಿಗೆ ಇತರ ಮಂತ್ರಿಗಳು. ಈ ಮೂವರಲ್ಲಿ ಶಾಂತಿನಾಥನು ಇಷ್ಟಶಿಷ್ಟ ಚಿಂತಾಮಣಿಯು. ಕಾಮರಾಜನ ತನಯನು ಎಂದು (ಶಕ ೧೧೫೧-ಕ್ರಿ. ೧೨೨೯) ರಲ್ಲಿ ಪುಟ್ಟಿದ ಕುಂಡಿಯ ಮಲ್ಲಿಕಾರ್ಜುನನ ಒಂದು ಶಾಸನದಲ್ಲಿ ಹೇಳಿರುವುದರಿಂದ ಈ ಶಾಸನದಲ್ಲಿ ನಿರ್ದಿಷ್ಟನಾದ ಶಾಂತಿವರ್ಮನೇ ಈ ಕವಿಯ ಆಶ್ರಯದಾತೃವೆಂದೂ, ಈ ಮುನಿಚಂದ್ರಪಂಡಿತನೇ ಈತನ ಗುರುವೆಂದೂ ನಾವು ಊಹಿಸಿ ತಿಳಿಯುವುದರಿಂದ ಈ ಕವಿಯು ೧೨೩೦ ರಲ್ಲಿ ಇದ್ದಿರ ಬೇಕೆಂದು ಸ್ಪಷ್ಟವಾಗುವುದು.

ಅಲ್ಲದೆ ತನ್ನ ಪಾಂಡಿತ್ಯವು ವಜ್ರದೇವನರನಾಥಾಸ್ಥಾನದಲ್ಲಿ ಶ್ಲಾಘಿಸಲ್ಪಡುತ್ತಿತ್ತೆಂದು ಈ ಕವಿಯೇ ಗ್ರಂಥದ ಪೀಠಿಕೆಯಲ್ಲಿ ಹೇಳಿಕೊಂಡಿರುವನು. (ಶಕ ೧೧೪೩ ಕ್ರಿ. ಶ. ೧೨೨೧) ರಲ್ಲಿ ಹುಟ್ಟಿದ ಶಾಸನ ಒಂದರಲ್ಲಿ[1] ಬಲ್ಲಾಳ ರಾಜನಾದ II ನೆಯ ನೃಸಿಂಹನ ಸೇನಾನಾಯಕ ಬೊಮ್ಮನು ವಜ್ರನ ಸೇನೆಯನ್ನು ಒಕ್ಕಲಿಕ್ಕಿ ಮಡಿದನೆಂದು ಹೇಳಿರುವುದು. ಬಲ್ಲಾಳ II ನೆಯ ನೃಸಿಂಹನನ್ನು ಇದಿರಿಸಿದ ವಜ್ರನು ಈ ಕವಿಯಿಂದ ಉಕ್ತನಾಗಿರುವ ವಜ್ರದೇವನರನಾಥನೇ ಎಂದು ನಾವು ಹೇಳ ಬಹುದಾದುದರಿಂದ ೧೨೨೧ ರಲ್ಲಿಯೇ ಈ ಗುಣವರ್ಮನು ಪಾಂಡಿತ್ಯದಿಂದ ಪ್ರಸಿದ್ಧಿಗೆ ಬಂದಿದ್ದ ನೆಂದು ಸ್ಪಷ್ಟವಾಗುವುದು.

[1] ಮೈಸೂರು ಎಫಿಗ್ರಾಫಿಯಾ ಕರ್ಣಾಟಕ ವಾಲ್ಯುಂ ನಂ 6.

ಹಾಸನ—೧೦೬

ಶ್ರೀ ತೊಲತೊಲಗೆಂದು ಮಾರ್ಮಲೆವ ವಜ್ರನ ಸೇನೆಯ ನೊಕ್ಕಲಿಕ್ಕಿ ತಾಂ।
ತೊಲಗದೆ ನಿಂದು ವೈರಿಭಟರಂ ತವೆ ಕೊಂದು ರಣಾಜಿರಂಗದೊಳ್॥
ಮಲೆದಿದಿರಾಂತರಂ ತಱಿದು ಕಣ್ಬಸವೊತ್ತುವಿನೊಂದು ತಳ್ಗಿನಿಂ
ಕಲಿತನಮಂ ನೃಸಿಂಹನರನಾಥನ ನಾಯಕ ಬೊಂಮ್ಮನುರ್ವಿಯೊಳ್॥

ಬಱಸಿಡಿಲೆಱಗುವ ತೆಱದಿಂ।
ದುಱದಾಂತರನಿಕ್ಕಿ ಪೊಕ್ಕು ಸಂಗರಧರೆಯೊಳ್॥
ಕುಱಿದಱಿದಱಿದಂ ಪಲವರ।
ನುಱುಗಲಿ ನಿಟ್ಟೂರ ಮಾಚಗೌಡನ ಬಮ್ಮಂ॥

ಈ ಕಂದವು ತುಂಬಾ ಅಶುದ್ಧ. ಅರ್ಥವಾಗುವಂತಿಲ್ಲ.

ಯಿದುಱಿದು ಪಿರ್ದ್ದ ಬಮ್ಮಮ।
ವನಕಾ ಸುರಕಾನ್ಕೆಯಿಕ್ಕಿ ನೆಮಗೆಮಗೆಂಬಾ॥
ತಿಱನಿರವ ಮಣ್ಮತಿರೆಸಂ।
ತೊಸ(ದಿಂ) ದಿದಿಗೊರ್ಂಡರಂದು ಸುರಲೋಕದೊಳಂ॥

ಸ್ವಸ್ತಿ ಶ್ರೀ ಸಕವರಿಷ ೧೧೪೩ ನೆಯ ವಿಕ್ರಮ ಸಂವತ್ಸರದ ಫಾಲ್ಗುಣ ಶು. ೫ ಬು. ಶ್ರೀ ವೀರನಾರಸಿಂಹದೇವರು ದೋರಸಮುದ್ರದ ನೆಲೆವೀಡಿನೊಳು ಪೃಥ್ವೀರಾಜ್ಯಂಗೆಯ್ಯುತ್ತುಂ ವಜ್ರ ದೇವನ ಮೇಲೆ ಮಾಧವದಂಣಾಯಕರದಂಡ ಹಳ್ಳದಿಂತನಱಿಯ ಕಾಳಗದಲ್ಲಿ ನಿಟ್ಟೂರ ಮಾಚ ಗೌಡನ ಮಗ ಬೊಂಮಯ ನಾಯಕ ಕಾದಿ ಸುರಲೋಕ ಪ್ರಾಪ್ತನಾದ–ಮಂಗಳ ಮಹಾ ಶ್ರೀ ಶ್ರೀ

ಕಾರ್ತವೀರ್ಯನ ಕರಣಿಕಾಗ್ರಣಿಯು ಒಬ್ಬ ಶಾಂತಿವರ್ಮನೆಂದು ಶಾಸನದಲ್ಲಿ ಕೀರ್ತಿತ ವಾಗಿರುವುದು. ಈ ಕವಿಯೂ ಕೂಡ ತನ್ನ ಈ ಗ್ರಂಥದ ಪೀಠಿಕೆಯಲ್ಲಿ

ಎಂದೋರಂತಿರೆ ವಜ್ರದೇವನರನಾಥಾಸ್ಥಾನದೊಳ್ ಕೂರ್ತ ನ ।
ಣ್ಪಿಂದಂ ಕೋವಿದರೆಯ್ದೆ ಕೊಂಡುಕೊನೆಯಲ್ ಕೇಳ್ದೞ್ಕಱಿಂ ಶಾಂತಿ ವ ॥
ರ್ಮಂ ದೀನಾನತವರ್ಮನಾದರಿಸಿ ನೀಂ ಪೇೞಿಂದೊಡೀಗಳ್ ಮನಂ ॥
ದಂದೆಂ "ಪೊಲ್ಗಡ ಮರ್ದೆ"ನಲ್ ಜಿನಕಥಾವಿಸ್ತಾರಮಂ ಸಾರಮಂ ।

ಈ ಪದ್ಯವನ್ನು ಬರೆದಿರುವನು. ಕವಿಚರಿತ್ರಕಾರರು ಈ ಪದ್ಯದಲ್ಲಿ ಉಕ್ತನಾಗಿರುವ ವಜ್ರದೇವನೇ ಶಾಸನೋಕ್ತನಾದ ಕಾರ್ತವೀರ್ಯನೆಂದೂ, ಈತನ ಕರಣಿಕನಾದ ಶಾಂತಿವರ್ಮನ ಆಶ್ರಯದಿಂದ ಈ ಪುಷ್ಪದಂತ ಪುರಾಣವನ್ನು ಕಾರ್ತವೀರ್ಯನ ಸಭೆಯಲ್ಲಿ ಬರೆದಂತೆಯೂ ಅಭಿಪ್ರಾಯ ಪಟ್ಟಿರುವಂತೆ ಕಾಣುವುದು.[1] ಅಲ್ಲದೆ ಕವಿಚರಿತ್ರಕಾರರು ಈ ಪದ್ಯದ ಆಧಾರದಿಂದಲೇ ೧೨೦೨ರಿಂದ ೧೨೨೦ ರ ವರೆಗೆ ಆಳಿದ ಕಾರ್ತವೀರ್ಯರಾಜನ ಸಭೆಯಲ್ಲಿ ಈ ಪುಷ್ಪದಂತಪುರಾಣವು ರಚಿತವಾದುದೆಂದು ಹೇಳಿ ಈ ಕವಿಯು ಪೂರ್ವಕವಿಸ್ತವಾವಸರದಲ್ಲಿ ಹೊಗಳಿರುವ ಜನ್ನನು (೧೨೩೦ ರಲ್ಲಿ ಅನಂತನಾಥಪುರಾಣವನ್ನು ಬರೆದವನು) ೧೨೩೦ ರ ವರೆಗೂ ಇದ್ದುದರಿಂದ ಇದಕ್ಕೆ ವಿರುದ್ಧವಾಗದಂತಿರಬೇಕೆಂದು ಈ ಕವಿಯ ಕಾಲವನ್ನು ೧೨೩೫ ಎಂದು ಕವಿಚರಿತ್ರೆಯಲ್ಲಿ ಹೇಳಿರುವಂತೆ ಕಾಣುವುದು. ಇದನ್ನೇ ಡಾಕ್ಟರ್. ವೆಂಕಟಸುಬ್ಬಯ್ಯನವರು 'ಕವಿಚರಿತ್ರಕಾರರು ಹೇಳಿರುವ ಈ ಕವಿಯ ಕಾಲದಲ್ಲಿ ಎಂದರೆ ೧೨೩೫ ರಲ್ಲಿ ಕಾರ್ತವೀರ್ಯನಾಗಲಿ ಅವನ ಮಗ ಲಕ್ಷ್ಮೀದೇವನಾಗಲಿ ಇರಲಿಲ್ಲವಾದುದರಿಂದ (ಕೆಲವು ಕವಿಗಳ ಜೀವಮಾನ. ಪುಟ. ೧೨೧) ಈ ಕವಿಯು IV ನೆಯ ಕಾರ್ತವೀರ್ಯನ ಸಭೆಯಲ್ಲಿ ಈ ಪುಷ್ಪದಂತ ಪುರಾಣವನ್ನು ಬರೆದುದು ಅಸಂಭವವೆಂದು ಹೇಳಿ ಜನ್ನನು ಯಶೋಧರಚರಿತ್ರೆಯನ್ನು ಬರೆದ ಕಾಲದಿಂದ ಎಂದರೆ ೧೨೦೯ ರಿಂದ ಈ ಕಾರ್ತವೀರ್ಯನ ಆಳಿಕೆಯ ಅಂತ್ಯಕಾಲವಾದ ೧೨೨೦ ರೊಳಗೆ ಎಂದರೆ ಸು. ೧೨೧೬ ರಲ್ಲಿ ಈ ಕಾವ್ಯವನ್ನು ಬರೆದಿರುವನು ಎಂದು ನಿರ್ಧರಿಸಿರುವರು.[2] ಇದರಿಂದ ಇವರೂ ಕೂಡ ಕವಿಚರಿತ್ರಕಾರರಂತೆಯೇ ಕುಂಡಿಯ ಶಾಸನದಲ್ಲಿ ವ್ಯಪದಿಷ್ಟನಾದ ಪಟ್ಟರ ಕಾರ್ತವೀರ್ಯನೇ ಈ ಕವಿಯು ಹೇಳಿರುವ ವಜ್ರದೇವನರನಾಥನೆಂದೂ ಆತನ ಸಭೆಯಲ್ಲೇ ಈ ಪುಷ್ಪದಂತ ಪುರಾಣವು ಬರೆಯಲ್ಪಟ್ಟಿತೆಂದೂ ಅಭಿಪ್ರಾಯಪಟ್ಟಂತಾಗುವುದು. ಆದುದರಿಂದಲೇ ಇವರು ಕವಿಚರಿತ್ರಕಾರರು ಹೇಳಿರುವ ಈ ಕವಿಯ ಕಾಲವನ್ನು ಮಾತ್ರ ಮಾರ್ಪಡಿಸಲು ಯತ್ನಿಸಿರುವರು.

ಆದರೆ ಮೇಲೆ ಹೇಳಿದ ಪದ್ಯಕ್ಕೆ ಅರ್ಥಮಾಡುವಾಗ ಈ ಪದ್ಯದಲ್ಲಿ ಉಕ್ತವಾಗಿರುವ ಶಾಂತಿವರ್ಮನ ಸ್ಥಿತಿಯೇನೆಂಬುದನ್ನು ಇಬ್ಬರೂ ವ್ಯಕ್ತಪಡಿಸಲಿಲ್ಲ. ಅಲ್ಲದೆ ಪದ್ಯದ ಅರ್ಥವನ್ನು ಸಾವಧಾನವಾಗಿ ಪರ್ಯಾಲೋಚಿಸಿದಂತೆಯೂ ಕಾಣುವುದಿಲ್ಲ. ಹಾಗೆ ಪದ್ಯಾರ್ಥವನ್ನು ವಿಮರ್ಶಿಸುವುದಾದರೆ ಈ ಪುಷ್ಪದಂತ ಪುರಾಣವು ಕಾರ್ತವೀರ್ಯನ ಸಭೆಯಲ್ಲಾಗಲಿ ಪದ್ಯದಲ್ಲಿ ಉಕ್ತ

---

[1] ಇದಕ್ಕೆ "ಕಾರ್ತವೀರ್ಯನ ಹಿತಕ್ಷ್ಮಾಭೃದ್ವಜ್ರನಾಥ ನೆನಲ್ ನಾಟಿಪ್ರಭು" ಆ. (೮-೬೭) ಎಂಬ ಪದ್ಯವು ಸ್ವಲ್ಪ ಕಾರಣವಾಗಿರಬಹುದು.

[2] ಇವರು ಜನ್ನನ ಅನಂತನಾಥಪುರಾಣವನ್ನು ಬರೆದ ಕಾಲವನ್ನು ಗಣನೆಗೆ ತರಲಿಲ್ಲ.

ನಾಗಿರುವ ವಜ್ರದೇವನರನಾಥನ ಆಸ್ಥಾನದಲ್ಲಾಗಲಿ ಬರೆಯಲ್ಪಟ್ಟಿತೆಂಬ ತಾತ್ಪರ್ಯವು ಎಂದೂ ಲಭಿಸುವುದಿಲ್ಲ. “ವಜ್ರದೇವ ನರನಾಥಾಸ್ಥಾನದೊಳ್ ಎಂದೋರಂತಿರೆ ಕೋವಿದರ್ ಕೂರ್ತ ನೆಣ್ಪಿಂದೆ ಕೊಂಡುಕೊನೆಯಲ್ ಅದಂ ಶಾಂತಿವರ್ಮಂ ಕೇಳ್ದು ಎನ್ನಂ ಆದರಿಸಿ ಈಗಳ್ ‘ನೀಂ ಈ ಪುರಾಣಮಂ ಪೇೞಿರ್’ ಎಂದು ಎನಗೆ ಪೇೞಲ್ ಈ ಜಿನಕಥಾ ವಿಸ್ತಾರಮಂ ಪೇೞಲ್ ಮನಂ ದಂದೆಂ” ಎಂಬುದು ಈ ಪದ್ಯದ ಅನ್ವಯವು. ಇದರಲ್ಲಿ ‘ಈಗ ಶಾಂತಿವರ್ಮನು ಈ ಪುರಾಣವನ್ನು ಹೇಳುವಂತೆ’ ತನಗೆ ಹೇಳಿದುದರಿಂದ ಈ ಪುರಾಣವನ್ನು ಬರೆಯುವೆನೆಂದು ಕವಿಯು ಹೇಳುವುದ ರಿಂದ ವಜ್ರದೇವನಿಗೂ ಈ ಪುರಾಣರಚನೆಗೂ ಯಾವ ಸಂಬಂಧವೂ ಇಲ್ಲವೆಂದು ಸ್ಪಷ್ಟವಾಗುವುದು. ಆದರೆ ಈ ಪದ್ಯದಿಂದ ವಜ್ರದೇವನರನಾಥನ ಆಸ್ಥಾನದಲ್ಲಿ ಈ ಕವಿಯ ಪಾಂಡಿತ್ಯವು ಶ್ಲಾಘಿಸಲ್ಪಡು ತ್ತಿತ್ತೆಂಬುದು ಮಾತ್ರ (ಈ ಪದ್ಯದ ಆದಿಭಾಗದಿಂದ) ದೊರಕಿದಂತಾಗುವುದು. ಅಲ್ಲದೆ ಈ ವಜ್ರ ದೇವನೇ ಆ ಕಾರ್ತವೀರ್ಯನೆಂದು ಹೇಳುವುದಕ್ಕೆ ಯಾವ ಆಧಾರವೂ ಇಲ್ಲ. ಆದುದರಿಂದ ಈ ಪದ್ಯೋಕ್ತನಾದ ವಜ್ರದೇವ ನರನಾಥನು “ಹಾಸನದ ಡಿಸ್ಟ್ರಿಕ್ಟಿನ ಶಾಸನ ಪುಸ್ತಕ”ದಲ್ಲಿ ೧೦೬ ನೆಯ ಶಾಸನದಲ್ಲಿ[1] ಉಕ್ತನಾಗಿರುವ II ನೆಯ ಬಲ್ಲಾಳನ ಪ್ರತಿ ದ್ವಂದ್ವಿಯಾದ ವಜ್ರದೇವನೇ ಈ ಕವಿ ಯಿಂದ ಉಕ್ತನಾದ ವಜ್ರದೇವನು ಎಂದು ಹೇಳುವುದರಿಂದ ಯಾವ ಅನುಪಪತ್ತಿಯೂ ಇರಲಾರದು.

ಈ ಕಾರಣಗಳಿಂದ ಈ ಕವಿಯ ಕಾಲವು ಸುಮಾರು ೧೨೦೦ ರಿಂದ ೧೨೩೦ ಎಂದು ಹೇಳು ವುದರಿಂದ ಪ್ರಕೃತ ಸ್ಥಿತಿಯಲ್ಲಿ ತಿಳಿದುಬಂದಿರುವ ವಿಷಯಗಳಲ್ಲಿ ಯಾವುದೊಂದು ವಿರೋಧವೂ ಇರದು.

ಗ್ರಂಥಲೇಖಕವಿಚಾರಂ

ಎಪಿಗ್ರಾಫಿಯ ಇಂಡಿಯ ಬಾಂಬೈ ಬ್ರಾಂಚ, ವಾಲ್ಯು X ರಲ್ಲಿ VIII ನೆಯದಾಗಿ ಮುದ್ರಿ ತವಾಗಿರುವ ಶಾಸನವು ಕ್ರಿ. ಶ. ೧೨೨೯ II ರಲ್ಲಿ ಲಕ್ಷ್ಮಿದೇವರಸರು ವೇಣುಗ್ರಾಮದಲ್ಲಿರುವಾಗ ದಂಡನಾಯಕ ಮಲ್ಲಿಕಾರ್ಜುನನಮಗ ಕೇಶಿರಾಜನ ಸಿಸು ಮಾದಿರಾಜನಿಂದ ಬರೆಯಲ್ಪಟ್ಟಿತೆಂದು ಶಾಸನದ ಅಂತ್ಯದಲ್ಲಿರುವ

ಎಸೆವೀಶಾಸನಮಂ ವಿರ।
ಚಿಸಿ ಬರೆದಂ ಪೂರ್ವಜನ್ಮದೊಳ್ ಸುಕೃತಮನಾ॥
ರ್ಜಿಸಿ ಕೇಸಿರಾಜ ವಿಭುವಿನ।
ಸಿಸುವೆನಿಸಿದ ಮಾದಿರಾಜನಾ ವಿಭುಮತದಿಂ॥

ಎಂಬ ಪದ್ಯದಿಂದ ವ್ಯಕ್ತವಾಗುವುದು. ಸಾಮಾನ್ಯವಾಗಿ ಶಾಸನಗಳಲ್ಲಿ ಪದ್ಯಮೊದಲಾದವು ಗಳ ರಚನೆಯು ಪಂಡಿತರದು, [2]ಬರವಣಿಗೆಯು ಅಂದವಾಗಿ ಬರೆವ ಶಕ್ತಿಯುಳ್ಳ ಬರಹಗಾರನದು. ಕಂಡರಿಸುವವನು ಮಾತ್ರ ಓಜನು. ಈ ಶಾಸನವಾದರೋ ಮಾದಿರಾಜನಿಂದ ರಚಿಸಲ್ಪಟ್ಟು ಅವನಿಂ

[1] ಶಾಸನಸಂಗ್ರಹವನ್ನು ಪುಟ ix ರಲ್ಲಿ ಕೊಟ್ಟಿದೆ.

[2] ಪಂಡಿತರಬರವಣಿಗೆಯು ಅಸ್ಪಷ್ಟವೆಂಬುದು “ಪ್ರಯತ್ನಲಿಖಿತಾನ್ಯಪ್ಯಸ್ಪಷ್ಟಾನಿ ನಿಯೈದಿಕಾ ಕ್ಷರಾಣಿ” ಎಂಬ ಮುದ್ರಾರಾಕ್ಷಸ ನಾಟಕದ ವಾಕ್ಯದಿಂದ ಬಹುಕಾಲದಿಂದ ಬಂದ ಹೆಸರುವಾಸಿ ಯಾಗಿರುವುದು.

ದಲೇ ಬರೆಯಲ್ಪಟ್ಟಿರುವುದು. ಇದರಿಂದಲೇ ಈ ಶಾಸನ ಲೇಖಕನಾದ ಮಾದಿರಾಜನು ಲಿಪಿ ಲೇಖನದಲ್ಲಿ ಪ್ರಸಿದ್ಧನೆಂದು ವ್ಯಕ್ತವಾಗುವುದು. ಪುಷ್ಪದಂತ ಪುರಾಣದ ಲೇಖಕನಾದ ಮಾದಿರಾಜನೂ, ಸುಂದರವಾದ ಬರವಣಿಗೆಯನ್ನು ಬರೆಯುತಕ್ಕವನೆಂದು ಶ್ಲಾಘಿಸಲ್ಪಟ್ಟಿರುವವನು.[1]* ಅಲ್ಲದೆ ಈ ಶಾಸನವನ್ನು ಬರೆದ ಮಾದಿರಾಜನು ಆ ಶಾಸನ ಕಾವ್ಯ ಭಾಗವನ್ನೂ ರಚಿಸಿರುವುದರಿಂದ ಪಂಡಿತನೆಂದು ವ್ಯಕ್ತವಾಗುವುದು. ಈ ಪುರಾಣವನ್ನು ಬರೆದ ಮಾದಿರಾಜನೂ ಮಾದಿರಾಜವಿಬುಧನು. ಆ ಶಾಸನದಲ್ಲಿ ದತ್ತವಾಗಿರುವ ಭೂಮಿಯು ನವಿಲ್ಗುಂದದ ಕೋಲಿನಲ್ಲಿ ಅಳೆಯಲ್ಪಟ್ಟಿದೆ. ಈ ಪುರಾಣ ಲೇಖಕನೂ ನವಿಲ್ಗುಂದದ ಮಾದಿರಾಜನು. ಈ ವಿಷಯಗಳೆಲ್ಲವನ್ನೂ ಪರ್ಯಾಲೋಚಿಸಿದರೆ ಈ ಶಾಸನವನ್ನು ಬರೆದ ಮಾದಿರಾಜನೇ ತತ್ಕಾಲದಲ್ಲಿ ರಚಿತವಾಗಿದ್ದ ಈ ಪುಷ್ಪದಂತಪುರಾಣವನ್ನೂ ಬರೆದಿರುವವನೆಂದು ಹೇಳುವುದರಲ್ಲಿ ಯಾವ ವಿರೋಧವೂ ಇರಲಾರದು ಮತ್ತು 'ವಿಬುಧೋದ್ಧೃತ ನವ್ಯಕಾವ್ಯಮಂ ಮಾದಿರಾಜವಿಬುಧಂ ಬರೆದಂ' ಎಂಬ ಪದ್ಯಭಾಗದಲ್ಲಿರುವ ನವ್ಯಶಬ್ದದ ಅರ್ಥಕ್ಕೂ ಸಾರ್ಥಕ್ಯವುಂಟಾಗುವುದು. ಆದುದರಿಂದ ಕವಿಚರಿತ್ರೆಯಲ್ಲಿ ಹೇಳಿರುವ ಪುಷ್ಪದಂತಪುರಾಣ ಲೇಖಕನಾದ ಮಾದಿರಾಜನ ಕಾಲವನ್ನೂ ಕ್ರಿ. ಶ. ೧೨೫೫-೧೨೩೫ ಎಂದು ಮಾರ್ಪಡಿಸಿಕೊಳ್ಳಬಹುದೆಂದು ತೋರುವುದು.

ನಮಗೆ ದೊರೆತ ಆಧಾರಗಳಿಂದ ಸಂಗ್ರಹವಾಗಿ ಈ ಕಾವ್ಯ ಕರ್ತೃವಿನ ಚರಿತವನ್ನು ಸದ್ಯಕ್ಕೆ ಬರೆಯಲಾಗಿದೆ. ವಿಮರ್ಶಕರು ಇದರಲ್ಲಿರಬಹುದಾದ ಕುಂದು ಕೊರತೆಗಳನ್ನು ಸೌಹಾರ್ದದಿಂದ ತಿಳಿಯಪಡಿಸುವುದಾದರೆ ಮುಂದಣ ಮುದ್ರಣಗಳಲ್ಲಿ ಸರಿಪಡಿಸಿಕೊಳ್ಳಲಾಗುವುದು.

ಈ ಮುದ್ರಣಕ್ಕೆ ಬೇಕಾದ ಹಸ್ತಲಿಖಿತ ಪ್ರತಿಗಳನ್ನು ಪ್ರಯೋಜನಾಪೇಕ್ಷೆಯಿಲ್ಲದೆ ಸ್ವಂತವಾದ ಉತ್ತರವಾದಿತ್ವವನ್ನು ವಹಿಸಿ ಕಳುಹಿಸಿಕೊಟ್ಟು ಉಪಕರಿಸಿದ ಆರಾ ಸೆಂಟ್ರಲ್ ಜೈನ ಲೈಬ್ರರಿಯ ಅಧಿಕಾರಿಗಳಾದ ಕೆ ಭುಜಬಲಿಶಾಸ್ತ್ರಿಗಳವರಿಗೂ, ಮೈಸೂರು ಸರ್ಕಾರದ ಓರಿಯಂಟಲ್ ಲೈಬ್ರರಿಯಿಂದ ನಮಗಾಗಿ ಪುಸ್ತಕಗಳನ್ನು ಕಳುಹಿಸಿಕೊಡುವಂತೆ ಅನುಕೂಲ್ಯವನ್ನು ಕಲ್ಪಿಸಿಕೊಟ್ಟ B. M. ಶ್ರೀ ಕಂಠಯ್ಯ, M. A. (ಮೈಸೂರು ವಿಶ್ವವಿದ್ಯಾಲಯದ ರೆಜಿಸ್ಟ್ರಾರ್) ರವರಿಗೂ ನಮ್ಮ ಮನಃಪೂರ್ವಕವಾದ ಧನ್ಯವಾದಗಳನ್ನರ್ಪಿಸಿ ಈ ಮುನ್ನುಡಿಯನ್ನು ಉಪಸಂಹರಿಸಿರುವೆವು.

ಇಂತು

ಗ್ರಂಥಪ್ರಕಾಶಕರು,

A. VENKATA RAO

and

H. SESHA IYENGAR

[1] *ಬಿಂದುವಿನೊಂದುಶೋಭೆ ತಲೆಕಟ್ಟಿನ ಪೊರ್ಕುಳಿ ಚೆಲ್ವು ಮಾತ್ರೆಯೊಳ್ ।
ನಿಂದ ಬೆಡಂಗು ಬಳ್ಳಿಯೊಳೊಡಂಬಡುತಿರ್ಪ ನಯಂ ವಿಸರ್ಗದೊ ॥
ಳ್ಪೊಂದಿರಲಕ್ಕರಕ್ಕೆ ಬರೆವಂ ಚತುರರ್ ಪರಿವರ್ಣಿಸಲ್ ನವಿ ।
ಲ್ಗುಂದದ ಮಾದಿರಾಜವಿಬುಧಂ ವಿಬುಧೋದ್ಧೃತನವ್ಯಕಾವ್ಯಮಂ ॥

## (1) ಸೌಂದತ್ತಿ (ಸುಗಂಧವರ್ತಿ)ಯ ರಟ್ಟರ ವಂಶಾವಳಿ.



## (2) ಸೌಂದತ್ತಿಯ ರಟ್ಟರ ಮತ್ತು ಅವರ ಅಧಿರಾಜರ ಕಾಲ:—

| (ರಟ್ಟರಾಜರು) | (ಅಧಿರಾಜರು) | (ಕಾಲ) |
|---|---|---|
| ಪೃಥ್ವೀರಾಮ | ರಾಷ್ಟ್ರಕೂಟ—ಕೃಷ್ಣರಾಜ (ಶಕ. 798 ರಿಂದ 825) | ಸು. 800 |
| ಶಾನ್ತಿವರ್ಮ | ಚಾಲುಕ್ಯ ತೈಲಪದೇವ II (ಶಕ 895—919) | 903 |
| ಕಾರ್ತವೀರ್ಯ I | ಚಾಲುಕ್ಯ ಸೋಮದೇವ I (ಶ. 895—919 ?) | ... |
| ಅನ್ಕ | ಚಾಲುಕ್ಯ ಸೋಮದೇವ I | 971 |
| ಕನ್ನ II | | 1009 |
| II ಕಾರ್ತವೀರ್ಯ | ಚಾ—ಸೋಮದೇವ II (ಶ. 991—998) ಮತ್ತು | |
| | ಚಾ—ವಿಕ್ರಮಾದಿತ್ಯ II (ಶ. 998—1049) | 1010 |
| II ಸೇನ | ಚಾಲುಕ್ಯ ವಿಕ್ರಮಾದಿತ್ಯನ ಮಗ ಜಯಕರ್ಣ (ಸ್ವತಂತ್ರನಾದ ಬಳಿಕ) | ಸು. 1050 |
| IV ಕಾರ್ತವೀರ್ಯ ಮತ್ತು ಮಲ್ಲಿಕಾರ್ಜುನ | ಸ್ವತಂತ್ರರು | 1124—1127 |
| V ಕಾರ್ತವೀರ್ಯ | ,, | 1141 |
| II ಲಕ್ಷ್ಮೀದೇವ | ,, | 1151 |

(3) ಹೊಯ್ಸಳ ವಂಶದರಸರ ವಂಶವೃಕ್ಷ:—

ಸಳ—1006

ನೃಪಕಾಮ - 1022 - 27 (47)

ವಿನಯಾದಿತ್ಯ 1047 - 1100

ಎಱೆಯಂಗ (1063—1093) ಯುವರಾಜನಾಗಿದ್ದುದು

I ಬಲ್ಲಾಳ 1100—1106 ಬಿಟ್ಟಿದೇವ 1111 - 1141 ಉದಯಾದಿತ್ಯ 1123

I ನರಸಿಂಹ 1141—1173

II ಬಲ್ಲಾಳ 1173 - 1220

II ನರಸಿಂಹ 1220 (17) - 1235 (ವಜ್ರದೇವನ ಪ್ರತಿದ್ವಂದ್ವಿ)

ಶಕ 1143 + 78 = ಕ್ರಿ. ಶ. 1221

ಸೋಮೇಶ್ವರ 1235 - 1254 (62)

III ನರಸಿಂಹ 1254 - 1291 ರಾಮನಾಥ 1254 - 1295

III ಬಲ್ಲಾಳ 1291 - 1342 ವಿಶ್ವನಾಥ - 1295—97

IV ಬಲ್ಲಾಳ 1343.........

ಶ್ರೀ

ಗುಣವರ್ಮ ವಿರಚಿತಮಪ್ಪ

# ಪುಷ್ಪದಂತಪುರಾಣಂ



## ಪ್ರಥಮಾಶ್ವಾಸಂ.

ಸ್ರ॥ ಶ್ರೀಪೌಲೋಮೀಶಭೂಭೃತ್ಸಮುದಯವಿನುತಂಗಳ್ ತಮಸ್ತೋಮಚೈತ್ರಾ ।
ದೀಪಂಗಳ್ ದರ್ಶಿತಾಶಾಂಬರಸಕಲಪದಾರ್ಥಕ್ರಮಂಗಳ್ ಸದಾಲೋ ॥
ಕಾಪದ್ವಿಚ್ಛೇದಕಂಗಳ್ ಮಹದಮೃತನಿಧಿಸ್ಫೂರ್ತಿಗಳ್ ಪುಷ್ಪದಂತ ।
ಶ್ರೀಪಾದಂಗಳ್ ಸಮುತ್ಪಾದಿಸುಗೆಮಗೆ ಹೃದಿಂದೀವರಾನಂದದೊಳ್ಪಂ ॥ ೧ ॥

ಮ॥ ಅನಿಶಂ ಸ್ವಾತ್ಮಗುಣಪ್ರಬುದ್ಧರೆನಿಸಿರ್ದುಂ ಮುಕ್ತರಾದಂ ನಿರಂ ।
ಜನರಾಗಿರ್ದುಮಶೇಷಲೋಕನಿಹಿತಾರ್ಥಗ್ರಾಹಿಗಳ್ ಯೋಗವ ॥
ರ್ತನಮೊಂದುಂ ತಮಗೆಂದುಮಿಲ್ಲೆನಿಸಿಯುಂ ಸಿದ್ಧರ್ಕಳೆಂದೆಂಬ ಪೆಂ ।
ಪಿನಮೂರ್ತರ್ ಪರಮಾತ್ಮರುದ್ಧರಿಸುಗೆಮ್ಮಂ ಸಿದ್ಧಿಯುಪ್ಪನ್ನೆಗಂ ॥ ೨ ॥

ಮ॥ಸ್ರ॥ ವರಪಂಚಾಚಾರಮಾಚಾರವನೊದವಿಸೆ ಷಟ್ತ್ರಿಂಶ[ದುದ್ಯ]ದ್ಗುಣಂ ಬಿ ।
ತ್ತರದಿಂದಂ ಸದ್ಗುಣವ್ರಾತದೊಳೆನುವಿಸೆ ಸಮ್ಯಕ್ತಪಃಶೀಲಜಾಲಂ ॥
ಪೊರೆದಂತೇವಾಸಿಭವ್ಯಾವಳಿಗತುಳತಪಃಶೀಲಮಂ ಮಾಡೆ ಲೋಕೋ ।
ತ್ತರರಾದಾಚಾರ್ಯರೆಮ್ಮಂ ನಿಯಮಿಸುಗೆ ನಿಜಾನುಗ್ರಹಪ್ರೌಢಿಯಿಂದಂ ॥ ೩ ॥

ಮ॥ ನಯವಾದಂ ನಯಮಾಗಿ ಕೂಡೆ ಪೊಳೆಯಲ್ ನಿಕ್ಷೇಪಮಾಕ್ಷೇಪಮಾ ।
ರಯಮಿಲ್ಲೆಂದೆನಿಸಲ್ ಪ್ರಮಾಣಗದಿತಾರ್ಥಂ ಸಂಶಯಂಗೊಳ್ವವಾ ॥
ದಿಯೊಳುಂಟಾಗೆ ಲಸತ್ಪ್ರಮಾಣಮತಿಯುಂ ರತ್ನತ್ರಯಂ ಮುಕ್ತ್ಯಲಂ ।
ಕ್ರಿಯೆಯಾಗಲ್ ಮಿಗೆ ಪೇೞ್ವರೀಗೆಮಗುಪಾಧ್ಯಾಯರ್ ಸುಖೋಪಾಯಮಂ ॥ ೪ ॥

ಬಗೆ ತತ್ತ್ವಾರ್ಥವಿನಿಶ್ಚಯಂಬಡೆಯೆ ನೈರ್ಗ್ರಂಥ್ಯಂ ಪೊದಟ್ದಿತ್ತು ಶಾಂ ।
ತಿಗಡರ್ಪಾಗಿರಲುಗ್ರಕರ್ಮರಿಪುವಂ ನಿರ್ಮೂಲನಂಮಾಡುವು ॥
ಜ್ಜುಗಮಾಯೊತ್ತಿಂದಿರಲಪ್ರಮತ್ತತೆಯೊಳೆನ್ನಪ್ರೀತಿಶೀಲಕ್ಕೆ ಕೇ ।
ಡೊಗೆದತ್ತೆಂಬ ವಿರುದ್ಧವೃತ್ತರೆಮಗೊಳ್ಪಂ ಮಾೞ್ಕೆ ಸಾಧೂತ್ತಮರ್ ॥ ೫ ॥

ಕಂ॥ ಎಮಗೀಗೆ ಪಂಚಗುರುಪದ ।
ಕಮಲಂಗಳ್ ಕಡೆಯುದೊಂದೆ ಕಲ್ಯಾಣಮನೇ ॥
ವೆಮೊ ಮಿಕ್ಕಾನಾಲ್ಕುಮವನಿ ।
ಗೆ ಮಾಣ್ಗೆ ತಾಂ ಮೇಣಿದೊಂದೆ ಮುಖ್ಯಪ್ರಕೃತಂ ॥ ೬ ॥

ಚಂ॥ ಜಿನಪರಮೇಷ್ಠಿಚಾರುಚತುರಾನನದಿಂದೊಗೆತಂದು ಸಂದ ಸ್ಯೈ ।
ಪಿನ ಗಣನಾಥವಕ್ತ್ರಸರಸೀರುಹಕೇಳಿನಿವಾಸದಲ್ಲಿ ನ ॥
ರ್ತನಮನೊಡರ್ಚಿ...ವಿನಯಾನನದಿಂ........ ।
ದಿನಿಸುಬಟಿಲ್ದ ವಾಗ್ವನಿತೆ ವಿಶ್ರಮಿಸಿರ್ಕೆ ಮದಾನನಾಬ್ಜದೊಳ್ ॥ ೭ ॥

ಶಾ॥ ಸ್ವಚ್ಛಂಗಳ್ ನಿಜದಿಂ ವಿರಕ್ತವಿನುತಂಗಳ್ ಸಂದನರ್ಘ್ಯಂಗಳ ।
ಸ್ತಚ್ಛಿದ್ರಂಗಳನೂನಮಂಗಳಕರಂಗಳ್ ಸಂತತಾಂತಸ್ತಮೋ ॥
ವಿಚ್ಛೇದಂಗಳುಪಾತ್ತಸೂತ್ರಗತಿಗಳ್ ರತ್ನತ್ರಯಂಗಳ್ ಹೃದ ।
ವ್ಯಚ್ಛಿನ್ನಾಭರಣಂಗಳಕ್ಕೆಮಗೆ ಮುಕ್ತಿಶ್ರೀ ಮನಂಗೊಳ್ವಿನಂ ॥ ೮ ॥

ಚಂ॥ ಇಹಪರಸೌಖ್ಯಮೆಂಬೆರಡುಮಿಲ್ಲದ ನಾಸ್ತಿಕಧರ್ಮದಿಂದಮೊಂ ।
ದಿಹಮನೆ ‘ಖಲ್ವಬಿಲ್ವ ವಿಧಿ’ಯಿಂದಿನಿಸೆಯ್ದಿಪ ಸೌಗತಾದಿದು ॥
ರ್ವಿಹಿತಕುಧರ್ಮದಿಂದಮಿಹಮುಂ ಪರಮುಂ ಬಗೆದಂತೆ ಮಾಳ್ಪ ಸ ।
ನ್ಮಹಿತಜಿನೇಂದ್ರಧರ್ಮಮಭಿವಾಂಛಿತದಾಯಿ ಯೆನಿಪ್ಪುದೊಪ್ಪದೇ ॥ ೯ ॥

ಮ॥ ಕನಕಚ್ಛಾಯೆಯಿನಾಳ್ದ ದೇಹರುಚಿ ಚೆಲ್ವಂ ಬೀಱೆ ದೋರ್ವಲ್ಲಿ ನಾ ।
ಲ್ಕೆನಸುಂ ತಳ್ತಿರೆ ಖಡ್ಗಖೇಟಕಲಸದ್ವಜ್ರಾಬ್ಜಮೊಳ್ಪೊಪ್ಪುವಾ ॥
.................................ರಕ್ಷಿಪ್ಪ ಮಾಕಾಳಿಯು ।
ಕ್ಷೆ ನವೀನಾಭರಣಾಂಗೆ ಮತ್ಕೃತಿಗೆ ಮಾಟಿಕ್ಕೋರಂತೆ ನಿರ್ವಿಘ್ನಮಂ ॥ ೧೦ ॥

ಉ॥ ಸ್ಫೂರಿಪ...ನವ್ಯಕುಮುದದ್ಯುತಿಮತ್ತನು ಕೂರ್ಮವಾಹನಂ ।
ಸ್ಫಾರಕಶಾತ್ರಿಶೂಲಘನದಂಡಕುಠಾರಚತುಷ್ಟಯೋಲ್ಲಸ ॥
ದ್ಭೂರಿಭುಜಾಚತುಷ್ಟಯನಶೇಷ ಜಿನೇಶ್ವರಧರ್ಮವರ್ತಿ ವಿ ।
ಸ್ತಾರಕನೀಗೆ ಕೂರ್ತಜಿತಯಕ್ಷನವಿಘ್ನವಚೋವಿಲಾಸಮಂ ॥ ೧೧ ॥

ಚಂ॥ ಹರಿಹರಪದ್ಮಜಾದಿಗಳನೋವದೆ ಕಂತು ಲತಾಂತಬಾಣಮೊಂ ।
ದೆರಡೞಿನೆಚ್ಚು ಗೆಲ್ದ ಜಯದಗ್ಗದ ಸುಗ್ಗಿಯ ಪೊೞ್ಗಿದೆಂದು ಬಂ ॥
ದಿರದೆ ಪೊಣರ್ಚೆ ಸೋಲ್ತು ವಿಜಯಧ್ವಜಮಂ ತೆಱೆದೆತ್ತು ಪೋದುದಂ ।
ನಿರವಿಪ ಪುಷ್ಪದಂತಮಕರಧ್ವಜನೀಗೆ ಮನೋನುರಾಗಮಂ ॥ ೧೨ ॥

ಕಂ॥ ಗೌತಮ ಸುಧರ್ಮ ಜಂಬೂ ।
ಖ್ಯಾತ ವಿಶುದ್ಧಾನುಬದ್ಧ ಕೇವಲಿಗಳಭಿ ॥
ದ್ಯೋತಿಸುಗೆ ಭವತಮೋಹರ ।
ಣಾತಿಶಯಂಬಡೆವ ವಿಮಳರತ್ನತ್ರಯಮಂ ॥ ೧೩ ॥

ಓವುಗೆ ಮನ್ಮತಿಯಂ ಶ್ರುತ ।
ಕೇವಲಿಗಳ್ ಮೊದಲ ವಿಷ್ಣುಮುನಿವೆರಸು ಜಗ ॥
ತ್ಸೇವಿತ ನಂದ್ಯಪರಾಜಿತ ।
ಗೋವರ್ಧನ ಭದ್ರಬಾಹುವೆಂದಿಂತಯ್ವರ್ ॥ ೧೪ ॥

ದಶಪೂರ್ವಿಗಳೀವನುಪಮ ।
ದಶವಿಧಸಮ್ಯಕ್ತ್ವಮಣಿಗಳೊಲ್ಪಂಗೈಕಾ ॥
ದಶಧಾರಿಗಳೀವೇಕಾ ।
ದಶನಿಳಯದ ಸಂಪದಂಗಳಕ್ಕೆಮಗೆಂದುಂ ॥ ೧೫ ॥

ಆಚಾರಾಂಗಧರರ್ ಪರ ।
ಮಾಚಾರಪವಿತ್ರರೆನಿಪ ಮುನಿಗಳ್ ಸಂ ॥
ದಾಚಾರಸೂತ್ರಮಂ ಮಿಗೆ ।
ಗೋಚರಿಸುಗೆ ಕಳೆದು ಹೃದಯಮಣಿಗಳ ಮಲಮಂ ॥ ೧೬ ॥

ಅತಿಶಯತಪದಿಂ ಪಡೆದೊಡೆ ।
ಚತುರಂಗುಳಚಾರಣರ್ದ್ಧಿಯಂ ಪದೆದರ್ಜ ॥
ತ್ಪತಿ ಮೆಚ್ಚಿತ್ತಂ ತ್ರಿಪ್ರಾ ।
ಭೃತಮನೆನಲ್ ಕೊಂಡಕುಂದಮುನಿಪತಿ ಸಂದಂ ॥ ೧೭ ॥

ನುಡಿದುದೆ ತತ್ವಾರ್ಥಂಕೆ ।
ಯ್ವಿಡಿದುದೆ ಸತ್ವೈಕಹಿತಕರಂ ಕುಂದದೆ ತಾಂ ॥
ನಡೆದುದೆ ಸನ್ಮಾರ್ಗಮಿದೇಂ ।
ಪೊಡವಿಯೊಳುತ್ತಮನೊ ಗೃಧ್ರ ಪಿಂಛಾಚಾರ್ಯಂ ॥ ೧೮ ॥

ಚಂ॥ ಅನುಪಮಜೈನಶಾಸನಘನಾಗಮದೊಳ್ ಮಿಗೆ ಧರ್ಮವೃಷ್ಟಿಯಂ ।
ಘನಮೆನೆ ಸಂತತಂ ಸುರಿದರುನ್ನತವೃತ್ತಬಳಾಕಪಿಂಛ ಭೂ ॥
ವಿನುತಮಯೂರಪಿಂಛಮುನಿಪರ್ ಸಫಲಂ ಸಲೆ ಭವ್ಯಸಸ್ಯವಾ ।
ರ್ತೆನಸು ಮಱಿಲ್ಚಿರೋದಸಿಯೊಳೆಯ್ದ ಬಳಾಕಮಯೂರಪಿಂಛಮಂ ॥ ೧೯ ॥

ಕಂ॥ ಅರ್ಹದ್ಬಲಿಮುನಿಪತಿಯ ।
ಭ್ಯರ್ಹಿತವೃತ್ತಿಯನದೇಪೊಗಟ್ವುದೊ ನೆಗಟ್ದಿಂ ॥
ದರ್ಹನ ಮತಮಲ್ಲದುದತಿ ।
ಗರ್ಹಿತಮೆಂದೆನಿಸಿದಂ ಮಹೀಮಂಡಲದೊಳ್ ॥ ೨೦ ॥

ಭೂತಬಲಿ ಮುನಿಪನೇ ವಿ ।
ಖ್ಯಾತಜಿನಂ ದಿವ್ಯಭಾಷೆ ಸಿದ್ಧಾಂತಂ ಮ ॥
ತ್ತೇತೊದಳೊ ಗಣಾಗ್ರಣಿಯೇ ।
ಭೂತಳದೊಳ್ ಪುಷ್ಪದಂತಪರಮಾಚಾರ್ಯಂ ॥ ೨೧ ॥

ಉ॥ ಬಿತ್ತರಮಾಗೆ ಸೂತ್ರಗತಿಯಿಂ ಮಿಗೆ ಪಣ್ಣಿದ ಗಂಧಹಸ್ತಿತೊಂ ।
ಭೆತ್ತಱುಸಾಸಿರಕ್ಕೆ ಶಿವಕೋಟಿಯ ಕೋಟಿ ವಿಪಕ್ಷವಿದ್ವದು ॥
ನ್ಮತ್ತಗಜಂ ಮದಂ ಬಱಿತು ಕೆಯ್ಯಡೆಗೊಟ್ಟುದೆನಲ್ಕೆ ಪೇೞ್ವುದೇಂ ।
ಮತ್ತೆ ಸಮಂತಭದ್ರಮುನಿರಾಜನುದಾತ್ತಜಯಪ್ರಶಸ್ತಿಯಂ ॥ ೨೨ ॥

ಕಂ॥ ಸತತಮಕಳಂಕಮಂದರ ।
ಕೃತಮಥನನಯಪ್ರಮಾಣ ಪಾರಾವಾರೋ ॥
ದ್ಗತಯುಕ್ತ್ಯಮೃತಂ ವಿಬುಧ ।
ಪ್ರತತಿಯ ಮಿಥ್ಯಾತ್ವಮೃತಿಯ ನಳಱುಪುದರಿದೇ ॥ ೨೩ ॥

ಮ॥ ನಿಸದಂ ತನ್ನ ನಿರಾಮಯಾಕೃತಿ ಜಗದ್ವಿಖ್ಯಾತಮಾದತ್ತು ಭಾ ।
ವಿಸೆ ಸರ್ವಾರ್ಥದಸಿದ್ಧಿಯೊಳ್ ತೊಡೆದರ್ಬೋಧಂ ಭವ್ಯಸಂಸೇವ್ಯಮಾ ॥
ಯ್ತು ಸುಹೃತ್ಪದ್ಮದೊಳಿಂಬುವೆತ್ತುದು ಪದನ್ಯಾಸಂ ಗಡಾರಣ್ಣಬ ।
ಣ್ಣಿಸರೋರಂತೆ ಜಿನೇಂದ್ರಬುದ್ಧಿವೆಸರಂ ಶ್ರೀಪೂಜ್ಯಪಾದೇಶನಾ ॥ ೨೪ ॥

ಕಂ॥ ಮೊಂದಿಸಿ ತಮಮಂ ದೃಷ್ಟಿಯೊ ।
ಳೊಂದಿಸಿ ತತ್ವಾರ್ಥಮಂ ಜಗದ್ವ್ಯವಹಾರ ॥
ಕ್ಕಂದು[ರೆ]ಮಾಡಿದ ವಿದ್ಯಾ ।
ನಂದ ಸ್ವಾಮಿಯ ಮಹೋದಯಂ ಕೇವಳಮೇ ॥ ೨೫ ॥

ನಿರುಪಮಸರಸ್ವತೀ ಸುಂ ।
ದರಚತುರಾನನ ನಶೇಷವಿಬುಧಸ್ತುತ್ಯಂ ॥
ಪರಮಬ್ರಹ್ಮ ನೆನಲ್ ಕವಿ ।
ಪರಮೇಷ್ಠಿ ಪುರಾಣಪುರುಷನೆಂಬುದು ಪುಸಿಯೇ ॥ ೨೬ ॥

ಕಂ॥ ವರ ವೀರಸೇನ ಜಿನಸೇ ।
ನರೆಂಬ ಮುನಿವೃಷಭರಾಂತು ಕಲಿಯುಗದೊಳ್ ವಿ ॥
ಸ್ತರಿಸಿ ಜಿನಧರ್ಮರಥಮಂ ।
ಪರಿಯಿಸಿದರ್ ಸಕಲವಸುಮತೀ ಮಂಡಲದೊಳ್ ॥ ೧೭ ॥

ಗುಣಭದ್ರಸ್ವಾಮಿಯ ಗುಣ ।
ದೆಣಿಕೆಗೆ ಜಿಹ್ವಾಸಹಸ್ರಮಂ ಪಡೆದುಮವಂ ॥
ಫಣಿರೂಪದಿನಿರ್ಮಡಿಸಿದ ।
ಫಣೀಶನೇನಣ್ಣ ಬುದ್ಧಿಯೊಳ್ ಪೆರ್ಚಿದನೋ ॥ ೧೮ ॥

ನಡೆವಳಿಯೊಳ್ ತನ್ನ ಸಮಂ ।
ಬಡೆದಾರುಂ ನಡೆದರಿಲ್ಲ ಗಡಮೆಂತೆರ್ದೆಯಂ ॥
ನುಡಿಯುಂ ನಡೆದುಪೊ ಪದುಳಿಕೆ ।
ಯೆಡೆಗೆ ಜಟಾಸಿಂಹಣಂದಿ ಮುನಿಪುಂಗವನಾ ॥ ೧೯ ॥

ಏಲಾನದಿಯಾದುದು ಗಡ ।
ಕಾಲುದಕಂ ನಿಂದಭೂಮಿ ಸಿದ್ಧಾಂತವೆಸ ॥
ಗಾಲಂಬನಮಾಯ್ತು ಗಡೆನ ।
ಲೇಲಾಚಾರ್ಯಪ್ರಸಿದ್ಧಿ ಸಾಧಾರಣಮೇ ॥ ೨೦ ॥

ಕಲಿಕಾಲವಶದೆ ಬೋಧಾ ।
ಕುಲಿತಕುದೃಷ್ಟಿಗಳಡೆಂಗೆ ನಿಜರುಚಿಯಿಂ ಪ ॥
ಜ್ಜಳಿಸಿ ದಿಗಂಬರಕುಲಮಂ ।
ಬೆಳಗಿದ ಯೋಗೀಂದ್ರದೇವಚಂದ್ರನೆ ವಂದ್ಯಂ ॥ ೨೧ ॥

ಚಂ॥ ವದನಮತಿಪ್ರಸನ್ನತೆಯನಾಳ್ದುದು ಶಾಂತಿಯನಾಂತುದಂತ ಮೆ ।
ಯ್ದಿದುದತಿಕಾಂತಿಯಂ ತನು ದಯಾರ್ಣವಮಂ ನೆಲೆವೆರ್ಚಿಸಿತ್ತು ನೋ ॥
ಡಿದೊಡೊಗೆತಂದ ಚಂದ್ರಿಕೆ ಕಳಾಕಳಿತಂ ವಚನಾಮೃತಂ ಮನೋ ।
ಮುದಮನೊಡರ್ಚಿದತ್ತು ವಿಬುಧರ್ಗಿಳೆಯೊಳ್ ಮುನಿಚಂದ್ರದೇವನಾ ॥ ೨೨ ॥

ಕಂ॥ ಭೂತಭವದ್ಭಾವಿಮುನಿ ।
ವ್ರಾತಂ ಸತತಂ ತ್ರಿಹೀನನವಕೋಟೀಸಂ ॥
ಖ್ಯಾತಂ ಮಾನಸಹಂಸ ।
ಪ್ರೀತಿಯನೊಡರಿಕೆ ದಯಾಪಯೋವಾಹಿನಿಯಿಂ ॥ ೨೩ ॥

ಚಂ॥ ವಿಷಯವಿಲೀನಮಾನಸದ ಮಾನಸರಂ ತಿಳಿಪಲ್ಕೆ ವೇಡ ನಿ ।
ರ್ವಿಷಯಿಜಿನೇಂದ್ರರುಂದ್ರ ಕಥೆಯೊಳ್ ನವಭಾವರಸಂಗಳಂ ತಟಂ ॥
ಕಷಮೆನೆ ತೋಱಿ ತದ್ರುಚಿಯ ಮೆಯ್ಯೊಳೆ ಸದ್ರುಚಿಯೊಳ್ ತೊಡರ್ಚವೀ ।
ಮಿಷದ ಕವೀಂದ್ರರೀಗೆ ಸುಖಸೃಷ್ಟಿರತರ್ ಕವಿತಾಪ್ರಸಾದಮಂ ॥ ೩೪ ॥

ಮ॥ ಸ್ರ॥ ಮಣಿಯಂ ತೇರಂಜಿಪಂತೊಪ್ಪಮನೆಸಗುಗೆ ಕೆಯ್ಕೊಂಡು ಕೊಂಡಾಡಿ ವಿದ್ವಾ ।
ಗ್ರಣಿಗಳ್ ಭವ್ಯೌಘಸಂಸೇವ್ಯಮನಮಳವಚೋನವ್ಯಮಂ ಸರ್ವಾರ್ಥಸಿದ್ಧಿ ॥
ಪ್ರಣಯಿಪ್ರೋದ್ಯೋದ್ಯಮಂ ವಿಶ್ರುತನವರಸಭಾವಾಭಿಧಾನವ್ಯಮಂ ಸ ।
ದ್ಗುಣಿವಿದ್ವದ್ಭವ್ಯಮಂ ಶ್ರವ್ಯಮನನುಪಮಮುತ್ಕಾವ್ಯಮಂ ಸತ್ಕವೀಂದ್ರರ್ ॥ ೩೫ ॥

ಚಂ॥ ಅನುಗುಣಮಾಗಿ ಕೂಡೆ ಗುಣವರ್ಮನ ಮೆಯ್ಸಿರಿ, ಪಂಪನೋಜೆ, ಪೊ ।
ನ್ನನ ಪೊಸದೇಸೆ ರನ್ನನ ಗುಣೋನ್ನತಿ ಯಗ್ಗಳನೊಳ್ಪು ನಾಗವ ॥
ರ್ಮನ ಬಹುರೀತಿ ನೇಮಿಯ ಚಮತ್ಕೃತಿ ಜನ್ನಿಗನಿಂಪು ನಾಗಚಂ ।
ದ್ರನ ರಸವೃತ್ತಿ ರಂಜಿಸುಗೆ ನಿರ್ಣಯ ಮೆನ್ನಯ ನವ್ಯಕಾವ್ಯದೊಳ್ ॥ ೩೬ ॥

ಕಂ॥ ಚತುರಾನನನಂ ಬಿಡಿಸಿದ ।
ರತಿಶಯಿತಾರ್ಥಮನೆ ತೋಱಿ ಪದಿರಿಂ ಪೆಱರಾರ್ ॥
ಪತಿಗಳೊಳನುರಕ್ತೆಯೆ ಸರ ।
ಸತಿ ದನಿಯಂ ತೋಱಿ ನೆರೆವಳೆವ್ಮೊಳ್ ಚಿತ್ರಂ ॥ ೩೭ ॥

ಎನಿತಂ ಪದಪದದೊಳ್ ಸಾ ।
ಲ್ವನಿತರ್ಥಮನಿತ್ತೊಡಂ ಮನಂಗೊಳ್ವಳೆ ನು ॥
ಣ್ದನಿಯಂ ತೋಱುತ್ತುಮೆ ವಾ ।
ಗ್ವನಿತೆಯ ನೊಲಿಪೊಂದು ಸೊಬಗು ಸಮನಿಸವೇಡಾ ॥ ೩೮ ॥

ಚಂ। ಅನುಗುಣಮಾಗೆ ವರ್ಣನಮೊಡಂಬಡೆ ರೀತಿ ರಸಕ್ಕೆ ಭಾವವ ।
ಚ್ಚನಿಸಿರೆ ಭಾವದೊಳ್ ಪಮುಳೆಮಾಗಿರೆ ಚೌತಿಱನರ್ಥವೃತ್ತಿಯೊ ॥
ಳ್ದನಿ ಪೊಸದೇಸಿ ಮಾತಿನೊಳುದಾರತೆವೆತ್ತಿರೆ ಸಯ್ತು ಪೇೞ್ವುದಿಂ ।
ಪೆನಿಸೆ ಕವೀಶ್ವರಂ ಕೃತಿಯನಲ್ಲದೊಡೇಕದಱಿಂದು ದಂದುಗಂ ॥ ೩೯ ॥

ಮೃದುಪದಬಂಧಮುಂ ಸುರುಚಿರಾರ್ಥಮು ಮುತ್ಕಟವೃತ್ತಿಯಾಗಿ ತೀ ।
ವಿದ ರಸಮುಂ ಮನಂಗೊಳಿಪ ಭಾವಮು ಮಾರಯಲಿಲ್ಲ ನೂತ್ನಕಾ ॥
ವ್ಯದೊಳೆನವೇಡ ಚೈತ್ರದ ರಸಾಳದ ಗಾಳಿಯ ಕೋಕಿಲಪ್ರಣಾ ।
ದದ ನೆಱೆದಿಂಗಳಿಂಗದಿರ ಸೊಂಪತಿನೂತನಮಿಂಪುವೀಱದೇ ॥ ೪೦ ॥

ಕಂ॥ ರಸವೃತ್ಯಭಿನಯ ಭಾವದ ।
ಪೊಸದೇಸಿಯ ರೂಪನೀಕ್ಷಿಪಂ ಪ್ರೌಢಂ ನಿ ॥
ಟ್ಟಸಿ ಮೈಸಿರಿ ನವಕಾವ್ಯಮಂ ।
* ಕೇಳಿ ಸಂತೋಷಿಪರ್ ಚಿತ್ತದೊಳ್ ॥ ೪೧ ॥

ಉ॥ ನೋಡಿರೆ ಪೂರ್ವದೊಳ್‌ಗಣಧರಾದಿಮಹಾಮುನಿಸತ್ಕವೀಶ್ವರರ್ ।
ಮಾಡಿದ ಪುಷ್ಪದಂತಜಿನನಾಥಪುರಾಣಮನಿಂದು ಕನ್ನಡಂ ॥
ಮಾಡುವೆನೆಂದು ಪೂಣ್ದೆನಿದು ಶಕ್ತಿಯೊ ಭಕ್ತಿಯೊ ವೈನತೇಯನಿ ।
ರ್ದಾಡಿದ ಗಾಳಿವಟ್ಟೆಗೆ ಮನಂಬಿಡೆ ಘೀಂಕಿಡುವಂತೆ ಟಿಟ್ಟಿಭಂ ॥ ೪೨ ॥

ಚಂ॥ ಕತೆ ಕಿಱಿದಾದೊಡಂ ಕತೆಯ ನಾಯಕನುನ್ನತವಂಶವೀರ್ಯವಿ ।
ಶ್ರುತಮಹಿಮಪ್ರಪಂಚಿತಗುಣಂ ಪಿರಿದಂತದಱಿಂದೆ ವರ್ಣನ ॥
ಸ್ಥಿತಿ ಮಿಗೆ ಸಾಲ್ವುದೇ ಗಣಧರಾದಿಗಳುಳ್ಳುದನುಳ್ಳ ಮಾಱ್ಕೆಯಿಂ ।
ಕಥಿಸಿದರಿಲ್ಲಿ ಪೇೞ್ವ ಕವಿಕಲ್ಪಮಿದೆಂಬವ ನಲ್ಪನಲ್ಲನೇ ॥ ೪೩ ॥

ಕಂ॥ ಪಿರಿದುಂ ಜಿನನುತಿಗಲ್ಲದೆ ।
ಪರಮಶ್ರೀವಿಭವಮೆಯ್ದುದೆಂದಾರೆಂದರ್ ॥
ಪರಮಾಣು ಮಾತ್ರಮಮೃತದ ।
ಪರಿಸೇವನೆ ಘಟಿಸಲಮರದೇನಮರತ್ವಂ ॥ ೪೪ ॥

ಎಣೆಯಾಗಿ ಸುಕವಿಯೊಳ್ ಸಂ ।
ದಣಿಸುವರೇಕಯ್ಯ ವಿಬುಧ ಸಭೆಯೊಳ್ ತಾಮೇಂ ॥
ಗಣನೀಯರೆ ಕುಕವಿಗಳಾರ್ ।
ಗಣಿಸಿದಪರ್ ಮುಸುಱಿ ಪರೆವ ನೊರಜಂ ನೊಱಮಂ ॥ ೪೫ ॥

ಪದವಿಡಲಱಿಯಂ ಗಡ ಮಾ ।
ರ್ಗದೊಳೆಂತವನೆಂತೊ ನಡೆವೊನರ್ಥದ ಸೊಂಪಿ ॥
ಲ್ಲದ ಕುಕವಿ ನವರಸಾನುಭ ।
ವದೆ ತನ್ನಂ ಪೆಱರನೆಂತೊ ಪೇೞ್ದಣಿಪಿದಪಂ ॥ ೪೬ ॥

ಥಳಥಳಿಪ ಪದಾರ್ಥವನೇಂ ।
ಗಳ ಕಾಣ್ಬನೆ ದೋಷದೃಷ್ಟಿ ದುರ್ಮತಿ ಗಡದೇಂ ॥
ತಿಳಿವನೆ ಗುಣಸಂತತಿಯಂ ।
ಖಳಂ ಗಡೆಂತುಂ ರಸಂಗಳೊಳ್ಪೊರೆದಪನೇ ॥ ೪೭ ॥

* ೪೧ ನೆಯ ಕಂದದ ಕೊನೆಯಪಾದವೂ ಮತ್ತೊಂದು ವೃತ್ತದ ಮೂರುವರೆಪಾದಗಳೂ ಲುಪ್ತವಾದಂತಿದೆ. “ಕೇಳಿ ಸಂತೋಷಿಪರ್ ಚಿತ್ತದೊಳ್” ಎಂಬುದು ವೃತ್ತದ ಕೊನೆಯ ಭಾಗ ವಾಗಿರ ಬಹುದು.

ಕಂ॥ ತೊಳಗುವ ನಭದೊಳ್ ಪಿತ್ತಾ ।
ವಿಳದೃಷ್ಟಿಗವಿದ್ಯಮಾನಮೇಚಕರುಚಿ ಯೊಂ ॥
ದೆಳಸಿ ಮಿಗೆ ತೋರ್ಪ ತೆಱದಿಂ ।
ಖಳಂಗೆ ಪೊಲನಲ್ತೆ ಕೃತಿಯೊಳಿಲ್ಲದ ದೋಷಂ ॥ ೪೮ ॥

ತಲೆದೂಗನೆ ಖಳನದು ಮೂ ।
ದಲೆಯುಕ್ಕುಂ ಮುಂದೆ ಕೇಳ್ದು ಸತ್ಕವಿಕೃತಿಯಂ ॥
ತಲೆದೂಗೆ ಖಳರ್ಗೆಂದಾ ।
ತಲೆ ಭೂಮಿಗೆ ಭಾರಮೆಂತೊ ಪೇೞಿರ್ ತೂಗಿದಪಂ ॥ ೪೯ ॥

ಉ॥ ಮೆಚ್ಚಿಯುಮೇನೊ ಮೆಚ್ಚದೆಯುಮೇನೊ ಖಳರ್ ವಿಬುಧಾಂತರಂಗಮಂ ।
ಮೆಚ್ಚಿಪ ಕಾವ್ಯರತ್ನಮವರಂ ಮಿಗೆ ಮೆಚ್ಚಿಸದೇ ಸುವೃಷ್ಟಿ ಸೊಂ ॥
ಪಚ್ಚರಿಯಾಗೆ ಸಸ್ಯಚಯಮಂ ಪರಿವರ್ಧಿಸುತಿರ್ಪುದಣ್ಣ ಪೇ ।
ೞುಚ್ಚತಮಾಗೆ ಪೆರ್ಚಿಸದೆ ಮಿಕ್ಕ ತೃಣಾಂಕುರಸಂಕುಳಂಗಳಂ ॥ ೫೦ ॥

ಕಂ॥ ಪುಟ್ಟಿಸಿದ [1][ನದೇ]ಕೆಯೊ ಬಿದಿ ।
ನಿಟ್ಟುರದಿಂ ಲೋಕದೊಳಗೆ ದುರ್ಜನನನಿದಂ ॥
ನಿಟ್ಟಿಸಿ ತಿಳಿದೆಂ ಸುಜನರೊ ।
ಳಿಟ್ಟಣಿಸಿದ ಗುಣಮನಱಿ [ಪಲೇಂ] ಸಂದೆಯಮೇ ॥ ೫೧ ॥

ಖಳನಂ ಗುಣಗಣದಾವಾ ।
ನಳನಂ ಸುಜನಾಂತರಂಗಸಂತೋಷವ್ಯಾ ॥
ಕುಳನಂ ಸಮಗ್ರದೋಷಾ ।
ವಿಳನಂ ಪೆಸರ್ಗೊಂಡು ಬರ್ದುಕುವನ್ನನದಾವಂ ॥ ೫೨ ॥

ವಿಷದಿಂ ಕೊಲ್ವಹಿಯುಂ ನಿ ।
ಟ್ಟುಸಿರಿಂ ಕೊಲ್ವಹಿಯು ಮಳುರ್ವ ದಿಟ್ಟಿಯ ನೋಟಂ ॥
ಮಸಗಿ ಕೊಳಲ್ಕೊಲ್ವಹಿಯುಂ ।
ಪೆಸರ್ಗೊಳೆ ಕೊಲಲಾರ್ಪ ಖಳನೊಳೆಣೆವಂದಪುವೇ ॥ ೫೩ ॥

ಅಕ್ಕಟ ಖಳನಂ ಜವನೇ ।
ಕಿಕ್ಕನೊ ತುತ್ತಾಗಿ ಬಾಯೊಳಿದನಱಿದೆನವಂ ॥
ಪೊಕ್ಕೊಡೆ ತನ್ನೊಡಲಂ ಪೋ ।
ೞ್ದಿಕ್ಕುಗು ಮೆಂದಂಜಿದಂದಮಾಗಲೆ ವೇೞ್ಕುಂ ॥ ೫೪ ॥

---

[1] ಪುಟ್ಟಿಸಿದನೇಕೆಯೋ (ಪಾ).

ಕಂ॥ ಕೊಂದೊಡೆ ಬಿಡೆದವಗುಣಮಿನಿ ।
ಸೆಂದೊಡೆ ಬಿಟ್ಟಪುದೆ ಖಳರೊಳೆಮಗದನೆನಲೇ ॥
ವಂದಪುದವರ್ಗಳ ಭಯಮಂ ।
ಮಾಂದಿಸುವೊಡೆ ಸುಜನಸಂಸ್ತವಂ ಕರಣೀಯಂ ॥ ೪೫ ॥

ಇಲ್ಲದ ಗುಣಮಂ ಪೆಱರೊಳ್ ।
ಸೊಲ್ಲಿಸುವಂ ತನ್ನೊಳುಳ್ಳ ಗುಣಮಂ ತಾ ॥
ನಿಲ್ಲೆಂದಾಡುವ ಪುಸಿಕಂ ।
ಗೆಲ್ಲಿಂದಂ ಬಂದುದಮಮ ! ಸುಜನತೆ ಚಿತ್ರಂ ॥ ೪೬ ॥

ರಸಮಯಮಂ ಕೃತಿಯುಂ ಸೇ ।
ವಿಸಿ ವಿರಸಮನೆಯ್ದಜೋಡುಮಾಡುವ ವಿಬುಧ ॥
ಪ್ರಸರಂ ಪೊಸಮಾವಂ ಸೇ ।
ವಿಸಿ ಬಿದಿರಂ ಪೊಸೆವ ತುಂಬಿಯೊಡನಾಡಿದರೇಂ ॥ ೪೭ ॥

ಕೊಂಡಾಡೆದರಂ ತಮ್ಮಂ ।
ಕೊಂಡಾಡುವರೆಂದು ಪೊಗೞ್ವುದೀ ಧರೆಯಿದನಾಂ ॥
ಕೊಂಡೆಸಗುವೆ ನೀನುಡಿ ಬೆಂ ।
ಗೊಂಡುದು ಸಜ್ಜನರನೊಂದುಮಾತಿನ ಮಱಿಯಿಂ ॥ ೪೮ ॥

ವ॥ ಅದೆಂತೆನೆ :—

ಕಂ॥ ಭಾವಿಸೆ ಚಿತ್ರಮೆನಲ್ ವಿಬು ।
ಧಾವಳಿ ಗುಣವರ್ಮಬುಧನನತಿಕೃಪೆಯಿಂ ಕೂ ॥
ರ್ತೋವಿ ಮುನಿಚಂದ್ರಪಂಡಿತ ।
ದೇವರ್ ಗುರುವಾಗೆ ಕವಿತೆ ಬಂದುದು ಚಿತ್ರಂ ॥ ೪೯ ॥

ತಣಿವಂತಿರೆ ರಸದಿಂ ಬುಧ ।
ರಣಿಯರಮೆಸಗುವುದು ಸುಕವಿ ಸತ್ಕೃತಿಯನಣಂ ॥
ಗುಣವರ್ಮನಾಗಿ ಶಿತಮಾ ।
ರ್ಗಣದಂತುಚ್ಚಳಿಪದಿರ್ಪನಂ ಖಳವಚನಂ ॥ ೫೦ ॥

ಪ್ರಕಟಂ ಸುಕವಿಮಧುವ್ರತ ।
ನಿಕರಮನೆಱಗಿಸುವ ಚೂತಮಂಜರಿ ಕುಕವಿ ॥
ಪ್ರಕರಮಧುಪಕ್ಕೆ ಕೃತಿ ಚಂ ।
ಪಕಮಂಜರಿ ಯೆನಿಸೆ ಪೇೞ್ದಪಂ ಗುಣವರ್ಮಂ ॥ ೫೧ ॥

ಕಂ॥ ಪದಮೆ ಪದಮರ್ಥಮರ್ಥಂ ।
ಪುದಿದ ರಸಂ ತೃಪ್ತಿಕರರಸಂ ಭಾವಂ ಪೊ ॥
ಣ್ಮಿದ ಸದ್ಭಾವಂ ದನಿ ಯಿಂ ।
ಪೊದವಿದ ದನಿ ಯೆನಿಸೆ ಪೇಳ್ದಪಂ ಕವಿತಿಲಕಂ ॥ ೬೧ ॥

ಸ್ವೀಕೃತ ಜಿನಧರ್ಮ ನನಂ ।
ಗೀಕೃತಖಳವರ್ಮ ನಮಳವಾಣೀಕರುಣಾಂ ॥
ಗೀಕೃತಕವಿತಾವರ್ಮ ನ ।
ಪಾಕೃತದುಷ್ಕರ್ಮ ನಮಮ ! ಕವಿ ಗುಣವರ್ಮಂ ॥ ೬೨ ॥

ಕವಿಗಮಕಿವಾದಿವಾಗ್ಮಿ ।
ಪ್ರವರರ್ ಗುಣವರ್ಮನೊಳ್ ಸಮಂ ಬರ್ಪವರಾರ್ ॥
ಕವಿತೆಯೊಳಂ ಗಮಕದೊಳಂ ।
ಕುವಾದಿವಿಜಯದೊಳಮಮೃತವಾಗ್ವೃತ್ತಿಯೊಳಂ ॥ ೬೩ ॥

ವಿವಿಧಕಳಾಭಿಜ್ಞಂ ಭಾ ।
ವವಿದಂ ರಸರಸಿಕನುಚಿತಕವಿತಾಚತುರಂ ॥
ಸುವಿವೇಕನಿಧಾನಂ ವಿಬು ।
ಧವತ್ಸಳಂ ಮಾನಮೇರು ನೃಪತತಿಮಹಿತಂ ॥ ೬೪ ॥

ಚಂ॥ ರತಿ ಪದೆದಂತೆ ಚಂದ್ರಕಿರಣಂಗಳೆ ಪಾಲ್ಗುಡಿದಂತೆ ಮಂದಮಾ ।
ರುತನೊಡಗೂಡಿ ಬಂದಸಹಕಾರಪರಾಗದೊಳಾಡಿದಂತೆ ರಾ ॥
ಜಿತಮಧುಮಾಸದೊಳ್ ಪರೆಯದಿಂ ಪೊರೆದಂತಬಲಾಕಟಾಕ್ಷಶಿ ।
ಕ್ಷಿತಮೆನಿಪಂತೆ ಮೋಹಿಸದೆ ಪೇೞಿರ್ ಗುಣವರ್ಮನ ಸೂಕ್ತಿಸಂಚಯಂ ॥ ೬೫ ॥

ಶಾ॥ ಎಂದೋರಂತಿರೆ ವಜ್ರದೇವನರನಾಥಾಸ್ಥಾನದೊಳ್ ಕೂರ್ತ ನ ।
ಣ್ಪಿಂದಂ ಕೋವಿದರೆಯ್ದೆ ಕೊಂಡುಕೊನೆಯಲ್ ಕೇಳ್ದೞ್ಕಱಿಂ ಶಾಂತಿವ ॥
ರ್ಮಂ ದೀನಾನತವರ್ಮನಾದರಿಸಿ ನೀಂ ಪೇೞೆಂದೊಡೀಗಳ್ ಮನಂ ।
ದಂದೆಂ ಪಶಲ್ಗಡ ಮರ್ದನಲ್ ಜಿನಕಥಾವಿಸ್ತಾರಮಂ ಸಾರಮಂ ॥ ೬೬ ॥

ಕಂ॥ ಕೃತಿ ಗಡ ಕೊಳ್ವಂ ಕುಡುವಂ ।
ಕೃತಿ ಗಡ ಭಾವಿಸುವೊಡಾಪತಿಂವರೆಯುಂ ತಾಂ ॥
ಕೃತಿ ಗಡೆನಲ್ ಕೊಳ್ಕೊಡೆಯೇ ।
ನತಿಶಯಮಾದುದೊ ಕೃತಾರ್ಥಮೆನೆ ಭುವನಜನಂ ॥ ೬೭ ॥

ಕಂ॥ ಕುಡುವವನಂ ಕೊಳ್ವವನೆಂ ।
ದೆಡೆಯುಡುಗದೆ ಕೊಳ್ವನಂ ಕರಂ ಕುಡುವವನೆಂ ॥
ದಡಿಗಡಿಗೆ ವಿಬುಧವೃಂದಂ ।
ನುಡಿದುದು ಸಾಶ್ಚರ್ಯಮಲ್ತೆ ಕೊಳ್ಕೊಡೆ ಕೃತಿಯಾ ॥ ೧೯ ॥

ಅಳಿಯಂ ಮೊಱೆಯಿಂ ಭಾಗ್ಯದಿ ।
ನಳಿಯಂ ಸೌಭಾಗ್ಯದಿಂದ ಮಳಿಯಂ ಗುಣದಿಂ ॥
ದಳಿಯಂ ವಿತರಣಗುಣದಿಂ ।
ದಳಿಯನೆನಿಪ್ಪಂಗೆ ಕುಡುಗೆ ಕೃತಿಕನ್ಯಕೆಯಂ ॥ ೨೦ ॥

ಕೃತಿ ಬೆಲೆಯಿಂ ಬರ್ಕುಮೆ ಪಂ ।
ಡಿತರಾರ್ ಬೆಲೆಯಿಲ್ಲದಿಟ್ಟೊಡಂ ಕೃತಿಗೊಳ್ವಂ ॥
ಕೃತಿಗೆ ಬೆಲೆಯುಂ ಬಱಿದು ಮನ ।
ಕತವಾದೊಡೆ ಕೇಳ ವಿಬುಧವಿದ್ವತ್ಸಭೆಯೊಳ್ ॥ ೨೧ ॥

ಮ॥ಸ್ರ॥ ಕ್ಷಿತಿಯೊಳ್ ಮುನ್ನಬ್ಜನೇತ್ರಂ ಮನೆಯಳಿಯನೆನಲ್ ಕ್ಷೀರವಾರಾಶಿಯಿಂ ವಿ ।
ಶ್ರುತಲಕ್ಷ್ಮೀದೇವಿಯುಂ ಕೌಸ್ತುಭಮಣಿಸಹಿತಂ ಕೊಂಡನೆಂತಂತೆ ತನ್ನಂ ॥
ಸತತಂ ಕೂರ್ತಿತ್ತು ಕೊಂಡಂ ಗುಣನಿಧಿ ಗುಣವರ್ಮಂಗೆ ಕೀರ್ತ್ಯನ್ವಿತಂ ಸ ।
ತ್ಕೃತಿಲಕ್ಷ್ಮೀಕಾಂತೆಯುಂ ರಂಜಿತವಿಬುಧಜನಸ್ವಾಂತೆಯುಂ ಶಾಂತಿವರ್ಮಂ ॥ ೨೨ ॥

ಕಂ॥ ಆತನ ನಿಖಿಳಮಹೀವಿ ।
ಖ್ಯಾತನ ಸನ್ಮಾನದಾನಸಂಚಿತಸುಕೃತ ॥
ವ್ರಾತನ ಗುಣವೆಣಿಕೆಗೆ ಘನ ।
ವೇತಱೊಳಂ ಕಿಱಿದಱಿಂದಮಱಿವುದೆನಿನಿಸಂ ॥ ೨೩ ॥

ವ॥ ಅದೆಂತೆಂದೊಡೆ :—

ಚಂ॥ ಸಕಳಜನೈಕಮಿತ್ರ ನನವದ್ಯಕಳಾಧರ ನಿಷ್ಟಶಿಷ್ಟಕ ।
ಲ್ಪಕುಜ ಸುಪಾಶ್ರಿತಾಖಿಳಬುಧಂ ನಯುವಾಕ್ಪತಿ [1]ಸತ್ಕವಿತ್ವರಂ ॥
ಜಿತ ನಹಿತಾದ್ರಿಸಂಗತಮಹಾಶನಿ ಸಂತತಭೋಗಿ ರೂಪಕೌ ।
ತುಕಜಿತಮೀನಕೇತು ವೆನೆ ಶಾಂತಿ ನವಗ್ರಹಭಾಸಿ ಲೋಕದೊಳ್ ॥ ೨೪ ॥

ಗುರುಜನಕಂ ಕವೀಂದ್ರಜನಕಂ ಗುಣವಜ್ಜನಕಂ ಸಮಸ್ತಸಾ ।
ಕ್ಷರಜನಕಂ ಜಗಜ್ಜನಕ ನೊಲ್ದುದನಿತ್ತಭಿರಕ್ಷಿಪಱ್ತಿಯಿಂ ॥
ಗುರುಜನಕಂ ಕವೀಂದ್ರಜನಕಂ ಗುಣವಜ್ಜನಕಂ ಸಮಸ್ತಸಾ ।
ಕ್ಷರಜನಕಂ ಜಗಜ್ಜನಕನೆಂಬುದು ಮೇದಿನಿ ಶಾಂತಿವರ್ಮನಂ ॥ ೨೫ ॥

[1] ಸತ್ಕವೀಶ್ವರಂಜಿತ

ಮ॥ ಜಗದೊಳ್ ನಾಟ್ಯಪ್ರಭು ಶಾಂತಿವರ್ಮನೆಸೆವಂ ಪ್ರೋದ್ದಾಮಲಕ್ಷ್ಮೀಗೃಹಂ ।
ಜಗತೀಮಂಗಳರತ್ನಭೂಷಣಗೃಹಂ ಸಾಹಿತ್ಯಲೀಲಾಗೃಹಂ ॥
ಭಗವಜ್ಜೈನಮತೋಕ್ತಿನರ್ತನಗೃಹಂ ದಿಕ್ಕಾಮಿನೀವರ್ತಿಕೀ ।
ರ್ತಿಗೃಹಂ ಕೀರ್ತಿತಸತ್ಯಸಂಪದಗೃಹಂ [1]ಸಂಗೀತವಿದ್ಯಾಗೃಹಂ ॥ ೭೬ ॥

ಚಂ॥ ವಸುಧೆಯೊಳೊಳ್ಪುವೆತ್ತ ನರರೇಮಱವನ್ನರೆ ಶಾಂತಿ ನೀಂಬರಂ ।
ರಸಿಕರೆ ನೀಂಬರಂ ವಿನಯವೃತ್ತರೆ ನೀಂಬರ ವಾತ್ತಸತ್ಕಳಾ ॥
ಪ್ರಸರರೆ ನೀಂಬರಂ ಬುಧಜನಸ್ತುತಮಾರ್ಗರೆ ನೀಂಬರಂ ಗುಣ ।
ವ್ಯಸನರೆ ನೀಂಬರಂ ಶ್ರುತವಿಳಾಸರೆ ನೀಂಬರಮೇನು[2]ದಾತ್ತರೇ ॥ ೭೭ ॥

ಉ॥ ಶ್ರೀಯುತಶಾಂತಿವರ್ಮ ಪೆಱರಾರ್ಪ ವಿಚಾರಿಪೊಡಂಥವರ್ತಕ ।
ನ್ಯಾಯಮೆ ಬೀರದೇೞ್ಗೆ ಪರಿಭಾವಿಪೊಡಂತದು ತಾನಜಾಕೃಪಾ ॥
ಣೀಯಮೆ ನಿಕ್ಕುವಂನುಡಿವ ಪೆಂಪು ವಿಚಾರಿಪೊ[3]ಡಂತು ಕಾಕತಾ ।
ಳೀಯಮೆ ಭಾಪ್ಪು ನಿನ್ನವೊಲುದಾರರೆ ಬೀರರೆ ಸತ್ಯವಾಕ್ಯರೇ ॥ ೭೮ ॥

ಚಂ॥ ಎನಗೆನಗೀವನಾವ ತೆಱದಿಂ ವರವಸ್ತ್ರಸುವರ್ಣಮಂ ಸಮಂ ।
ತೆನಗೆನಗಟ್ಟಿಱಿಂ ಪದೆದು ಮನ್ನಿಪನಿನ್ನನದಾವನೆಂದಣಂ ॥
ತನತನಗರ್ತಿಯಿಂದೆ ಸಕಳಾರ್ಥಿಜನೋತ್ಕರಮಾತ್ರ್ಮ ಕೀರ್ತಿಸು ।
ತ್ತನುದಿನಮಿರ್ಪ್ಪುದೆಂದೊಡಖಿಳಸ್ತುತನೋಪ್ರಭು[4] ಶಾಂತಿಯುರ್ವಿಯೊಳ್ ॥ ೭೯ ॥

ಚಂ॥ ಪರಹಿತದೊಳ್ ನಯಕ್ರಮದೊಳಾಯತಿಯೊಳ್ ಸುಚರಿತ್ರದೊಳ್ ದಯಾ ।
ಪರಿಣತಿಯೊಳ್ ಕಳಾವಿಭವದೊಳ್ ವರವಿಕ್ರಮದೊಳ್ ಗಭೀರದೊಳ್ ॥
ಗರಿಮೆಯೊಳೂರ್ಜಿತಪ್ರಭುತೆಯೊಳ್ ಸುಜನಾಗ್ರಣಿ ಶಾಂತಿವರ್ಮ ಸಾ ।
ಕ್ಷರಸಮಯಾವಲಂಬಿ ನಿನಗಾರ್ ದೊರೆ ಮಾನವರೀಧರಿತ್ರಿಯೊಳ್ ॥ ೮೦ ॥

ಮ॥ಸ್ರ॥ ಸ್ಫುರಿತೋದ್ಯತ್ತಾರ ತಾರಾಚಳ ಹರಹಸನಾಪಭ್ರಶುಭ್ರಾಭ್ರಹಂಸೀ ।
ಹರಿದಿಙ್ಮಾತಂಗ ಗಂಗಾಸರಳತರಳ[5] ಕಲ್ಹಾರ ಕರ್ಪೂರ ಪೂರಾ ॥
ಮರರಾಜೋರ್ವೀಜ ರಾಜತ್ಕುಸುಮವಿಸರ ನೀಹಾರ ನೀರೇಜ ನೀರಾ ।
ಕರ ನೀರೇಜಾರಿ[6] ಗೌರದ್ಯುತಿ[7] ವಿಶದಯಶಃಕಾಂತ ನೀಶಾಂತಿವರ್ಮಂ ॥ ೮೧ ॥

ನಿರವದ್ಯಶ್ರೀನಿಜೌನ್ನತ್ಯದಿನಮೃತನಿಧಿಸ್ಫೂರ್ತಿಯಂ ಸತ್ಯಭಾವಾ ।
ಪರಿಭಾಸ್ವ[8]ತ್ಸಂಗದಿಂ ಶಾರ್ಜಯನುಮೆಯಿನುಮಾಧೀಶನಂ ಮಾರ್ಗಣಾಡಂ ॥
ಬರದಿಂ ನೈಷಂಗಮಂ ಸತ್ಕವಿಕಳಿತಕಳಾರಂಭದಿಂ ಶುಂಭದಬ್ಜಾ ।
ಕರಮಂ ಪೋಲ್ವಂ ಮಹೀಭಾಸುರಗುಣನಿಳಯಂ ಶಾಂತನುತ್ಕೀರ್ತಿಕಾಂತಂ[9] ॥ ೮೨ ॥

---

[1] ಸನ್ನೀತಿವಿದ್ಯಾ [2] ಸುದಾರರೇ [3] ಡಂತೆ. [4] ಶಾಂತನುರ್ವಿ. [5] ಕಲ್ಲೋಲ. [6] ಗೌರೀ. [7] ವಿತತ.
[8] ಸ್ವಸ್ಪಂದದಿಂ. [9] ಯುಕ್ತಂ.

ವ॥ ಎಂದಿಂತು ಸಮಸ್ತಭುವನಜನಂ ಪೊಗೞೆ ನೆಗೞ್ತೆವಡೆದನಪ್ಪುದಱಿಂ ಕೀರ್ತಿಪತಾಕನುಂ, ಅಗಣ್ಯಪುಣ್ಯಲಕ್ಷ್ಮೀಸದನವಕ್ಷಸ್ಥಳನಪ್ಪುದಱಿಂ ಪುರುಷೋತ್ತಮನುಂ, ಆತ್ಮೀಯಾನ್ವಯಮಂ ಗುಣರತ್ನದಿನಲಂಕರಿಸುವುದಱಿಂ ಗುಣರತ್ನಭೂಷಣನುಂ, ಚಾತುರ್ಯಚಾರಾಯಣನಪ್ಪುದಱಿಂ ಸರಸ್ವತೀಕರ್ಣಪೂರನುಂ, ಮಱೆದಪ್ಪೊಡಂ ತೊದಳ ನುಡಿದಱಿಯನಪ್ಪುದಱಿಂ ಸತ್ಯರಾಧೇಯನುಂ, ಘನಗಭೀರತೆಯಿನಾರ್ಗಮಧಿಕನಪ್ಪುದಱಿಂ ಗಂಭೀರನೀರಾಕರನುಂ, ವಿರೋಧಿಸಾಧನಭಯಂಕರನಪ್ಪುದಱಿಂ ಕದನಕಂಠೀರವನುಂ, ಅಪ್ರತಿಮಪ್ರಭಾವಾಭಿನುತನಪ್ಪುದಱಿಂ ಪ್ರಭು[1]ಕುಲಶಿರೋಮಣಿಯುಂ, ಕವಿತ್ವತತ್ವನಿಕಷಣಪ್ರತಿಭಾವನಪ್ಪುದಱಿಂ ವಿವೇಕಚತುರಾನನನುಂ, ನಿಸರ್ಗಸುರಭಿಪರಿಮಳಪರಿಮಿಳಿತನಪ್ಪುದಱಿಂ ಮಲ್ಲಿಕಾವಲ್ಲಭನುಂ, ಸುಕವಿಕದಂಬಾವಲಂಬನನಪ್ಪುದಱಿಂ ಸಕಳಸುಕವಿಪಿಕಮಾಕಂದನುಂ, ಜಿನಧರ್ಮಹರ್ಮ್ಯಮಾಣಿಕ್ಯಕಳಶನಪ್ಪ ದಱಿಂ ಭವ್ಯಜಿನಾರ್ಣವಪೂರ್ಣಚಂದ್ರನುಂ, ವಿದ್ವಜ್ಜನಹೃ[2]ದಯನಪ್ಪುದಱಿಂ ಸಕಳಜನಮನೋಹರನುಂ, ಕರ್ಣಾಟಕೀಕರ್ಣಾವತಂಸನುಂ, ಮಳೆಯಮಾನಿನೀಮನೋಮಾನಸಹಂಸನುಂ, ಕೇರಳೀಕುಚಕಲಶತಾರಹಾರನುಂ, ಸಿಂಹಣಸೀಮಂತಿನೀಸಿಂಧೂರನುಮೆನಿಸಿ ನೆಗೞ್ದ ನಾಡ್ಪ್ರಭು ನಭೋಮಣಿ ಶಾಂತಿವರ್ಮನ ಯಶೋಲತೆಗಾಲಂಬನಮಾಗಿ ಮನೋಹರಮಾದ ಕಥಾವನಿತೆಗುದ್ಭವಸ್ಥಾನಮೆಂತೆಂದೊಡೆ.

ಮ॥ ನಿರುತಂ ನಾಲ್ಕನುಯೋಗಮೆಂಬ ದೆಸೆಯೊಳ್ ನಾಲ್ಕುಂ ಶ್ರುತಸ್ಕಂಧಬಂ ।
ಧುರಭೂಚಕ್ರದೊಳೊಪ್ಪುತಿರ್ಪುದದಱೊಳ್ ಪೂರ್ವಾನುಯೋಗಸ್ಥಿತಂ ॥
ಸುರರಾಜದ್ವಿಪದಂತೆ ಪೆಂಪೆಸೆವುದೀ ಶುಂಭತ್ಕಥಾಂಗಂ ನಿರಂ ।
ತರದಾನಪ್ರವಿಭಾಸಿ ಭದ್ರಗುಣಸಂಪೂರ್ಣಂ ಬುಧಾಧಿಷ್ಠಿತಂ ॥ ೨೩ ॥

ಕಂ॥ ಪುರುಜಿನವೀರಜಿನೋಕ್ತಿ ।
ಸ್ವರೂಪಮಂ ವೃಷಭಸೇನಗೌತಮಗಣಿಗಳ್ ॥
ಭರತನೃಪಮಗಧರಾಜ ।
ರ್ಗೆ ರೂಪ್ಯಗಿರಿವಿಪುಳಗಿರಿಗಳೊಳ್ ಬೆಸಸಿದುದಂ ॥ ೨೪ ॥

ಮ॥ ಹರಿಯಂತಂತಿರನೇಕಪಾಪಹರಣೈಕಪ್ರೌಢಮಂ ಕಿನ್ನರೇ ।
ಶ್ವರನಂತಂತಿರಗಣ್ಯಪುಣ್ಯಜನಸೇವ್ಯೈಶ್ವರ್ಯಮಂ ಮೇರುಭೂ ।
ಧರಮೆಂತಂತಿರೆ ಪುಷ್ಪದಂತಪರಿವೃತ್ತೋದಾತ್ತಮಂ ಭವ್ಯರಾ ।
ದರಿಸಲ್ ಭಕ್ತಿಯಿನಾಂ ವಿನಿರ್ಮಿಸುವೆ ನೀಶ್ರೀಮತ್ಕಥಾಬಂಧಮಂ ॥ ೨೫ ॥

ಸುಕೃತಂ ಶಾಂತದಿನಕ್ಕುಮೀಕಥೆಗೆ ಶೃಂಗಾರಾದಿನಾನಾರಸಾ ।
ಷ್ಟಕಮೇಬಾೞ್ತೆಯೊ ರಾಗಕಾರಣಮೆನಲ್ವೇಡೆಯ್ದುಗುಂ ವೀತರಾ ॥
ಗಕಥಾಂತರ್ಗತಮಾದೊಡಾವರಸಮುಂ ಶಾಂತತ್ವಮಂ ನೀರದ ।
ಪ್ರಕರಾಂತರ್ಗತ ವಾರ್ಧಿವಾರಿ ಪಡೆವಂತತ್ಯಂತಮಾಧುರ್ಯಮಂ ॥ ೨೬ ॥

[1] ಕುಲರೋಧೋಮಣಿ. [2] ಹೃದಯಂಗಮ.

ವ॥ ಆ ಕಥಾವತಾರಮೆಂತೆಂದೊಡೆ.

ಮ॥ ಸ್ರ॥ ನಿರುತಂ ಷಡ್ದ್ರವ್ಯಗರ್ಭೋದರವಿತರವಿತರ್ಕಾತಿರಿಕ್ತಸ್ವರೂಪಂ ।
ಪರಮೇಷ್ಠಿಜ್ಞಾನದೃಷ್ಟಿಪ್ರಸರವಿಷಯಮಾದ್ಯಂತಶೂನ್ಯಂ ವಿಯತ್ತ್ವಂ ॥
ಜರಮಧ್ಯಸ್ಥಾಯಿ ಲೋಕಂ ಕ್ರಮಗತಿಯಿನಧಸ್ತಿರ್ಯಗೂರ್ಧ್ವ[1] ಪ್ರಭೇದಂ ।
ಬೆರಸೊಪ್ಪುತ್ತಿರ್ಪುದಾತ್ಮೋಚ್ಛ್ರಯಮದು ಪದಿನಾಲ್ಕಾಗೆ ರಜ್ಜು ಪ್ರಮಾಣಂ ॥ ೮೭ ॥

ಕಂ॥ ಏತೊದವಳೊ ಘನೋದಧಿ ಘನ ।
ವಾತಂ ತನುವಾತಮೆಂಬ ವಳೆಯಂಗಳನು ॥
ಸ್ಯೂತಂಗಳ್ ಬಳಸಿರೆ ಸಮು ।
[2] ಪೇತತ್ರಸನಾಳಗರ್ಭಮದು ಸೊಗಯಿಸುಗುಂ ॥ ೮೮ ॥

ಚಂ॥ ಪರಿವೃತ ತೋಯವಾಯುಗಳ ನಂಬರಮಂ ಪೊಱಗಿಕ್ಕಿತೆಂಬುದೇ ।
ಏರಿದದು ಮಾಪ್ಪಿ ಸಂಹರಿಪ ದಂದುಗಮಂ ಪೊಱಗಿಕ್ಕಿತೆಂಬ ಮೆ ॥
ಯ್ಸಿರಿ ಸಹಜಾತಮಾಗೆ ತಳೆದಿರ್ಪುದನುಕ್ರಮದಿಂದೆ ವೇತ್ರವಿ ।
ಷ್ಟರನಿಭ ಝುಲ್ಲರೀನಿಭ ಮೃದಂಗನಿಭಾಕೃತಿಯಿಂ ಜಗತ್ರಯಂ ॥ ೮೯ ॥

ವ॥ ಆ ಲೋಕತ್ರಿತಯಮಧ್ಯದೊಳೊಂದುರಜ್ಜುಪ್ರಮಾಣಮುಂ, ಸ್ವಯಂಭೂರಮಣಸಮುದ್ರಪರ್ಯಂತಮುಂ, ಸಕಳತಿರ್ಯಕ್ಪರಿಭ್ರಮಣ[3]ಪರಿಗತಮುಂಮಧ್ಯಸ್ಥಿತಮಂದರಮುಮೆನಿಸಿ

ಕಂ॥ ನಿಸದಮಸಂಖ್ಯಾತದ್ವೀ ।
ಪ ಸಮುದ್ರದ ಬಳ್ಳವಳ್ಳಿ ವಳೆಯಾಕೃತಿಯಿಂ ॥
ದೆಸೆದೊಂದನೊಂದು ಪರಿವೇ ।
ಷ್ಟಿಸಿರಲ್ ಕಣ್ಗೊಳಿಪುದದುವೆ ಮಧ್ಯಮಲೋಕಂ ॥ ೯೦ ॥

ಮ॥ ಸ್ರ॥ ಇರೆ ಜಂಬೂದ್ವೀಪಮಲ್ಲಿಂ ಪೊಱಗಿರೆ ಲವಣಾಂಬೋಧಿ ತದ್ವಾರ್ಧಿಯಂ ಬಂ ।
ಧುರಲೋಕಾಕಾರದಿಂದಂ ಬಳಸಿರೆ ವಿಲಸದ್ಧಾತಕೀಷಂಡಮೋರಂ ॥
ತಿರದಂ ಸುತ್ತಿರ್ದು ಕಾಳೋದಕಜಲಧಿ ಬೆಡಂಗಾಗೆ ತದ್ಬಾಹ್ಯದೊಳ್ ಪು ।
ಷ್ಕರನಾಮದ್ವೀಪಮಿರ್ಕುಂ ವಿವಿಧಗಿರಿಸರಿದ್ದೇಶ ಸಂಪತ್ಕಳಾಪಂ ॥ ೯೧ ॥

ವ॥ ಆ ದ್ವೀಪದ ಬಾಹ್ಯಾರ್ಧಮನಳಂಕರಿಸಿ,

ಕಂ॥ ನವರತ್ನರಾಜಿ ಘಣಮಣಿ ।
ಕವಿದ ಮುಗಿಲ್[4]ಪೆರೆ ಕರಾಳಪವನಂ ಘೂತ್ಕಾ ॥
ರವೆನಲ್ ಮಂಡಳಿತಮಹಾ ।
ಹಿಪೊಲಿರ್ಪುದು ಸುತ್ತಿ ಮಾನುಷೋತ್ತರಶೈಲಂ ॥ ೯೨ ॥

---

[1] ತ್ರಿಭೇದಂ. [2] ದಾತ್ತ, ಸಮುಪಾತ್ತ. [3] ಮತಿಕಲ್ಪ. [4] ತ್ತೆರೆ, ತೆರೆ.

ಉ॥ ಆ ಪೃಥಿವೀಧರೇಂದ್ರಫಣಿಪಂ ಪರಿವೇಷ್ಟಿಸಿ ಕಾವ ಪುಷ್ಕರ ।
ದ್ವೀಪ ಮಹಾನಿವಾಸದ ಸಮುನ್ನತಕಾಂಚನರಾಶಿಯಂತಿರು ॥
ದ್ದೀಪಿತರಶ್ಮಿ ರಂಜಿಪುದು ಮೂಡಣಮಂದರ ಮರ್ಹದಂಘ್ರಿಪೂ ।
ಜೋಪನಮತ್ಪುರಂದರ[1] ವಿಳಾತಳ ಸೌಂದರಮುದ್ಘಕಂದರಂ ॥ ೯೩ ॥

ಚಂ॥ ಅಡಿವೊದಲಿಂಗಧೋಭುವನವೋಲಗಿಸುತ್ತಿರೆ ಮಧ್ಯಲೋಕಮೋ ।
ಗಡಿಸದೆ ಸುತ್ತಲುಂಬಳಸಿ ಜೀವಿಸೆ ಚೂಳಿಕೆ ನಾಕಲೋಕಮಂ ॥
ಸೆಡೆಯದೆ ಪೊತ್ತು ನಿತ್ತಱಿಸೆ ಮ್ಮೈವೆ[2]ಯುನಿಂತು ಜಗತ್ತ್ರಯಕ್ಕೆಮೂ ।
ವಡಿಪುದು ಲಕ್ಷಯೋಜನಮಿತೋಚ್ಛ್ರಯ ಮಾಕನಕಾವನೀಧರಂ ॥ ೯೪ ॥

ವ॥ ಅಂತುಮಲ್ಲದೆಯುಂ,
ನೆನೆಯಿಪುದೆಯ್ದೆ ಮೇರುಗಿರಿ ವಿಶ್ವಜಗನ್ನುತದಿವ್ಯಪಾದದಿಂ ।
ಜಿನಪತಿಯಂ ಮಹಾಕಟಕದಿಂ ನೃಪನಂ ವಿಧೃತಕ್ಷಮತ್ವದಿಂ ॥
ಮುನಿಜನಮಂ ನಿತಂಬಗತಕಾಂಚನಮೇಖಳೆಯಿಂ ಲತಾಂಗಿಯಂ ।
ವಿನುತಪವಿತ್ರಪುಣ್ಯಗುಣದಿಂ ಗುಣಿ ನಾಪ್ರಿಭು ಶಾಂತಿವರ್ಮನಂ ॥ ೯೫ ॥

ಗದ್ಯ

ಇದು ಸಮಸ್ತಭುವನಜನಸಂಸ್ತುತಜಿನಾಗಮ
ಕುಮುದ್ವತೀಚಾರುಚಂದ್ರಾಯಮಾಣಮಾನಿತ
ಶ್ರೀ ಮದುಭಯಕವಿ ಕಮಳಗರ್ಭಮುನಿಚಂದ್ರ ಪಂಡಿತ ದೇವ
ಸುವ್ಯಕ್ತಸೂಕ್ತಿ ಚಂದ್ರಿಕಾಪಾನ ಪರಿಪುಷ್ಟಮಾನಸಮರಾಳ

**ಗುಣವರ್ಮ ನಿರ್ಮಿತಮಪ್ಪ**

**ಪುಷ್ಪದಂತ ಪುರಾಣದೊಳ್**

**ಪೀಠಿಕಾವರ್ಣನಂ**

ನಾಮ

ಪ್ರಥಮಾಶ್ವಾಸಂ

---

[1] ವಿಳಾಸಿತ. [2] ಯಿ.

ಪುಷ್ಪದಂತಪುರಾಣಂ

ದ್ವಿತೀಯಾಶ್ವಾಸಂ

ಕಂ॥ ಶ್ರೀನಿಧಿ ಮಹಿಮಧ್ಯಸ್ಥಂ ।
ಮಾನಿತಕಲ್ಯಾಣರೂಪಮೆಸೆವುದು ಸತ್ಸಂ ॥
ತಾನಯುತಂ ದಿವಿಜಾದ್ರಿ ಸ ।
ಮಾನೀಕೃತಸಹಜಕವಿಸರೋವರಹಂಸಂ ॥ ೧ ॥

ವ॥ ಆಮೇರುವಿನ ಪೂರ್ವಪಶ್ಚಿಮಪ್ರದೇಶದೊಳ್.

ಕಂ॥ ಒರೊಂದಱೊಳಗೆ ನಾಡುಗ ।
ಳೀರೆಂಟುಗಳಾಗೆ ಕೂಡಿ ಮೂವತ್ತೆರಡುಂ ॥
ರಾರಾಜಿಸೆ ಸೊಗಯಿಪ್ಪುದಿ ।
ಳಾರಮಣೀರಮ್ಯಗೇಹಮುಭಯವಿದೇಹಂ ॥ ೨ ॥

ಮ॥ ಅಮಳಶ್ರೀಜಿನವರ್ತನಂ ಕಿಡದು ಷಟ್ಖಂಡಾವನೀಮಂಡಳಾ ।
ಕ್ರಮಿಗಳ್ ಕುಂದರಭೀಷ್ಟವೃಷ್ಟಿ ಕಱೆಯುತ್ತಿರ್ಕ್ಕುಂ ಪದಂದಪ್ಪದ ॥
ನ್ಯಮತಕ್ಕುದ್ಭವಮಿಲ್ಲ ಪಂಚಶತಚಾಪೋತ್ಸೇಧರುಂ ಪೂರ್ವಿತ ।
ಪ್ರಮಿತಾಯುಷ್ಯರುಮಪ್ಪರಲ್ಲಿ ಮನುಜರ್ ಭೂಪರ್ ಪ್ರಜಾಪಾಳಕರ್ ॥ ೩ ॥

ಕಂ॥ ನೆಗೞ್ದ ಮಹಾಲಯಮಲ್ಲದೆ ।
ನೆಗೞ್ದ ಮಹಾ ಲಯಮದಿಲ್ಲ ಯುತವರನಾರೀ ॥
ಯುಗಪರಿವರ್ತನ ಮಲ್ಲದೆ ।
ಯುಗಪರಿವರ್ತನ ಮದಿಲ್ಲ ತದ್ಭೂತಳದೊಳ್ ॥ ೪ ॥

ಲಂಚಂ ಕವರ್ತೆ ನೆಱೆ ಕೋ ।
ಳಂಚೆ ಬಱಂ ಪಸವು ಮಾರಿ ಬಂದೀಗ್ರಹಣಂ ॥
ಪುಂಚಲ್ ಕಳವಾಱಿಡಿ ಭಯ ।
ಸಂಚಯ ಮೆಂಬಿವಱ [1]ಪೆಸರುಮಿಲ್ಲಾನಾಡೊಳ್ ॥ ೫ ॥

---

[1] ಪೆಸರ್ಗಳಿಲ್ಲ.

ಚಂ॥ ಮೃಗಧರನೆಂತು ಷೋಡಶಕಳಾಪರಿಪೂರ್ಣತೆಯಿಂ ಪ್ರಮೋದಮಂ ।
ಬಗೆಗೆಡೆಮಾಳ್ಕುಮೆಂತು ನವಯೌವನೆ ಷೋಡಶವರ್ಷಲೀಲೆಯಿಂ ॥
ಸೊಗಯಿಕುಮಂತೆ ಷೋಡಶಮಹಾವಿಷಯಂಗಳಿನೊಪ್ಪಿ ಮಾಳ್ಪುದು ।
ರ್ವಿಗೆ ಮುದಮಂ ಸುಖೈಕನಿಧಿ ಪೂರ್ವವಿದೇಹಮಖರ್ವಸಂಪದಂ ॥ ೬ ॥

ಮ॥ ಇದು ಮೇಲ್ಕೊಂಡ ದುಕೂಲಚೇಲಮೆನೆ ತದ್ಭೂಮಧ್ಯಮಾಂತೊಪ್ಪುತಿ ।
ರ್ಪುದು ನೀಳಾಚಳಚೂಳಿಕಾವರಸರಃಸಂಜಾತೆಯಂ ಕಂಜಕೌ ॥
ಮುದಸೌಗಂಧ್ಯಸಮೇತೆಯಂ ಚಳತರಂಗವ್ರಾತೆಯಂ ಪೂರ್ವವಾ ।
ರ್ಧಿಗದೃಥೋಪೇತೆಯ ನುನ್ಮದಾಂಬುವಿಹಗಪ್ರೋದ್ಭೂತೆಯಂ ಸೀತೆಯಂ ॥ ೭ ॥

ವ॥ ಅಂತು ನಿಜಲಲಿತಲಹರಿಭುಜಾಲಿಂಗಿತಪ್ರಾಚೀನಜಳನಿಧಾನೆ ಯೆನಿಸಿ.

ಮ॥ ಕುಲಭೂಭೃದ್ಭವೆ ಲಕ್ಷ್ಮಣಾಭಿನುತೆ ರಾಮೋತ್ಕಂಠೆ ವೈದೇಹಿ ಮಂ ।
ಜುಲವೇಣೀರಮಣೀಯೆ ಸತ್ಕುಶಲವವ್ಯಾಸಂಗೆ ಕಂದರ್ಪಜೋ ॥
ತ್ಕಳಿಕಾಕ್ರಾಂತೆ [1] ದಶಾನನಾತ್ಮೆ ವಿಮಲಶ್ರೀಮಜ್ಜನಸ್ಥಾನೆ ಕ ।
ಣ್ಗೊಳಿಕುಂ ವಾಹಿನಿ ಸೀತೆ ಪೋಲ್ತು ಭುವನಪ್ರಖ್ಯಾತೆಯಂ ಸೀತೆಯಂ ॥ ೮ ॥

ವ॥ ಎನೆ ಮನಂಗೊಳಿಪ ಸೀತಾತರಂಗಿಣಿಯ ದಕ್ಷಿಣೋತ್ತರತಟಂಗಳೆರಡಱೊಳಮೆಂಟೆಂಟಿಷಟ್ಖಂಡಮಂಡಳಂಗಳಿರ್ಪುವಲ್ಲಿಯುಮೆಂಟನೆಯ ತಾಣದಲ್ಲಿ.

ಮ॥ ವರವಕ್ಷಾರಮಹೀಧರಂ ಪ್ರವಿಳಸತ್ಪಂಕಾವತೀಸಿಂಧು ಬಂ ।
ಧುರಸೀತಾನದಿ ರಮ್ಯನೀಳನಗಮೆಂಬೀ ನಾಲ್ಕು ಮಾಘಾಟಮಾ ॥
ಗಿರೆ ಪೂರ್ವಾಪರದಕ್ಷಿಣೋತ್ತರದಿಶಾದೇಶಕ್ಕೆ ದೇಶಂ ಮನೋ ।
ಹರಮಾಗಿರ್ಪುದು ಪುಷ್ಕಳಾವತಿ ಧರಾದೇವೀಶಿರೋಮಂಡನಂ ॥ ೯ ॥

ವ॥ ಅಲ್ಲಿ.

ಕಂ॥ ಗ್ರಾಮಸಮೂಹಂ ನಗರ ।
ಸ್ತೋಮಂ ಖರ್ವಡಕುಳಂ ಮಡಂಬಗಣಂ ದ್ರೋ ॥
ಣಾಮುಖಸಂತತಿ ಖೇಟ ।
ಗ್ರಾಮಂ ಪತ್ತನಕದಂಬ ಮುಳವಿಗಳುಂಬಂ ॥ ೧೦ ॥

ಚಂ॥ ವಿದಳಿತಕಂಜವಿಲ್ಲದ ಕೊಳಂ ಗಜವಿಲ್ಲದ ಕಾಡು ಚೂತಮಿ ।
ಲ್ಲದ ಬನ ಮಂಚೆಯಿಲ್ಲದ ನದೀನಿಕಟಂ ಘನಗಂಧಶಾಲಿಯಿ ॥
ಲ್ಲದ ಪೊಲ ನಚ್ಚರನ್ನಗಣಿಯಿಲ್ಲದ ಬೆಟ್ಟು ಜನಾನುರಾಗಮಿ ।
ಲ್ಲದ ಪೊಱಲ ತ್ಯುದಾತ್ತಗುಣಮಿಲ್ಲದ ಮಾನವರಿಲ್ಲದೆಲ್ಲಿಯುಂ ॥ ೧೧ ॥

[1] ದಶಾನನಾತ್ತೆ ವಿಮಲಶ್ರ.

ಕಂ॥ ಆನಾಡೊರೂರ್ದಪ್ಪದ ।
ದೇನೆಸೆವುವೊ ಕೌದ್ರವೀಣದೌಮೀನದ ತ್ತೈ ॥
ಳೀನದ ಮಾಷೀಣದ ಮೌ ।
ದ್ಗೀನದ ಬಹುಸಾರಸಸ್ಯಸಕಳಫಳಂಗಳ್ ॥ ೧೨ ॥

ಮಡಿಯಿಂ ಮಡಿವಳನೊಳ್ ಕಾ ।
ಲ್ವೆಗಿದಿರವಿಂ ಶರನೊಳಮರ್ದ ವಾರಿಯಿ ನಿಭದೊಳ್ ॥
ನಿಡುದನೆಯಿಂ ಪ್ರಾಕಾರದೊ ।
ಳುಡುಗದ ಕಣೆಯಿಂದೆ ಡೊಣೆಯೊಳೆಣ ಯೆನಿಸಿದುವಂ ॥ ೧೩ ॥

ಶಾಳಿಗಳಂ ಬಹುಪರಿಮಳ ।
ಶಾಳಿಗಳಂ ನಿಕಟಕುಮುದಸೌಗಂಧ್ಯಕೃತಾ ॥
ಶಾಳಿಗಳಂ ರುಚಿನಿಚಿತದಿ ।
ಶಾಳಿಗಳಂ ಬೆಳೆವ ನೆಲನೆ ಪೊಲ ನಾನೆಲದೊಳ್ ॥ ೧೪ ॥

ವ॥ ಅದಲ್ಲದೆಯುದೆ ನದೀಮಾತೃಕಮುಂ, ದೇವಮಾತೃಕಮುಮೆಂಬ ಭೇದಮುಂ ಪೇರ್ವನಿಸಿ.

ಚಂ॥ ಗಿಳಿಗಳ ಚಂಚುವಿಂದೊಡೆದ ಮಾವಿನ ಪಣ್ಣ ರಸಪ್ರವಾಹದಿಂ ।
ಬೆಳೆವುವು ಗಾಳಿಯಿಂ ದೂಡೆವ ಕರ್ವ್ವಿನ ಸೋರ್ವೆಳನೀರ ಸಾರದಿಂ ॥
ಬೆಳೆವುವು ಪಾಮರೀಮುಖಶಶಿದ್ಯುತಿಯಿಂದೊಸರ್ವಿಂದುಕಾಂತನಿ ।
ರ್ಮಳಜಳಪೂರದಿಂ ಬೆಳೆವುವಲ್ಲಿಯ ಬಂಧುರಗಂಧಶಾಲಿಗಳ್ ॥ ೧೫ ॥

ಕಂ॥ ಕಳಮವನಂಗಳ ಮೇಲಾ ।
ಗಳುಮಾಸುವ [1]ಗಿಳಿಗಳಿಂ ಪಸುರ್ತು ನಭಂ ಕ ॥
ಣ್ಗೊಳಿಪುದು ತಪ್ವನಪತ್ರಂ ।
ಗಳ ಪಸುರ್ವೆಳಗಡರ್ದು ಮುಸುಕಿದತ್ತೆಂಬಿನೆಗಂ ॥ ೧೬ ॥

ಎಳನೀರ ಮಡಿಗಳೊಳ್ ಮಾ ।
ತೊರ್ಳಗುವ ಪಾಮರಿಯರಾನನಂಗಳು ಮಲರ್ಗ ॥
ಣ್ಗಳು ಮೆಸೆವುವಲರ್ದ ಕಮಳಂ ।
ಗಳ ಮೀನ್ಗಳ ಬಳಗಮೆಂಬ ಬಗ ಮಿಗುವಿನೆಗಂ ॥ ೧೭ ॥

ಗಿಳಿಸೋವಂಗನೆಯರ ಕ ।
ಣ್ಗಳ ರುಚಿ ದೆಸೆದೆಸೆಗೆ ಪಸರಿಸಿರೆ ಪಾಸಿದ ನಿ ।
ರ್ಮಳಜಾಳಮೆಂದು ಪಾಲ್ದೆನೆ ।
ಗಳ ದೆಸೆಗಂ ಸಾರವಂಜಿ ಕೆಲವರಗಿಳಿಗಳ್ ॥ ೧೮ ॥

1 ಗಿಳಿಪಸುರ್ತನಾಡೆನಭಂ.

ಕಂ॥ ಲಲಿತಾಂಗದ ಬೆಮರ್ವನಿಗಳ ।
ನಲೆದಾಱುವ ಕೀರಕುಳದೆಱಂಕೆಯ ಕಡುವ ॥
ಣ್ಣೆಲರ್ಗೆಳಸಿ ಪಕ್ಕಿಸೋಯದೆ ।
ಕೆಲಬರ್ ಪಾಮರಿಯರವಱ ಬರಮನೆ ಪಾರ್ವರ್ ॥ ೧೯ ॥

ವ॥ ಮತ್ತಮಲ್ಲಿ.

ಚಂ॥ ಒದವಿದ ಶಾಲಿಗರ್ದ್ದೆಗಳ ಪಾಳಿ ಕುಕಿಲ್ವ ಪಿಕಾಳಿ ತಣ್ಪವೇ ।
ಱಿದ ಸುೞಿಗಾಳಿ ಪಾಮರಿಯರೋಳಿ ವಿಟೀವಿಟಕೇಳಿ ಪೂಗಳಿಂ ॥
ಕೆದಱುವ ಧೂಳಿ ಪಾಡುವ ಮದಾಳಿ ಪೊದಪ್ಪಿಲರೋಳಿ ಯೆಂಬಿನಂ ।
ಮದನನ ದಾೞಿಗೆತ್ತು ಸುಗಿದಿರ್ಪ್ಪುದು ಪಾಂಥಜನಂ ನಿರಂತರಂ ॥ ೨೦ ॥

ವ॥ ಅದಲ್ಲದೆಯುಂ.

ಉ॥ ರಾಗಿಮುಖೇಂದುಬಿಂಬದ ಲತಾಂಗದ ಕಣ್ಗಳ ಕಾಂತಿ ವಾರಿಧಾ ।
ರಾಗಣದೊಳ್ಪೊನಲ್ಕವಿದು ಪಾಂಥರ ಕಣ್ಗೆ ಮನಕ್ಕೆ ರೂಪುಗೊಂ ॥
ಡಾಗಳೆ ತೃಪ್ತಿಯಿಂ ಕುಡೆ ಮನಂಗೊಳಿಸಿರ್ಪ್ಪರನಂಗರಾಜಧಾ ।
ರಾಗೃಹಶಾಳಭಂಜಿಕೆಗಳಂತಱು [1]ವಟ್ಟೆಗೆಯೊಳ್ ಲತಾಂಗಿಯರ್ ॥ ೨೧ ॥

ವ॥ ಅಂತುಮಲ್ಲದೆಯುಂ.

ಮ॥ ನೆವದಿಂ ತೃಷ್ಣೆಯನಾಗಿಪಂದಮಿದು ತೃಷ್ಣಾಭೇದಮಂ ಮಾಡುವಂ ।
ದವಿವಲ್ಲಪ್ಪೊಡಿವಂದಿರೇಕೆ ಸುರಭಿಪ್ರಾಲೇಯತೋಯಂಗಳಂ ॥
ಯುವಪಾಂಥರ್ಗೆಱೆವಲ್ಲಿ ತಮ್ಮ ಲಲಿತಾಂಗೋಪಾಂಗಶೃಂಗಾರಗೌ ।
ರವಮಂ ಬೀಱುವರೆಂಬ ದೂಱನೆಸಗುತ್ತಿ [2]ರ್ಪ್ಪರ್ಪ್ರಪಾಕಾಂತೆಯರ್ ॥ ೨೨ ॥

ವ॥ ಆ ಪ್ರದೇಶಕ್ಕನತಿದೂರವಾಗಿ

ಚಂ॥ ಸಲೆ ನಿಲೆ ಮಾವು ಪೂವು ವಕುಳಂ ಮುಕುಳಂ ಪೊಸತೆಂಗು ಕೌಂಗು ಕಾ ।
ದಲರೆಲರಂಚೆ ಬೆಂಚೆ ಪುಳಿನಂ ನಳಿನಂ ಗಿಳಿವಿಂಡು ಬಂಡು ಕೋ ॥
ಗಿಲೆ ಗೊಲೆ ತುಂಬಿ ಬಿಂಬಿ ಸುೞಿಗೇದಗೆ ಚಾದಗೆ ಕಂಪು ಸೊಂಪಗುಂ ।
ದಲೆ ಯೆನೆ ರಮ್ಯಮಾ ವಿಷಯದೂರ್ಗಳ ನಂದನವೃಂದಮೆತ್ತಲುಂ ॥ ೨೩ ॥

ಮ।ಸ್ರ॥ ವನವಲ್ಲೀಲಾಸ್ಯದಿಂ ಜೀಕೊರ್ಳನಿಯನನುಬದ್ಧಾಳಿಯಿಂ ವಾರನಾರೀ ।
ಜನಮಂ ಧಾರಾಲಯೋದ್ಯದ್ಗತಿಚತುರತೆಯಿಂ ವಾೞಿಯುಂ ಸೌರಭಾಲಂ ॥
ಬನದಿಂ ಗೋಸರ್ಗಮಂ ಲಾಲಿತಕುಶಲವಸಾಂಗತ್ಯದಿಂ ರಾಮಸೀಮಂ ।
ತಿನಿಯಂ ಪೋಲ್ತಲ್ಲಿ ನಿಚ್ಚಂ ಸುೞಿವುದು [3] ಬಹಳಾಮೋದಪೂರಂ ಸಮೀರಂ ॥ ೨೪ ॥

---

[1] ವಂಟಿಗೆ. [2] ತ್ರಿಕರ್ಣಂ [3] ವನದೊಳ್ ಸ್ವೈರಚಾರಂ.

ವ॥ ಅಂತುಮಲ್ಲದೆಯುಂ.

ಚಂ॥ ಕರಗಿಸುವಂತೆ ಗರ್ವಘನಜಾಳಮನುರ್ವಿಸುವಂತೆ ಕಾಮತೋ ।
ಮರಜನಿತಾಗ್ನಿಯಂ ನೆಱೆಯೆ ನಂದಿಸುವಂತೆ ವಿವೇಕದೀಪಮಂ ॥
ಬಿರಯಿಗಳಂ ಪಳಂಚಲೆವ ತಣ್ಣೆಲರಾಱೆಸುತಿರ್ಪುದಲ್ಲಿ ನ ।
ಲ್ಲರ ವಿಳಸದ್ರತಾಂತಪರಿಖೇದಮನೆಯ್ದೆ ಲತಾವನಂಗಳೊಳ್ ॥ ೨೫ ॥

ವ॥ ಅದಲ್ಲದೆಯುಂ.

ಮ॥ಸ್ರ॥ ನನೆಯಂಬಂ ಕಂತುವಿಂದಂ ಬಿಸುಡಿಸಿದಲರ್ಗಣ್ ಚಂದ್ರಬಿಂಬೋದಯಪ್ರಾ ।
ರ್ಥನೆಯಂ ಕರ್ನ್ನೆಯ್ದಲಿಂ ಪಿಂಗಿಸಿ ಕಳೆದ ಮೊಗಂ ಜನ್ಮಸಾಫಲ್ಯಮಂ ಭೂ ॥
ಜನನೇತ್ರಾನೀಕದಿಂದೆಯ್ದಿಸಿದನುಪಮಸೌಂದರ್ಯಮೊಳ್ಗೊಂಡರಂ ಬ ।
ದ್ಧಿನ ಬಲ್ಪಿಂ ಗಂಡುದೊಟ್ಟಿತ್ತೆಸಕದ ಸೊಬಗಾನಾಡ ಪೆಂಡಿರ್ಗೆ ಸಾಜಂ ॥ ೨೬ ॥

ಚಂ॥ ಅರಲ ಸರಲ್ಗದಾರ ಮನಮಂ ಗುಱೆಮಾಡದೊ ನಾಡ ನೀಱೆವೆಂ ।
ಡಿರ ನಡೆವೊಪ್ಪುವಪ್ಪುವೊಡಗೂಡುವ ನೋಡುವ ಸುತ್ತುವೊತ್ತುವಾ ॥
ದರಿಪೊಲಿಪೊಲ್ವಗೆಲ್ವ ಬಸದಾಗಿವ ಭೋಗಿವ ಕಾಯ್ವಬಯ್ವ ನಾ ।
ಣ್ಗರೆವೆರೆವಿಂಬುಕೆಯ್ಯುವೊಳಪೊಯ್ಯುವನೇಕ ವಿಚಿತ್ರಚೇಷ್ಟೆಗಳ್ ॥ ೨೭ ॥

ವ॥ ಮತ್ತಮಲ್ಲಿ.

ಕಂ॥ ಜಾಲಾಶೋಕಂ ವಿಗ್ರಹ ।
ಲೀಲೆ ರಜೋವಿಕೃತಿ ಜಾತಿಸಂಕರಮನಿಲೋ ॥
ಲ್ಲಲತರಶಿಖಿಶಿಖಾಕುಳ ।
ಕೋಳಾಹಳಮಿಲ್ಲ ಬನದೊಳಲ್ಲದೆ ಜನದೊಳ್ ॥ ೨೮ ॥

ಮ॥ ಧೃತಧರ್ಮಚ್ಯುತಿ ಬಾಣಸಂಹತಿಗೆ ಬದ್ಧಾವೈಕೃತಂ ವಾರಣ ।
ಕ್ಕೆ ತಮಃಸಂಗತಿ ರಾತ್ರಿಗಾಱಿಡಿ ಸುಗಂಧೋತ್ಫುಲ್ಲಪುಷ್ಪಕ್ಕುಪಾ ॥
ತ್ತತಪೋಹೀನತೆ ಚೈತ್ರದೇಱಿಗೆ ಮಹದ್ವಂದಿಗ್ರಹಂ ತ್ಯಾಗಿಗ ।
ವ್ರತಯೋಗಂ ಜಳಪಕ್ಷಿಗಲ್ಲದೆ ಜನಕ್ಕಿಲ್ಲಲ್ಲಿ ಬೇಱೆಲ್ಲಿಯುಂ ॥ ೨೯ ॥

ಮ॥ ಲತಿಕಾಪಲ್ಲವಮಲ್ಲದಿಲ್ಲಖಿಳಲೋಕಾಪಲ್ಲವಂ ಜೈನನಿ ।
ರ್ಮಿತಧರ್ಮೋದಯಮಲ್ಲದಿಲ್ಲರಿಚಮೂಧರ್ಮೋದಯಂ ಕೇತಕೀ ॥
ಧೃತಸತ್ಕಂಟಕಮಲ್ಲದಿಲ್ಲ ವಸುಧಾಸತ್ಕಂಟಕಂ ಕಾಳಕ ।
ಲ್ಪಿತದೋಷೋದ್ಗಮಮಲ್ಲದಿಲ್ಲ ಪೆಱವುಂ ದೋಷೋದ್ಗಮಂ ದೇಶದೊಳ್ ॥ ೩೦ ॥

ಕಂ॥ ಗುಣಮಿಲ್ಲದ ಯತಿ ಮಹಿರ ।
ಕ್ಷಣಮಿಲ್ಲದ ನೃಪತಿ ಶೀಲಮಿಲ್ಲದ ಸತಿ ಲ ॥
ಕ್ಷಣಮಿಲ್ಲದ ಕೃತಿ ಜಿನಗೃಹ ।
ಗಣಮಿಲ್ಲದ ನಗರತತಿಯುಮಿಲ್ಲಾ ನಾಡೊಳ್ ॥ ೨೧ ॥

ವ॥ ಎಂಬಿನಮನೇಕಗಿರಿನಗರಸರಿದರಣ್ಯಕೇದಾರನಂದನಜನಸ್ಥಾನಸಂಪತ್ತ್ಯುತ್ಪತ್ತಿನಿಳಯ ಮಾದ ತನ್ಮಹೀವಳಯದೊಳಗೆ ಸಕಳಸೌಂದರ್ಯಯೋನಿಯುಂ ರಾಜಧಾನಿಯುಮೆನಿಸಿ.

ಚಂ॥ ಅರಮನೆ ಮೂಗು ಕಂಪಿಡಿದೆಲರ್ನಱುಸುಯ್ ಸಿತಕೇತುಮಾಳೆ ಭಾ ।
ಸುರನಯನಾಂಶು ಪಂದಳಿರ ತೋರಣಮೊಳ್ನಿಡುವುರ್ಪು ಪಾಸಕಾ ॥
ಧ್ವರಶಿಖಿಧೂಮಮಂಡಳಿ ಚಳಾಳಕಮಾಗಿರೆ ಪುಂಡರೀಕಿಣೀ ।
ಪುರಮೆಸೆದಿರ್ಪುದಾ ವಿಷಯಲಕ್ಷ್ಮಿಯ ಮುಗ್ಧಮುಖೇಂದುವೆಂಬಿನಂ ॥ ೨೨ ॥

ಕಂ॥ ಅದು ಗುಹ್ಯಕೋಪಗತಸಂ ।
ಪದ ಮೆಂದಕುಲೀನಮೆಂದು ಬಹುವಿಷಧರಮೆಂ ॥
ದೊದವಿದ ಮಹತ್ವದಿಂದಿಱಿ ।
ವುದು ಧನಪತಿದಿವಿಜಪತಿಫಣಾಪತಿಪುರಮಂ ॥ ೨೩ ॥

ಅದಱೊಡನೆಕೂಡಿ ತೊಲೆಯೊಳ್ ।
ಬಿದಿ ತೂಗಿದೊಡೊಂದೆ ನೆಲೆಗೆ ನಿರುತಂ ಬರಲಾ ॥
ಱದೆ ತನ್ನಲಘುತೆಯಿಂದೆಂ ।
ಬುದನೆರಡಱ ನಿಂದ ನಿಲವೆ ಸೂಚಿಪುದಿನ್ನುಂ ॥ ೨೪ ॥

ಭುವನದ ರಮಣೀಯಮದಾ ।
ರ್ಥವೆಲ್ಲಮಂ ಮಾಡಿಮಾಡಿ ನಿಜಕೌಶಳದೊ ॥
ಳ್ಪು ವಿಶೇಷಮಾಗೆ ಬಿದಿ ಬಱಿ ।
ಕವೆ ಮಾಡಿದನೆನಿಪುದದಱ [1]ಪೊಱಪೊಱಲಂದಂ ॥ ೨೫ ॥

ವ॥ ಅದೆಂತೆನೆ.—

ಮಾಸ್ರ॥ ನರನಾರೀಯೋಗದೀಕ್ಷಾಭವನಮಿದೆನಿಕುಂ ನಾಗವಲ್ಲೀಪಿನದ್ಧೋ ।
ದ್ಧುರಪೂಗಂ ಮಾಧವೀವೇಷ್ಟಿತಕುರವಕ ವೇಳಾಲತಾಬದ್ಧಕಾಳಾ ॥
ಗರು ಮಲ್ಲೀನದ್ಧಚೂತಂ ಲವಲಿಕೃತಲವಂಗಂ ತಮಾಳೀಪರೀತ ।
ಸ್ಫುರಿತಾಶೋಕಂ ಮೃಣಾಳೀಪರಿಗತಖರದಂಡಂ ಪುರೋದ್ಯಾನಷಂಡಂ ॥ ೨೬ ॥

1 ಪೊಱಲಂದಮುಮಂ.

ಚಂ॥ ದಿನಪನ ಕೆಯ್ಯ ಕಂಜದೊಡವುಟ್ಟಿದ ತಾವರೆ ಕಾಮಚಾಪದಿಂ ।
ಜನಿಯಿಸಿದಿಕ್ಷು ಚಂದ್ರನಮರ್ದಿಂ ಮಡುಗೊಂಡ ಕೊಳಂ ದಿವಂ ತವ ॥
ರ್ಮನೆ ತನಗೆಂಬ ಪುಷ್ಪಲತೆ ಕಲ್ಪಮಹೀಜದ ಬೀಜದಂಘ್ರಿಪಂ ।
ವನಜಜನಂಚೆ ಗಗ್ನಿಜನ ಸೋಗೆಗೆ ಪುಟ್ಟಿದ ಹಂಸಕೇಕಿಗಳ್ ॥ ೩೭ ॥

ಕಂ॥ ಕಳರುತಿಯಂ ರತಿಯೊಳ್ ಕ ।
ತ್ತಿಳವುರುಳಿಗಳಗ್ನಿಶಾಪವೆಯ್ದದ ಗಿಳಿಗಳ್ ॥
ಕಳಗೀತಿಕೆಗಳ್ ನಾಕದ ।
ವಿಳಸನದಿಂದೊಪ್ಪಿ ತೋರ್ಪ ಪಿಕನಿಕರಂಗಳ್ ॥ ೩೮ ॥

ಮ॥ ಒಳಪೊಕ್ಕೆಯ್ದೆ ತೊೞಲ್ವುದಲ್ಲಿ ಪಥಕವ್ರಾತಂಗಳೊಳ್ ಪೋರುತುಂ ।
ತಳಿರ್ವೊಯ್ಲಿಂ ದೊಳಸೋರುತುಂ ಪುೞಿಲ ತಣ್ಪಂ ಸಾರುತುಂ [1]ಪಿಂದ ನಿಂ ॥
ದಳಿವೃಂದಂ ಬರೆ [2]ಪಾರುತುಂ ಕುಳಿರ್ವ ನೀರಂ ಪೀರುತುಂ ಪ್ರೋಲ್ಲಸ ।
ತ್ಕಳಕಂಠೀರುತ ಮಾತ್ಮಸಾತ್ಕೃತವನಶ್ರೀಚಾರು [3]ತನ್ಮಾರುತಂ ॥ ೩೯ ॥

ವ॥ ಅಂತು ಸಂಚರಿಪ ಮಂದಗಂಧವಹನಿನಲ್ಲುಗುವ ತರುಶತದೊಳುದಿರ್ವ ಕುಸುಮರಜದ ಮಂದೈಸಿ ನೆಗೆದ ಕೆಂಧೂಳಿಯಿಂದೆ ಮುಂದುಗೆಟ್ಟು ಮೊರೆವ ಮಧುಕರಂಗಳುಂ, ಮಧುಕರಧ್ವನಿಯಿನಲರ್ವಿಲ್ಲ ಜೇವೊಡೆಯ ರವವೆಂದು ಕಿವಿಯಿತ್ತು [1]ಕೇಳಲುಮ್ಮಳಿಸಿ ತಮ್ಮೊಳ್ ಬಿಗುರ್ವಬಿರಯಿಗಳುಂ, ಬಿರಯಿಗಳ ಮೆಯ್ಸುಯ್ಯ ಬೆಂಕೆ ಸೋಂಕೆ ಕಱಗಂದಿದಂತೆ ಕಪ್ಪುವಿಡಿದಂಗಮೆಸೆಯೆ ಕುಸುಮಶರಸಖನ ಪಡಿಯಱವೆಸಕೆ ಪಕ್ಕಾಗಿ ಪುಗಲ್ಪುಗಲೆಂದು ಬಂಡಿಳಿಸಿ ತೊಂಡುಗೆಡೆವ ಗಂಡುಗೋಗಿಲೆಗಳುಂ, ಗಂಡುಗೋಗಿಲೆಗಳ ತುಂಡಖಂಡನದಿನೊಱತುಗುವ ಮಾಮರದ ಸೊನೆಯ ಸೋನೆಯಿಂ ನಾಂದು ಕೆಂದಳಿರೊಳೊಂದಿ ಮಂದಯಿಪಶೋಕವನಮನೆಳವಿಸಿಲ ಬಳಗಮೆಂದೆಳಸಿ ಬಳಸುವೆಳಗಿಳಿಗಳುಂ, ಎಳಗಿಳಿಗಳ ಬಳಗದ ನುಡಿಯನನುದಿನಂ ಕಲ್ತು ನುಡಿವಂಗನಾರತಿರಹಸ್ಯನಿಶ್ವಸನಂಗಳಂ ಕೇಳ್ದು ನಗೆಯಿಂದ ಬಿರಿವಂತೆ ಬಿರಿವ ಬಿರಿಮುಗುಳ ತಗುಳದಿಂ ಸೊಗಯಿಸುವ ಮಲ್ಲಿಕಾಲತೆಯ ಜೊಂಪಂಗಳುಂ, ಮಲ್ಲಿಕಾಲತೆಯ ಜೊಂಪಕ್ಕೆ ಪಕ್ಕಾಗಿ ಕುಳಿರ್ವ ತಿಳಿಗೊಳದ ತಡಿಯ ತಣ್ಪುೞಿಲ ನುಣ್ಮಣಲೊಳತನುಗುರು ರತಿಯನೋದಿಸುವ ಶುದ್ಧಾಕ್ಷರಂಗಳೆನಿಪ ಶುಕ ಪಿಕ ಚಕೋರ ಚಕ್ರವಾಕ ಬಕ ಬಳಾಕ ಸಾರಸ ಮರಾಳ ಪಾರಾವತ ಮಯೂರ ಹಾರೀತ ಕಾರಂಡ ಕುರವಕ ಸಂಕುಳಚರಣಸಂಚರಣದಿಂ ಪಳಚ್ಚನೆಸೆವ ಪಜ್ಜೆಗಳುಮಳುಂಬಮೆನಿಸುಗು ಮತ್ತಮಲ್ಲಿ.

ಚಂ। ಸೊನೆ ತನಿವಣ್ಣ ಸಾರ್ಪರಿವನೀರೆಳನೀರಲರ್ವಂಡು ಬೆಂಚೆ ಕ ।
ರ್ಬಿನರಸವೆಟ್ಟಿದ ಜಾಗದ ಪೊನಲ್ ಕೃತಕಾಚಳನಿರ್ಝರಾಂಬು ವೆಂ ॥
ಬನಿತಱನಾದಕೊಱಗ್ಗಿಸಱನಾಱಿಸಿ ಪಾಂಥರ ಕಂತುತಾಪಮಂ ।
ಘನತರಪುಷ್ಪರೇಣುಗಳೆ ಕೂರ್ತೊಡಗೂಡುವರ್ಗಿಂಬುಮಾಡುಗುಂ ॥ ೪೦ ॥

[1] ಪ್ರೀತಿಯಿಂ. [2] ಪಾಱುತುಂ. [3] ತಂಮಾರುತಂ. [4] ಕೇಳಲಣ್ಮದುಮ್ಮಳಿಸಿ.

ಕಂ॥ ಎಳೆಲತೆವನೆಯನಿತನಿತುಂ ।
ತಳಿರ್ಗೊದಱಿನಿತನಿತುವುಮುರ್ದ ಪುಱಿಲೆನಿತನಿತುಂ ॥
ಕೊಳನೆನಿತನಿತುಂ ಕೃತಕಾ ।
ಚಳವೆನಿತನಿತುಂ ರತಾರ್ತರೆಳಸಿರೆ ರಯ್ಯಂ ॥ ೪೧ ॥

ಚಂ॥ ವಿಹಗಕುಳಂಗಳಂ ನೆರಪಿ ಕೂಜನದೇೞ್ಗೆ ಮನೋಜರಾಜ್ಯಮಂ ।
ಬಹಳಿಕೆಯಿಂದೆ ಮೂವಡಿಸಿ ಕಾವುಮನಾರ ಮನಕ್ಕಮಾಳಿಪಾ ॥
ಗ್ರಹಮನೊಡರ್ಚಲಲ್ತು ಪೊಱೆಯಂ ಮರಸುತ್ತಿರಲಾತ್ಮಮನ್ಮಥ ।
ಗ್ರಹಮನದೇಂ ಕಟಿಲ್ಕುವರೊ ಯವ್ವನಮತ್ತೆಯರಲ್ಲಿ ನಲ್ಲರೊಳ್ ॥ ೪೨ ॥

ಹರಿಣೀವೃತ್ತಂ॥ ನಳಿನದಳದೊಳ್ ತೀವಿರ್ದಚ್ಛಾಂಬು ತಳ್ತಲರ್ವಾಸು ಕೆಂ ।
ದಳಿರ ತೆರೆ ತಾಂಬೂಲಂ ರಂಭಾದಳವ್ಯಜನಂ ಲತಾ ॥
ನಿಳೆಯ ಮಳಿನೀಗೀತಂ ಪೂಗಂಪು ರಾಗದಲಂಪನ ।
ಗ್ಗಳಿಸೆ ಬನದೊಳ್ ನಿಚ್ಚಂ ಮೆಚ್ಚಿಪ್ಪ ರಿಚ್ಚೆಯಿನೋಪವರ್ ॥ ೪೩ ॥

ವ॥ ಅದಲ್ಲದೆಯುಂ.
ರಗಳೆ॥ ಅಲ್ಲಿ ಬಹುಕುಸುಮಕುಜವೀಧಿಗಳೊಳೆಡೆಯಾಡಿ ।
ಸಲ್ಲಲಿತಲತೆಗಳಂ ಕಣ್ಣಾರೆ ನಡೆನೋಡಿ ॥
ಮುಂಚಿ ತಿಱಿದಲರ್ಗಳಂ ಕೂರ್ವಕೆಳದಿಗೆ ನೀಡಿ ।
ಲಂಚಮಂ ಪ್ರಿಯರಿತ್ತ ಪೂಮಾಲೆಯಂ ಸೂಡಿ ॥
ನನೆಯ ಮುಗುಳಲರ ಮಿಡಿಯೊಳ್ದುಡಿಗೆಯಂ ಮಾಡಿ ।
ತನಿಗೊರ್ವಿದೆಲೆವಳ್ಳಿಯೊಳ್ ಗುಂಡುಗುಱಿಚಾಡಿ ॥
ತುಱುಗಿದ ತಮಾಲದೊಳಗವಿದು ಸಖಿಯಂ ಕಾಡಿ ।
ನಱುಸುಯ್ಗೆ ಸುಱಿವಳಿಗೆ ಸುಗಿದು ಸಂಪಗೆಗೂಡಿ ॥
ಬಂದೊಳ್ಪ ಬೆಚ್ಚಿಸುವ ಚವಳಕಪಿಗಲ್ಲಾಡಿ ।
ಬಂದು ಮಾಮರದ ತಳಿಗೊಂಬನುಯ್ಯಲಾಡಿ ॥
ತುಂಬಿಗಳುಮೊಡನೊಡನೆ ತೀರಯ್ಸುತಿರೆ ಪಾಡಿ ।
ತಿಂಬಿಗಳವುವ ಗಿಳಿಗಳೊಡನೆಳಸಿ ಮಾತಾಡಿ ॥
ನುಡಿಯ ನುಣ್ಪಿಂ ಪಿಕನಿನಾದಮಂ ಕೊಱಚಾಗಿ ।
ಬಿಡುಮುಡಿಯ ಬಿಂಕದಿಂ ಸೋಗೆಯಂ ಕೀೞ್ಮಾಡಿ ॥
ನಡೆಯ ನಯದಿಂದಂಚೆಯಳವನೆೞಕುಳಿಯಾಡಿ ।
ತೊಡೆಯ ಚೆಲ್ವಿಂ ಕನಕಕದಳಿಯಂ ಜಿೞೋಡಾಡಿ ॥
ಕೃತಕಗಿರಿಗಳನೇಱಿದನಿತಱಿೞೊಳೆ ನಸುಬಾಡಿ ।
ಲತೆವನೆಗಳೆಸಳ ಪಸೆಯೊಳ್ ತನುವನೀಡಾಡಿ ॥
ಬೆಳೆದಳಿಪಿನಿಂ ಪಿಡಿದು ನಲ್ಲರಂ ಮುಂಡಾಡಿ ।
ಮುಳಿವ ತಿಳಿಪುವ ವಿನೋದಂಗಳಂ ಕೊಂಡಾಡಿ ॥

ಮಚ್ಚಱಿದು ಮನಮಿಚ್ಚೆವಟ್ಟ ಪುರುಳಂ ಬೇಡಿ ।
ಪೊಚ್ಚಮಿಲ್ಲದ ರಾಗರಸದಿಂ ಕುಳಿರ್ಕೊಂಡಿ ॥
ತಣ್ಬುೞಿಲ ತಾಣದೊಳ್ ಬಗರಗೆಗಳಂ ತೋಡಿ ।
ಕಣ್ಬೊಲದ ತಾವರೆಗೊಳಂಗಳೊಳಗೋಲಾಡಿ ॥
ವಿವಿಧಕೇಳೀಜಳದ್ರೋಣಿಯೊಳ್ ಮುೞ್ಕಾಡಿ ।
ನವನಾಳಿಕೇರರಸಪೂರಮಂ ತುಳ್ಕಾಡಿ ॥
ನಿಖಿಳಕೃತ್ರಿಮನದಿಗಳಿರ್ತ್ತಡಿಯೊಳೀಸಾಡಿ ।
ಮುಖಶಶಿಯ ಪಗೆಯೆಂದು ಕಮಲಮಂ ಬೀಸಾಡಿ ॥
ತನುಲತೆಯನಾಱಿಸೆ ಸುಗಂಧಪವನಂ ತೀಡಿ ।
ವನವಿಹರಣದೊಳಗೆ ಬೇಱೊಂದು ಕಡುಗಾಡಿ ॥
ಪೊೞ್ತುಗಳೆವುದು ನೃಪನ ಪೆಂಡವಾಸಂ ಕೂಡಿ ।
ವರ್ತಿಸುತ್ತಿರೆ ತಮ್ಮ ಬಿಯದ ಚಾಗದ ರೂಢಿ ॥ ॥ ೪೪ ॥

ಚಂ॥ ಅಳಿಗಲಗೊರ್ಂಚಲಂ ಗಿಳಿಗೆ ಮಾಮಿಡಿಯಂ ಕಳಹಂಸೆಗಬ್ಜಕೋ ।
ಮಳದಳಮಂ ಪಿಕಕ್ಕೆ ಕೊನರಂ ತಿಱಿದಿಕ್ಕಿ ಪುರಾಂಗನಾಜನಂ ॥
ಬಳೆವ ವಿನೋದದಿಂ ತಣಿಪುತಿರ್ಪ್ಪುದು ನಲ್ಲರಗಲ್ದಕಾಲದೊಳ್ ।
ಮುಳಿಯದೆ ಸಂತಮಿರ್ಕ್ಕೆಮೆಮಗೆಂದವಱೊಳ್ ಕೆಳೆಗೊಳ್ವ ಮಾೞ್ಕೆಯಿಂ ॥ ೪೫ ॥

ವ॥ ಮತ್ತಂ—

ಚಂ॥ ಅಲರ್ವಸೆಯೊಳ್ ಬೞಲ್ದುಸಿರ್ದು ತಣ್ಬುೞಲೊಳ್ ತಳರ್ದಿಕ್ಕೆ ದಾಣದೊಳ್ ।
ನಲಿದೆಳೆನೀರ್ಗಳಂ ಕುಡಿದು ತುಂಬಿಯ ಗೀತಮನೊಲ್ದು ಕೇಳ್ದು ನು ॥
ಣ್ಬಲಸಿನ ಬಾೞಿಯಿೞಿಯುರನೇಱಲ ಮಾವಿನ ಪಣ್ಗಳಂ ಮನಂ ।
ನಿಲೆ ಸವಿದಲ್ಲಿ ತೀರಮೆಯ್ಯುಮಂ ಮಱೆದಿರ್ಪ್ಪುದು ಪಾಂಥಸಂಕುಳಂ ॥ ೪೬ ॥

ಕಂ॥ ವನಲಕ್ಷ್ಮಿಯ ನೇತ್ರಾಂಶುಕ ।
ಮೆನೆ ನೇತ್ರಕ್ಕೆಸೆದು ಮಿಸುಗಿ ಪಸುರ್ವಡೆದುವು ನಂ ॥
ವನದ ಕೆಲಂಬಿಡಿದಾರ್ದ್ರಕ ।
ವನಜೀರಕವನಹರಿದ್ರವನ ಸಂತತಿಗಳ್ ॥ ೪೭ ॥

ವ॥ ಅವಕ್ಕನತಿದೂರದೊಳ್.

ಚಂ॥ ಎನಗಮರ್ದಿಂಪಿನೊಳ್ ಮಧುವಿನಿಂಪು ರಸಾಯನದಿಂಪುಕೂರೆ ಕೂ ।
ರ್ತನಿಯರ ಕೂಟದಿಂಪಮರ್ದನಿಂ[1]ಪೆಣೆಯಲ್ತು ದಿಟಕ್ಕೆ ಬೀಗುವಂ ॥
ತನುಪಮಮಾಗಿ ಬೀಗಿ ಬೆಳೆದಿಂಪಿನ ಪರ್ವಮೆನಿಪ್ಪ ಪರ್ವದಿಂ ।
ತನಿರಸಮೆಚ್ಚುಪಾಯೆ ಬಗೆಗೊಳ್ವುದು ಕರ್ಬಿನ ಸುರ್ಪು ತೋಂಟದೊಳ್ ॥ ೪೮ ॥

1 ಎಣೆಯಕ್ಕೆ.

ವ॥ ಅಲ್ಲಿ.

ಚಂ॥ ಸ್ಫುರಿಯಿಸುವೆಮ್ಮ ಪುರ್ವ ನೆಱಿಗುಂ ಜಗಮುಂ ಗೆಲಲಿನ್ನದೇಕೆ ನೀಂ ।
ಪರಿಹರಿಸೆಂದು ಮತ್ತುಲದ ಕರ್ವಿನ ಬಿಲ್ಲ ನನಂಗನಿಂದಗ ॥
ಳ್ಚಿರಿಸಿದರೀಪುರಾಂಗನೆಯರೆಂಬ ಕನಲ್ಕೆಯಿ ನಿಕ್ಷುಕೋಟಿ ಪ ।
ಲ್ಮೊರೆವಪೊಲಿಕ್ಷುಯಂತ್ರನಿವಹಂ ಮೊರೆವಬ್ಬರ ಮೆಂದು ಮುಬ್ಬರಂ　　॥ ೪೯ ॥

ಉ॥ ಓಲಗಶಾಲೆ ಪೂಗಿಡುಂಗಳೋಳಿಗೆ ಜೇವಣಶಾಲೆ ಮತ್ತಭೃಂ ।
ಗಾಳಿಗೆ ಜೇನಶಾಲೆ ಕುಸುಮೇಷುಗೆ ಸೌರಭಸತ್ರಶಾಲೆ ತ ॥
ಣ್ಗಾಳಿಗೆ ನಾಟ್ಯಶಾಲೆ ಕುಸುಮಾಪಚಯಪ್ರಚಳತ್ಪುರಾಂಗನಾ ।
ಲೋಲಕಟಾಕ್ಷಲಕ್ಷ್ಮಿಗೆನಲೊಪ್ಪುವುವಲ್ಲಿಯ ಪುಷ್ಪವಾಟಿಗಳ್　　॥ ೫೦ ॥

ಕಂ॥ ಅಹಿಯಂತೆ ವಿಷೋದ್ಗಾರಿಗ ।
ಳಹರ್ನಿಶಪ್ರಹರದಂತೆ ಘುಟಿಕಾತ್ಮಂಗಳ್ ॥
ರಹಟಘುಟೀಯಂತ್ರಂಗಳ್ ।
ಬಹುವಿಧವಿಭ್ರಮದಿ ನೆಸೆವುವುಪಶಲ್ಯಕದೊಳ್　　॥ ೫೧ ॥

ಚಂ॥ ವಿಳಸದನಂತಪದ್ಮವಸುರಾಂತಕನಂ ಫಣಿವಂಶಮುಂ ಸದಾ ।
ನಳಕುಮುದಾವಭಾಸಿ ದೆಸೆಯುಂ ರಘುನಂದನಸೈನ್ಯಮುಂ ನಿರಾ ॥
ಕುಳಕವಿರಾಜಹಂಸಸುಭಗಂ ನಭಮುಂ ನೃಪಗೇಹಮುಂ ಸಮಂ ।
ತಿಳಿಪುಗುಮಲ್ಲಿ ಮಂದಪವನೋಚ್ಚಳಶೀಕರಮಂಬುಜಾಕರಂ　　॥ ೫೨ ॥

ವ॥ ಮತ್ತಂ.

ಉ॥ ಪಾವಕದಿಕ್ಕಿನಂತೆ ವನದಂತೆ ವಿಜೃಂಭಿತಪುಂಡರೀಕ ಮಿಂ ।
ದೀವರನಾಭರಮ್ಯಸಭೆಯಂತೆ ರಸಾತಳದಂತನಂತಪ ॥
ದ್ಮಾವಹಮುರ್ವಿಯಂತೆ ನಭದಂತವಲಂಬಿತರಾಜಹಂಸ ಮಾ ।
ಮ್ರಾವಳಿಯಂತೆ ಕಾಮಿಜನದಂತೆ ಸಮುತ್ಕಳಿಕಾಕುಳಂ ಕೊಳಂ　　॥ ೫೩ ॥

ವ॥ ಮತ್ತಮಲ್ಲಿ.

ಚಂ॥ ನೆಗಟ್ದನವದ್ಯವಿದ್ಯರ ಕಳಾವನದಂತೆ ಪರೋಪಭೋಗಮ್ಯ ।
ತ್ತಿಗಳೆನಿತಕ್ಕುಮಂತನಿತು ಕುಂದದೆ ಪೆರ್ಚುವ ತೋಯದಿಂದ ಮಾ ॥
ನಗರದ ಬಾವಿ ಪೊಕ್ಕರಣೆ ದೀರ್ಘಿಕೆ ಪೆರ್ಗೆಱಿ ದೊಣ್ಣೆ ಪೂಗೊಳಂ ।
ಖಗರಗೆ ಬೆಂಚೆ ಪಳ್ಳ ಮೊಱಿವೆಂಬ ಜಲಾಶಯಮಿಂತು ಸುತ್ತಲುಂ　　॥ ೫೪ ॥

ಕಂ॥ ನೀಡಿರದೆ ಪಿರಿಯಕರಿ ಸೆಂ ।
ಡಾಡೆ ನೃಪಂ ನಿಚ್ಚಮತುಳಜನಕಳಕಳದಿಂ ॥
ಕೂಡಿ ಸೊಗಯಿಪುವು ನಗರದ ।
ಮೂಡಣ ಪಡುವಣ ವಿಭಾಗದೊಳ್ ವೈಹಳಿಗಳ್ ॥ ೫೫ ॥

ನಯನಿಪುಣಸೂತ್ರಧಾರರ್ ।
ನಿಯಮಿಸುವರ್ ಭದ್ರಮಂದಮೃಗಸಂಕೀರ್ಣರ್ ॥
ಸ್ವಯದ ನೃಪಕರಿಗಳಂ ಪ್ರಣಿ ।
ಧಿಯೊಡಂಬಡೆ ಸಕಳಶಿಕ್ಷೆ[1] ಕಣ್ದೋಱುವಿನಂ ॥ ೫೬ ॥

ಉ॥ ವರ್ತಿಪ ಬೃಂಹಿತಂಗಳೊಳೊಳಸೋರ್ವ ಮದಸ್ರವದಂಬು ಕೊಂಬು ಸಂ ।
ವರ್ತದ ಬಲ್ಸಿಡಿಲ್ಗಳೆನೆ ವಜ್ರಧರಂ ಸೆಱಿಗೆಯ್ದೆ ಪುಷ್ಕಳಾ ॥
ವರ್ತಘನಾಘನಂಗಳವೊಲಂಜನಕಾಂತಿಗಳುಗ್ರದಂತಿಗಳ್ ।
ಮಾರ್ತುಡುಗೀಗಮೇಱಿನೆಯುಮಂ ತಡವಂದಮನಾಂತು ಕಂಭದೊಳ್ ॥ ೫೭ ॥

ವ॥ ಅದಲ್ಲದೆಯುಂ.

ಮ॥ ನವರತ್ನೋತ್ಕರದಿಂ ಸುರೇಂದ್ರಧನುಮಂ ಮೆಯ್ವಣ್ಣದಿಂ ತಾರ್ಕ್ಷ್ಯನಂ ।
ಪವಮಾನಾತ್ಮಜನಂ ಜವಪ್ರಸರದಿಂ ಸೂರ್ಯಾಶ್ವಮಂ ಶಕ್ರವಾ ॥
ಹವನಕ್ಷೂಣಗುಣಂಗಳಿಂ ಮಿಗುವ ಜಾತ್ಯಶ್ವಂಗಳಂ ತಿರ್ದುತಿ ।
ರ್ಪ್ಪವರ್ಗೀಂ ಸಾದ್ರ್ಯಮೊ ಶಾಲಿಹೋತ್ರರವಿಪುತ್ರಾರೋಹಣಪ್ರೌಢಿಗಳ್ ॥ ೫೮ ॥

ವ॥ ಆಪ್ರದೇಶಕ್ಕಾಸನ್ನಮಾಗಿ ವಿಹಿತಲೋಹಪಟಪ್ರಮುಖಬಹುವೇಧ್ಯಸಾನ್ನಿಧ್ಯಪರುಮಿರಚಿತಾಂಗುಳಿತ್ರಾಣರಪ್ಪ ಶಿಷ್ಯರಂ

ಕಂ॥ ನಿಯಮಿಸವರ್ ತ್ರಿವಿಧಧನುಃ ।
ಪ್ರಯೋಗದೊಳ್ ದೃಷ್ಟಿಮುಷ್ಟಿಶರಸಂಧಾನ ॥
ಕ್ರಿಯೆ ಲಕ್ಷ್ಯಸಿದ್ಧಿ ನಿಜಶಿ ।
ಕ್ಷೆಯಿನನುಪಮಮಾಗೆ ಚತುರಚಾಪಾಚಾರ್ಯರ್ ॥ ೫೯ ॥

ವ॥ ಮತ್ತಮಲ್ಲಿ.

ಚಂ॥ ಒದವಿ ಪೊದಟ್ಟಿ ಮೇಳೆಯದ ಕೇತನಮಾಳಿಕೆ ವೀರಲಕ್ಷ್ಮಿ ದೂ ।
ರದ ಭಟರಂ ನಿಜೋಚ್ಚಲಪಟಾಂಚಲದಿಂ ಕರೆವಂತುಟಾಗೆ ಮ ॥
ತ್ತದು ಭೃಗುದೇವತಾಕಟಕಪರ್ವತಮೆಂಬಿನಮೊಪ್ಪುತಿರ್ಪುದಂ ।
ಕದ ಕಳನಲ್ಲಿ ಬಿನ್ನಣದ ಬೀರರಿಳಾಪತಿ ಮೆಚ್ಚೆ ಕಾದುವರ್ ॥ ೬೦ ॥

[1] ಕಣ್ದೆಱಿವಿನೆಗಂ.

ವ॥ ಆಕಳದ ಕೆಲದೊಳ್ ಸಾರಿಯುಂ ಕೋಲೊಡ್ಡಿಗೆಲ್ವ ನಿಗಳನನೆಗಱ್ತಿಗಿಡಿಪ ಭೃಗುವಂ ನಗುವ ಬೇತಾಳನಂ ಬೇಡೆನಿಪ ತಕ್ಕು ಮಿಕ್ಕು ವರೆ ಕಲ್ತು ಬಿನ್ನಣಿಗಳಿರ್ದರ್.

ಚ॥ ಕಿಱಿಪುವ ಗೇಣ ಕೇಣಮಿವರಿಂ ನವಯೌವನಯೋಗ್ಯಮಾಯ್ತು ತ ।
ಣ್ಣೆಱಿದುದು ರೂಪುಗೊಂಡುದೆನೆ ಚಾರಿ ಪುಗಿಲ್ ನೆಲೆ ನೋರ್ಪುರ್ ದಂಡೆ ಸೂಟಿಲ್ ॥
ನಿಱಿಸು ನಿಘಾತ ಮಾಂಕೆ ಬಗೆ ಬಗ್ಗಣೆ ವಂಚನೆ ಬಂಧ ಮೆಂಬಿವಂ ।
ಮೆಱೆವೊವಜರ್ಕಳೇಂ ಕಲಿಸುತಿರ್ಪರೊ ಚಟ್ಟರನಱ್ತಿವಟ್ಟರಂ ॥ ೬೧ ॥

ವ॥ ಇಂತನೇಕ ಜನಮನೋಹಾರಿ ಸೌಂದರ್ಯವೃತ್ತಿಗವಕಾಶವಾದ ವಿವಿಧಪ್ರದೇಶದಿಂದೊಳಗೆ ವಿಷಮವಿಷಲತಾ ಗುಲ್ಮಕಂಟಕವಿಕೀರ್ಣವಾಗಿ ಬಳಸಿ ಬಳ್ವಳಿವ ಬಾಱ್ವೇಲಿಗನತಿದೂರದೊಳ್.

ಮ॥ ಪರಿವೇಷಂ ರವಿಬಿಂಬಮಂ ಜಳಧಿ ಜಂಬೂದ್ವೀಪಮಂ ಸುತ್ತಿಸೌಂ ।
ದರಮಾಗಿರ್ಪವೊಲಿರ್ಪ್ಪುದಪ್ರತಿಮಕೋಟಾಚಕ್ರಮಂ ಸುತ್ತಿಕಂ ॥
ಜರಜಃಪುಂಜವಿಚಿತ್ರವೀಚಿರುಚಿರಂ ಪರ್ಯಂತಹಂಸಂ ನಿರಂ ।
ತರಕಾಂತಂ ಪರಿಖಾಂತರಂ ಪುರವಧೂಚೇನೋತ್ತರೀಯೋಪಮಂ ॥ ೬೨ ॥

ಕಂ॥ ಪೊಱವೊೞಲ ಬನದ ಕಟ್ಟಿತೆ ।
ಮಱಿದುಂಬಿಗಳಿಂದೆ ಬಯ್ಯ್ದು ಪಾಡಿಸಿ ಸಾರ್ತಂ ॥
ದುಱಿದೊಡ್ಡಿದರ್ಕಬಿಂಬದ ।
ತುಱುಗಲದೆನಿಸುವುದು ಕಾಂಚನಪ್ರಾಕಾರಂ ॥ ೬೩ ॥

ಚಂ॥ ಇದು ತೆಱಿದಿರ್ದ ರಾಹುಮುಖಮೆಂಬ ವಿಶಂಕೆಯಿನಿಂದ್ರನೀಲರ ।
ತ್ನದ ತೆನೆಯಂಬುಗಂಡಿಯೊಳಗಂ ಪುಗಲಂಜಿ ನಭಂಬರಂ ಪೊದ ॥
ಱಿದ್ದಿದವಿದ ಕೋಂಟೆಯುಂ ನುಗುಱ್ದು ಪೋಗಲಹಃಪತಿ ಬೇಱಿಬಟ್ಟೆಗಾ ।
ಣದೆ ತಡೆದಿರ್ಪನಲ್ಲಿ ಪೊಣರ್ವಕ್ಕಿಗೆ ಸಂತಸಮಾಗೆ ಸಂತತಂ ॥ ೬೪ ॥

ಕಂ॥ ಪ್ರತ್ಯಾಸನ್ನದೆ ನಡೆವಾ ।
ದಿತ್ಯನ ರುಚಿ ಪೊನ್ನ ಕೋಂಟೆಯಂ ಕರಗಿಸಿದಂ ॥
ತತ್ಯುಚ್ಚಕೂಟಹತಿಯಿಂ ।
ನಿತ್ಯಂ ಪಱಿಪಱಿದು ಸಾರ್ವವಲ್ಲಿಯ ಮುಗಿಲ್ಗಳ್ ॥ ೬೫ ॥

ಮುಗಿಲಟ್ಟಳೆಗಳ ಪಚ್ಚೆಯ ।
ಪೊಗರ್ವೆಳಗಿಡಿದಡೆರ್ವ ಪಾಂಗು ಗಗನಾಪಗೆಯಂ ॥
ಜಗುನೆಯ ಕರ್ಮಾಡು ಮಱಿಸಲ್ ।
ನೆಗೆವಂತೊಪ್ಪುವುದು ಕಣ್ಗೆ ತತ್ಪುರಜನದಾ ॥ ೬೬ ॥

ಕಂ|| ಪ್ರಣಿಹಿತಕಲಶಾವಳಿ ಕಿಂ ।
ಕಿಣಿಯೊಳ್ ಪೊಱಮಡುವ ಪುಗುವ ಜನದುಲಿಯುಲಿಯೊಳ್ ॥
ತೊಣೆಯಾಗೆ ನಗರಲಕ್ಷ್ಮಿಯ ।
ಮಣಿನೂಪುರದಂತೆ ಗೋಪುರಂ ಸೊಗಯಿಸುಗುಂ ॥ ೬೭ ॥

ತುಂಗತರಂಗಂ ಸುೞಿವ ತು ।
ರಂಗಂ ನೊರೆವಿಂಡು ನೃಪರ ಬೆಳ್ಗೊಡೆಯಾಗಲ್ ॥
ಗಂಗಾಪ್ರವಾಹಮೆನಿಪುದು ।
ಸಂಗತಜನಕಳಕಳಂ ಪ್ರತೋಳೀವಳಯಂ ॥ ೬೮ ॥

ಮ|| ಪುರಪೂರ್ವಾಪರದಕ್ಷಿಣೋತ್ತರದಿಶಾಖಂಡಂಗಳೊಳ್ ನೀಳ್ದು ಬಿ ।
ತ್ತರದಿಂದೊಪ್ಪುವ ಬೀದಿಗಳ್ ಸುಜನಚಿತ್ತಾಹ್ಲಾದಿಗಳ್ ಕೀರ್ಣಪು ॥
ಷ್ಪರಸಾಮೋದಿಗಳೋಳಿಯೊಳ್ ಸ್ಫಟಿಕಲೀಲಾವೇದಿಗಳ್ ಗೋತ್ರಭಿ ।
ತ್ಪುರಸಂವಾದಿಗಳುದ್ಧ್ವತೋರಣಪತಾಕಾಸ್ತಂಭಸಂಭೇದಿಗಳ್ ॥ ೬೯ ॥

ಚಂ|| ದ್ವಿಗುಣಿಸೆ ಬಣ್ಣವಿಂದುಮಣಿಮಂಡಪಕಾಂತಿಗಳಿಂ ಮುಗುಳ್ತ ಮ ।
ಲ್ಲಿಗೆಗೆ ಹರೀತರತ್ನಭವನಾಂಶುಗಳಿಂ ದೆಳೆವಾೞಿಗಿಂದ್ರನೀ ॥
ಲಗೃಹಮರೀಚಿಯಿಂ ಮಧುಕರಪ್ರಕರಕ್ಕರುಣಾಶ್ಮವೇಶ್ಮರ ।
ಶ್ಮಿಗಳಿ ನಶೋಕೆಗೀವುವು ಗೃಹೋಪವನಾವಳಿ ಕೇರಿಗೇರಿಯೊಳ್ ॥ ೭೦ ॥

ಕಂ|| ಬಾಂದೊಱೆಯೊಳೊಗೆದ ನೊರೆವಿಂ ।
ಡೆಂದು ಪುರಶ್ರೀಗೆ ಪಿಡಿದ ಬೆಳ್ಗೊಡೆಯ ತಗು ॥
ೞಿಪ್ಪಿಂದು ನೆಗೆತಂದ ಬೆಳ್ಮುಗಿ ।
ಲೆಂದೆನಿಸುವುವಭ್ರಚುಂಬಿಸೌಧತಳಂಗಳ್ ॥ ೭೧ ॥

ಪುರವರದ ಸೌಧತಲದೊಳ್ ।
ಕರುವಿನ ಚಿತ್ರದ ಬಿಡಾಲಮಂ ಕಂಡೊಡೆ ಚೆ ॥
ಚ್ಚರಮೆ ಪುಲಿಗೆತ್ತು ಚಂದ್ರನ ।
ಹರಿಣಂ ಬಿಱುತೋಡಿ ನಗಿಸದಿರ್ಕ್ಕುಮೆ ಜನಮಂ ॥ ೭೨ ॥

ಮ|| ಕಳಶಂ ಕನ್ನಡಿ ರಂಗವಲ್ಲಿ ರಸವದ್ಗೀತಂ ವರಸ್ತ್ರೀಜನಂ ।
ತಳಿರುಯ್ಯಲ್ ಮಣಿದೀಪರಾಜಿ ಗುಡಿ ಮಾಂಗಲ್ಯಸ್ವನಂ ವೇದಿಕಾ ॥
ವಳಯಂ ಪೂವಲಿ ಮತ್ತವಾರಣಮುದಂಚತ್ತೋರಣಂ ಚಿತ್ರಭಿ ।
ತ್ತಿ ಲತಾಮಂಟಪವೆಂಬಿವಿಲ್ಲದ ಜಿನಾವಾಸಂಗಳಿಲ್ಲೆಲ್ಲಿಯುಂ ॥ ೭೩ ॥

ಶಾ|| ಶ್ರೀನೀಡಂ ಪುರಮಬ್ಧಿ ತತ್ವನಯಘೋಷಂ ಕರ್ಣಧಾರಂ ಮಹಾ ।
ಮಾನಸ್ತಂಭಕುಳಂ ಶಿಳಂ ಪರಮಧರ್ಮವ್ಯಾಪ್ತಿ ಬಿಣ್ಗುಂಡು ಭ ॥
ವ್ಯಾನೀಕಂ ಶುಭಲಾಭಲಂಪಟಮನಸ್ಸಾಂಯಾತ್ರಿಕವ್ರಾತಮಾ ।
ಗೇನೊಪ್ಪಿರ್ಪವೊ ಪೋಲ್ತು ದಿವ್ಯಜಿನಚೈತ್ಯಂಗಳ್ ಬಹಿತ್ರಂಗಳಂ ॥ ೭೪ ॥

ಮ|| ಗುರುಧರ್ಮಶ್ರವಣಾವಭಾಸಿ ನಭದೊಳ್ ನಿಷ್ಕಲ್ಮಷಾಶಾಂಬರ ।
ಸ್ಫುರಿತಂ ಶಾರದದೊಳ್ ಸುಧಾಧವಳಧಾಮಂ ಸೋಮನೊಳ್ ಚಿತ್ರವಿ ॥
ಚ್ಛುರಿತಂ ಮಂಡಿತಮಾನಿನೀನಿಟಲದೊಳ್ ನಿರ್ವಾಣಸೌಖ್ಯ ಪ್ರಿಯಾ ।
ನಿರತಂ ಸಾಮಜದೊಳ್ ಸಮಾನಮೆನಿಕುಂ ಪ್ರೋತ್ತುಂಗಚೈತ್ಯಾಲಯಂ ॥ ೭೫ ॥

ವ॥ ಎನಿಸಿದುತ್ತಂಭಿತಮಾನಸ್ತಂಭಮಕರತೋರಣವಿರಚಿತಂಗಳುಂ, ಅನೇಕಮಣಿಕೂಟಕೋಟಿ ವಿಟಂಕಟಂಕಿತವಿಯತ್ತಳಂಗಳುಂ, ಜಿನರಾಜಪೂಜಾನುರಕ್ತಪುರಜನಪ್ರವೇಶನಿಸ್ಸರಸಂಕೀರ್ಣಗೋಪುರಂಗಳುಂ, ಅಂತರಾಂತರವಿಕೀರ್ಣಸೌವರ್ಣಕಳಶಮುಕುರಚಾಮರವ್ಯಜನಧೂಪದೀಪಾದ್ಯುಪಕರಣವಿಳಸಿತಂಗಳುಂ, ಪ್ರಚಂಡಪಂಡಿತಸ್ಯಾದ್ವಾದವಿದ್ಯಾನುವಾದಶಬ್ದಾರ್ಥನಯಪ್ರಮಾಣವಾಣೀವಿಳಾಸಿಗಳುಮಪ್ಪ ಜಿನನಿವಾಸಂಗಳಲ್ಲದೆಯುಂ.

ಕಂ॥ ಮನಸಿಜನ ಭುವನಸರ್ವ್ವೋ ।
ಹನವಿದ್ಯಾಪೀಠವೆನಿಸಿ ರಂಜಿಪುದು ಪಯೋ ॥
ಗನಿಕಾಯಕಾಳಕೂಟಂ ।
ಘನಕನಕಕವಾಟಮಲ್ಲಿ ಗಣಿಕಾವಾಟಂ, ॥ ೭೬ ॥

ಉ|| ಮೇನಕೆ ರಂಭೆ ಯಊರ್ವಶಿ ಸುಕೇಶಿ ತಿಲೋತ್ತಮೆ ಮಂಜುಘೋಷೆ ಯೆಂ ।
ಬೀನೆಗಟ್ಟಿಗ್ಗದಚ್ಚರಿಯರಚ್ಚರಿಯಪ್ಪ ವಿಳಾಸಮಂ ನಿಜ ॥
ಭ್ರೂನಟನೈಕದೇಶಮೆ ತಱುಂಬಿಮುದೆಂಬ ಸುರೂಪವಿಭ್ರಮ ।
ಶ್ರೀ ನಿಜಮಾಗೆ ರಂಜಿಸುವರಲ್ಲಿಯ ರೂಢಿಯ ಗಾಡಿಗಾರ್ತಿಯರ್ ॥ ೭೭ ॥

ವ। ಎನಿಪಗಣ್ಯಲಾವಣ್ಯಪಣ್ಯಾಂಗನಾಜನದ ಭಾಗ್ಯದ ಸೌಭಾಗ್ಯದ ನಯದ ಬೀಯದ ಚಾಗದುಪಭೋಗದೆಸಕದೊಳಂ, ಬದರ್ಗಾರ್ತಿಯರ ಬಹಿರಂಗಣಂಗಳೊಳ್ ಅಳವಟ್ಟ ಕಂಭಂಗಳಲ್ಲಿ ನೆಗಱ್ತೆಗೆತ್ತಿ ತೆತ್ತಿಸಿದ ಸೌಭಾಗ್ಯಘಂಟೆಗಳೊಳಂ, ಸೌಧತಳಂಗಳ ವಿನೋದವೇದಿಕೆಯ ಮತ್ತವಾರಣದ ಮಲಂಗಂ ಮಲಂಗಿ ಚದುರ ಚಾಗದ ದಗುಂತಿಯಂ ಮೆಱೆವ ವಿವಿಧವಿಟರೊಳಂ, ಚತುರಚತುರಿಕೆಯರೋದಿಸಿದ ಮದನಾಗಮಂಗಳಂ ಪದಂಗುಟ್ಟಿ ಪರಮಪಂಡಿತಂಗಳೆನಿಪ ಪಂಜರದಪಂಡಿತವಕ್ಕಿಗಳೊಳಮತಿಮನೋಹಾರಿಯಪ್ಪ ಸೂಳೆಗೇರಿಗಾಸನ್ನಮಾದ ವಿಪಣಿವೀಥಿಯೊಳ್.

ಚಂ|| ಬಳಸುವ ತುಂಬಿವಿಂಡು ಜಲದಾವಳಿ ಸೂಸುವ ಬೆಳ್ಮುಗುಳ್ ಘನೋ |
ಪಳತತಿ ಮಾಳೆಯಿಂದೊಸರ್ವ ಪುಷ್ಪರಸಂ ಮಱಿಕಿ ಮಾಳೆಗಾರ್ತಿಯ ||
ರ್ಕಳ ಕಡೆಗಣ್ಣ ಬೆಳ್ಪು ಕುಡುಮಿಂಚು ಕನನ್ಮಣಿಕಂಕಣಸ್ವನಂ |
ಗಳೆ ಮೊಳಗಾಗೆ [1]ಕಾಮೋಗಮನಲ್ಲಿಯ ಪೂವಿನ ಸಂತೆ ತೋಱುಗುಂ || ೭೮ ||

ಕಂ|| ಬಿರಯಿಗಳನಿಸಲನಂಗಂ |
ಗರಲಂಬಿನ ಪೊದೆಯನಖಿಳವನದೇವತೆಯರ್ ||
ವಿರಚಿಸಿ ನೀಡಲ್ ಬಂದಂ |
ತಿರಲೆಸೆವರ್ ಪುಷ್ಪಮಾಲಿಕಾಧಾರಿಣಿಯರ್ || ೭೯ ||

ಚಂ|| ಶ್ವಸಿತದ ಕಂಪು ಕಂಪನಭಿವರ್ಧಿಸೆ ಬಣ್ಣದ ಸೊಂಪು ಬಣ್ಣಮೇ |
ಱಿಸೆ ಮಧುರಸ್ಮಿತಾಂಶು ಮಧುರಸ್ಮಿತಲೀಲೆಯ ನೀಯೆ ಮಾಲೆಗೇ ||
ನೆಸೆದುವೊ ಮಾಲೆಗಾರ್ತಿಯರ ವರ್ತನೆ ಮಾಱುಗಳಂತೆ ಮಾಱುಗಳ್ |
ರಸಿಕರನೊತ್ತೆ ಬಾಸಿಗಮನೆತ್ತುವ ಚೆಲ್ವಗೆಯೆತ್ತೆ ಚಿತ್ತಮಂ || ೮೦ ||

ವ|| ಅದಲ್ಲದೆಯುಂ ಅತಿಮಧುರಪೂಗಫಲಂಗಳೊಳಂ ಸರಸನಾಗವಲ್ಲೀದಳಂಗಳೊಳಮೊಸೆವ ತಾಂಬೂಲಿಕಾನಿಕೇತನಂಗಳೊಳ್.

ಕಂ|| ಪೊಸಮುತ್ತಿನ ಸಿಪ್ಪುಗಳಂ |
ತೆಸೆದಪುವೆಂಬವರ ನೀರಸೋಕ್ತಿಯ ಪುರುಳೇಂ ||
ವಸುಧೆಗಿೞಿದಿಂದುಕಳೆಗಳ |
ಪೊಸಬೆಳಸೆನಿಪುವು ಪೊದಟ್ಟಿ ಬೆಳ್ಪಿಡಿದೆಲೆಗಳ್ || ೮೧ ||

ವ|| ಅದಲ್ಲದೆಯುಂ.

ಕಂ| ವಿರಹಭರೋತ್ಕಂಠಮನೋ |
ಹರಿಯ ಕಪೋಳಂಗಳಂತೆ ನಿಬ್ಬರಿಸಿದ ಬೆ ||
ಳ್ಕರಿಸಿದೆಲೆಗಳಿನದೆಲೆಗಳ |
ಬರಿಸುವುದನುನಯದೆ ಪೆಂಟಿ ಗೆಂಟರ ವಿಟರಂ || ೮೨ ||

ವ|| ಅದಱ ಕೆಲದೊಳ್.

ಕಂ|| ನೆರೆವದಳದರೆವ ಸಾಂದಿನ |
ಮೊರೆವಳಿಗಳ ಪರೆವ ಕಂಪನೆರೆವನಿಳನ ಮು ||
ಯ್ಯೊರೆವ ವಿಟಭೋಗಿಗಳ ವಿ |
ಸ್ತರದಿಂ ಸೊಗಯಿಪುವು ಘಟ್ಟವಳರಂಗಡಿಗಳ್ || ೮೩ ||

[1] ಕಾಮುರ್ಕಮು.

ವ॥ ಅದಲ್ಲದೆಯುಂ.

ಕಂ॥ ಉಂಡೊಡೆ ಕಿಡುವುದು ಪಿರಿದೇಂ ।
ಕಂಡೊಡೆ ಪೆಸರ್ಗೊಂಡೊಡೊರ್ಮೆ ನೆನೆದೊಡೆ ಕಿಡುಗುಂ ॥
ಚಂಡಾಮಯಮೆನಿಪೌಷಧ ।
ಮಂಡಳಿಯಿಂ ಸೇವ್ಯಮಲ್ಲಿ ಗಂದಿಗವಸರಂ ॥ ೮೪ ॥

ಇದು ಪೂವಲಿಗೆವಱಿದ ನೀ ।
ಲದ ರಂಗಂ ಭಗಣಬಿಂಬಚುಂಬಿತಯಮುನಾ ॥
ಹ್ರದಮೆನಿಪುದು ಚಿತಮಣಿಗಳ ।
ಪುದುವಿಂ ಮಣಿಗಾಱವಸರ ಮಸಿತಾಂಬರದೊಳ್ ॥ ೮೫ ॥

ತರಳವೃತ್ತ॥ ಕಮಳವೃಂದಮನಾವಿರಲ್ ಪಗಲುಂ ಪಳಂಚಲೆವೀಪುರೋ ।
ತ್ತಮವಧೂವದನೇಂದುಗಳ್ಕಿದುವುಂತು ಮಾಣಿಪ ಶಕ್ತಿಯಿ ॥
ಲ್ಲೆಮಗವಂ ಕೆಳೆಗೊಂಡು ಮಾಣಿಪೆವೆಂದು ಬಂದ ದಿನೇಶರಂ ।
ತಮರ್ದ ಭಂಡೆದ ಸೊಂಪು ಪೊಂಪುೞಿ ಕಂಚಗಾಱರ ಪಟ್ಟದೊಳ್ ॥ ೮೬ ॥

ಕಂ॥ ಧನದನ ಕಾಂಚನಮಿವರನು ।
ದಿನಮೊರೆವ ಸುವರ್ಣರಜದ ತೂಕಕ್ಕೆ ವರಲ್ ॥
ಕನಸಿನೊಳಮಾಱದೆನಿಸುವ ।
ಧನಪತಿಗಳ ಬಚ್ಚ[1]ರಾಪಣಂಗಳಳುಂಬಂ ॥ ೮೭ ॥

ಉ॥ ವಲ್ಲಭಮಂತ್ರತಂತ್ರಪರಿರಕ್ಷೆಯಿದೆಂದುಮಬಾಧ್ಯ ಮಿಂತಿದೆಂ ।
ದಿಲ್ಲಿಯೆ ರತ್ನಮಂ ಧರಣಿ ಬಯ್ತ್ತಳೊ ಮೇಣ್ ವಡಬಾಗ್ನಿಗಳ್ಕಿ ತ ॥
ನ್ನಿಲ್ಲಿಯೆ ರತ್ನಮಂ ಕಳಿಪಿತೋ ಕಡಲೀಪುರಿಗೆಂಬ ಮಾತನ ।
ಲ್ಲಲ್ಲಿ ನಿಮಿರ್ಚಗುಂ ವಿಪಣಿ ವೀಥಿಯೊಳೊಪ್ಪುವ ರತ್ನರಾಶಿಗಳ್ ॥ ೮೮ ॥

ವ॥ ಅದಲ್ಲದೆಯುಂ.

ಕಂ॥ ನಾನಾಜನಬಹಳತೆಯಿಂ ।
ನಾನಾಮಣಿಕನಕವಸ್ತುವಿಸ್ತೀರ್ಣತೆಯಿಂ ॥
ನಾನಾಕ್ರಯವಿಕ್ರಯದಿನ ।
ನೂನಮೆನಲ್ ಪಣ್ಯಮಾರ್ಗಮಾರ್ಗಂ ಸೇವ್ಯಂ ॥ ೮೯ ॥

[1] ದಾಪಣಂ

ವ॥ ಆ ವಿಪಣಿವೀಥಿಯೆಂಬ ಬಿಸಜನಾಳಕ್ಕೆ ವಿಚಿತ್ರಪತ್ರದಂತೆ ರಾಜಭವನಮಂ ಬಳಸಿ.

ಮುದ್ರಿಕೆ॥ ನಗರನಾಯಕನುನ್ನತಿ ತನ್ನಂ ಮುನ್ನಲೆಯುತ್ತಿರೆ ಮಂದರಂ ।
ಬಗೆಯೊಳೊಡ್ಡಿಸಲಣ್ಮದೆ ಸೇವಾವೃತ್ತಿಗೆ ಪೂಣ್ದು ನಿತಾಂತಮೋ ॥
ಲಗಿಸಲಟ್ಟಿದ ಸಾನುವದೆತ್ತಂ ಬಂದೆಳಸಿರ್ದಪುದೆಂಬಿನಂ ।
ಸೊಗಯಿಪ್ಪುದು ಪೊಮ್ಮದಿಲುಗ್ರಾಂಶೂದ್ಗತಮಾಗಿರೆ ಕೆಮ್ಮುಗಿಲ್ ॥ ೯೦ ॥

ವ॥ ಅಲ್ಲಿಂದೊಳಗೆ ವಿಚಿತ್ರಚೀನಾಂಬರಾವಳಂಬಿತಸಂಭೃತಮಾಗಿ

ಚಂ॥ ಜಲಧಿಯೊಳಿಪ್ಪ ಕಾಲಮೊಡಗೂಡಿದ ಬಂಧುಗಳಪ್ಪ ರತ್ನಮಂ ।
ಡಳಗಳಿಳೇಶಮಂದಿರದೊಳಿರ್ದೊಡವಂ ನೆನೆದಟ್ಟಿಱಿಂದೆ ಬಂ ॥
ದೊಳಪುಗಲಾಱದಾವರುಣವಾಹನ ಮೀಕ್ಷಿಸಲೇಱಿ ನಿಂದುದುದ್ಧ ।
ದೊಳೆನೆ ರಂಜಿಕುಂ ಮಕರತೋರಣವೀಕ್ಷಣಸೌಖ್ಯಕಾರಣಂ ॥ ೯೧ ॥

ವ॥ ಮತ್ತಮನವರತಮೋಲಗಿಸಲೆಂದೊಳಪುಗುವ ಮಂಡಳಿಕದಂಡನಾಥಸಾಮಂತವೃಂದದಂದಣದ ಸತ್ತಿಗೆಯ ಸಂದಣಿಯಿನೊಂದಿದುತ್ತರಾಭಿಮುಖಮಪ್ಪ ಬಾಗಿಲ್ವಾಡಮುಮಂ, ಮದಪರಿಮಳಕ್ಕೆಳಸಿ ಬಳಸುವಳಿಮಾಲೆ ಮೇಲೆ ಪೀಲಿದಱಿಯ ಲೀಲೆಯನೊಡರ್ಚೆ ಬಾಳ್ಗಂಬದೊಳನೇಕನಿಗಳನಿಯಮಮಂ ತಳೆದು ಗರಳಗಳನಿಂದೆ ಸೆಱೆವಟ್ಟ ಗಜದನುಜನಂತಿರ್ದ ಪಟ್ಟವರ್ಧನಗಜೇಂದ್ರಮಿರ್ಪ್ಪನೆಶಾಲೆಯುಮಂ, ಜವದ ಜಗಳಕ್ಕೆ ಪುರುಡಿಸುವ ಗರುಡನಂ ಗಜಱುವಂತೆ ದುಂದುಭಿಗಭೀರಹೇಷಾರವಂಗಳೊಗೆಯೆ ಸೊಗಯಿಸುವ ನಿತ್ಯನೀರಾಜನವಿರಾಜಮಾನವಾಜಿರಾಜಿಗವಕಾಶಮಪ್ಪ ಮಂದುರಮುಮಂ, ಒಳಗೆ ತಳತಳಿಸಿ ಪೊಳೆವ ಕೆಯ್ದುಗಳ ಬಳಗಮಂ ತಳೆದ ವಿಷಮವಿಷಧರ[ಪೂರ್ಣ]ಮಪ್ಪ ಪಾತಾಳಕುಹರದಂತಗುರ್ವಿಸುವ ಶಸ್ತ್ರಶಾಲೆಯುಮಂ, ಸುರುಚಿರಪರಾರ್ಧ್ಯಮಣಿಕನಕವಸ್ತುವಿಸ್ತಾರಮೆಸೆಯೆ ನಿಜಕವಾಟಘಟಿತಕುಳಿಶಮಣಿಕಿರಣದಿಂ ಹಿಮಕಿರಣವಿಭೂತಿಯುಂ ನಗುವಂತೆ ರಂಜಿಸುವ ಕೋಶಭವನಮುಮಂ, ಕುಬ್ಜವಾಮನಕಿರಾತವರ್ಷಧರಬರ್ಬರಪ್ರಾಯಪುರುಷಪರಿವೃತೆಯರಾಗಿ ಗಿಡುಗಳ ಕಂಟಕಿತಜರತ್ತರುಳೊಳಗೆಳ್ಳಲತೆಗಳಂತೆ ಕಣ್ಗೊಳಿಪ ಶುದ್ಧಾಂತಕಾಂತೆಯರಿನೊಪ್ಪುವಂತಪುರದಾವಾಸಮುಮಂ ನೃಪವಿಭೂತಿಯಂ ಕಣ್ಣಾರೆ ನೋಱ್ಪಿ ಜಲದೇವಿಯರ್ಕಳಲರ್ಗಣ್ಣ ಬಳಗಂಗಳಂತಲರ್ದ ಕುಮುದವನಂಗಳಿಂ ಮನಂಗೊಳಿಪ ಭವನದೀರ್ಘಿಕಾನಿಕರಮುಮಂ, ನಿಜಸ್ಫುರಿತ ಹರಿತ ಕಿರಣಂಗಳಿಂ ಕಳಧೌತ ವಿಳಸಿತ ಪ್ರಾಸಾದ ಪಙ್ಕ್ತಿಯಿಂ ಮಾಯಂಮಾಱ್ಪಿ ಪವನಂಗಳು ಮಳುಂಬಮಾಗೆ ತದನಂತರೋದ್ದೇಶದೊಳ್

ಚಂ॥ ಬರೆವೊಡೆ ಚೀರಘಟ್ಟ ಕರುವಿಟ್ಟಪನೆಂದೊಡೆ ಪದ್ಮಯೋನಿ ಕಂ ।
ಡರಿವೊಡೆ ವಿಶ್ವಕರ್ಮನಱಿಗುಂ ನೆಱೆಯಂ ಪೆಱನಿಂತಿದಂ ಸುರೇ ॥
ಶ್ವರಭವನಕ್ಕೆ ತಾನೆ ಪಡಿಚಂದಮಿದೆಂಬಿನ ಮಚ್ಚರಕ್ಕೆ ತಾ ।
ಯ್ಗರು ಕರುಮಾಡಮೊಪ್ಪುವುದಳಂಕೃತಸಪ್ತತಳಂ ನಿರಾಕುಳಂ ॥ ೯೨ ॥

ಚಂ|| ಅದು ಪೊಸಪೊನ್ನ ಘಂಟಿಯ ದುಕೂಲವಿತಾನದ ಮೌಕ್ತಿಕಪ್ರಲಂ ।
ಬದ ಬಹುಭೂಮಿಕಾಗಣದ ಕುಟ್ಟಿಮರಂಗದ ಚಿತ್ರಭಿತ್ತಿಭಾ ॥
ಗದ ನವರತ್ನಪುತ್ರಿಕೆಯ ಚಿನ್ನದ ಕಂಬದ ರಮ್ಯಜಾಳಕಾ ।
ರ್ಗದ ವಿಳಸತ್ಕವಾಟದ ವಿಚಿತ್ರವಿಭೂತಿಗೆ ಜನ್ಮಮಂದಿರಂ ॥ ೯೩ ॥

ಕಂ|| ಲಲನೆಯರ ಬಳ್ಳಿವಾಡದ ।
ನೆಲೆವಾಡದ ಕನ್ನೆವಾಡದೊದವಿದ ಬಳಸಿಂ ॥
ನೆಲಸಿ ಕರುವಾಡ ಮಿಱುಿಪುದು ।
ಕುಲಗಿರಿಗಳ್ ಬಳಸಿ ನಿಂದ ಮಂದರಗಿರಿಯಂ ॥ ೯೪ ॥

ಚಂ|| ಸೊಗಯಿಪ ನಾಟ್ಯಶಾಲೆಗೆ ವಿರಾಜಿಪ ಮಜ್ಜನಶಾಲೆಗೊಳ್ಪಿನಿಂ ।
ಸೊಗಯಿಪ ಮಂತ್ರಶಾಲೆಗೆಸೆವೋಲಗಶಾಲೆಗೆ ರಂಜಿಪಾನೆಶಾ ॥
ಲೆಗೆ ಮಿಸುವಸ್ತ್ರಶಾಲೆಗಮುದೂರ್ಪ್ಪುವ ಜೇವಣಶಾಲೆಗುನ್ಮಣಿ ।
ಸ್ಥಗಿತತಟಾಂಶುವಿಂದಮುದು ಮಾಳ್ಪುದಕೃತ್ಯವಿಚಿತ್ರಶೋಭೆಯಂ ॥ ೯೫ ॥

ಮ||ಸ್ರ|| ಅದಱೊಳ್ ಸಾಮ್ರಾಜ್ಯಲಕ್ಷ್ಮೀವಿಳಸಿತವಿಪುಳೋರಸ್ಥಳಂ ವೀರಲಕ್ಷ್ಮೀ ।
ಸದನಪ್ರೋಚ್ಚಂಡದೋರ್ದಂಡನ ನವುಳಿನಸತ್ಕೀರ್ತಿ ಲಕ್ಷ್ಮೀವಿಭಾಸ್ವ ॥
ದ್ವದನಂ ಸತ್ಕೀರ್ತಿಲಕ್ಷ್ಮೀಪರಿಚಿತ ನಿಖಿಲಾಶಾಮುಖಂ ದಾನಲಕ್ಷ್ಮೀ ।
ಮುದಿತಾರ್ಥವ್ರಾತ ನಿಪ್ಪಂ ನೃಪಕುಳತಿಲಕಂ ಪದ್ಮ ನುತ್ಸಾಹಸದ್ಮಂ ॥ ೯೬ ॥

ಚಂ|| ಅತನುಸಮರ್ಥತಾಪವೊಡಗೂಡಿದ ಕೂಡಿದ ಪೆಂಡಿರೊಳ್ ಕುಳ ।
ಕ್ಷಿತಿಸಹವರ್ತನಂ ಪದನತಾನತಭೂಪರೊಳುದ್ಧದಾನಸಂ ॥
ಗತಿ ಬಹುಶಿಷ್ಯದುಷ್ಟರೊಳೊಡಂಬಡುತಿರ್ದ ನಿದೇನೊ ಚಿತ್ರಮಾ ।
ಕ್ಷಿತಿಪಚರಿತ್ರಮೆನ್ನದವರಾರ್ ಗಳ ನಾಟ್ಟಿಭುವಂಶಮೇರುವಂ ॥ ೯೭ ॥

ಗದ್ಯ

ಇದು ಸಮಸ್ತಭುವನಜನಸಂಸ್ತುತಜಿನಾಗಮಕುಮುದ್ವತೀ
ಚಾರುಚಂದ್ರಾಯಮಾಣಮಾನಿತಶ್ರೀ ಮದುಭಯಕವಿ ಕಮಳಗರ್ಭ
ಮುನಿಚಂದ್ರಪಂಡಿತದೇವಸುವ್ಯಕ್ತಸೂಕ್ತಿಚಂದ್ರಿಕಾಪಾನಪರಿಪುಷ್ಟಮಾನಸಮರಾಳ

**ಗುಣವರ್ಮನಿರ್ಮಿತಮಪ್ಪ**

**ಪುಷ್ಪದಂತ ಪುರಾಣದೊಳ್**

**ನಗರ ಸಂಪದ್ವರ್ಣನಂ**

ನಾಮ

**ದ್ವಿತೀಯಾ ಶ್ವಾಸಂ**

# ಪುಷ್ಪದಂತ ಪುರಾಣಂ

## ತೃತೀಯಾಶ್ವಾಸಂ

ಕಂ॥ ಶ್ರೀಕಾಂತೆ ತನ್ನುರಃಪ ।
ದ್ಮಾಕರದೊಳ್ ಹಂಸಿಯಂತೆ ನೆಲಸಿರೆ ಪುಣ್ಯಾ ॥
ಶ್ರೀಕಾಂತ ನೆಸೆದನಖಿಳಕ ।
ಳಾಕಾಂತಂ ಪ್ರಭುಗುಣಾಬ್ಜವನಕಳಹಂಸಂ ॥ ೧ ॥

ಧರೆಯುಂ ಸ್ಥಿರೆ ಯೆನಿಸಿದನಿಂ ।
ದಿರೆಯುಂ ಪದ್ಮಾಲಯಾಖ್ಯೆ ಯೆಂದೆನಿಸಿದನಾ ॥
ಸರಸತಿಯುಂ ಚತುರಾನನ ।
ಪರಿಚಿತೆ ಯೆನಿಸಿದನದೇಂ ಸಮರ್ಥನೊ ಪದ್ಮಂ ॥ ೨ ॥

ಚಂ॥ ಪರಿವೃತರಾಜಹಂಸಕೃತಸೇವೆಯುಮುದ್ಗತಮಾದ ಸದ್ಗುಣೋ ।
ತ್ಕರಮು, ಮನೂನಲಕ್ಷ್ಮಿ ನೆಲೆಗೊಂಡಿರವುಂ ದೊರೆವೆತ್ತು ತನ್ನೊಳೊಂ ॥
ದಿರೆ ಜಡಸಂಗಮುಂ ಪುದಿದ ಕಂಟಕಮುಂ ರಜಮುಣ್ಮಿ ತೋರ್ಪುದುಂ ।
ಪರಿಕಿಪೊಡಿಲ್ಲೆನಿಪ್ಪಿಸಕಮೇಂ ದೊರೆ[1]ಯೆಂದೆನಿಸಿತ್ತೊ ಪದ್ಮನಾ ॥ ೩ ॥

ತೆಗೆದತಿನಿಷ್ಠುರಂ [2]ತಳೆಯಲಾಕಮಠಂ ವಿಷವಕ್ತ್ರನಾಗಿ ನಾ ।
ಲಗೆಯೆರಡಾದ ವಾಸುಗಿ ಕಠಂ ತಲೆವಾಗಿಯುಮಾವಗಂ ಮದಂ॥
ಜಗುಳಿದಿಭಂಗಳಾಂತ ಪೊರೆ ನಿಲ್ಲಳೆ ವಕ್ಷದ ಲಕ್ಷ್ಮಿ ಕೂರ್ತು ರ್ಪ ।
ತ್ತುಗೆಗೊಳೆ ತಳ್ತು ತೋಳೊಳೆಸದಳ್ ಧರಣೀವಧು ಪದ್ಮಭೂಪನಾ ॥ ೪ ॥

ಕಂ॥ ಸ್ವವಶಮನಿರದಿಂದ್ರಿಯವ ।
ರ್ಗವನೆಡಱುವರಾತಿವರ್ಗಮುಮನೆಯ್ದಿಸಿ ತ ॥
ದ್ವಿವಿಧವಿಷಯೋಪಭೋಗಮ ।
ನವಿರುದ್ಧಕ್ರಮದೆ ಸಲಿಸಿದಂ ನೃಪನುಚಿತಂ ॥ ೫ ॥

ಸತ್ವಂ ಸಾತ್ವಿಕಗುಣಕೆ ಮ ।
ಹಾತ್ಯಾಗಂ ರಾಜಸಕ್ಕೆ ವಿಕ್ರಮ ಮಧಿಕೋ ॥
ದ್ಧತ್ಯಂ ತಮಕ್ಕೆ ನೆಲೆಯಾ ।
ಯ್ತತ್ಯಂತಂ ನೃಪನಿದೇಂ ತ್ರಿಮೂರ್ತ್ಯಾತ್ಮಕನೋ ॥ ೬ ॥

---

[1] ಯಿಲ್ಲೆನಿಸಿತ್ತೊ. [2] ತಲೆಯನಾ.

ಕಂ॥ ನಯಮೊದಱಿ ನೆಗೆದಪನಪ ।
ಜಯಮಂ ನೃಪತಿಲಕನಾಱುಮೊಳ್ವಗೆಗಳ್ಗ ॥
ರಯೆ ಗೆಲ್ಲನೆ ನಯಶೌರ್ಯ ।
ದ್ವಯದಿಂ ಪೊಱುವಗೆಯ ರಾಜಕದ್ವಾದಶಮಂ ॥ ೭ ॥

ರಿಪುರಾಜಮಂಡಳಂ ಕುಂ ।
ದಿ ಪದ್ಮತೇಜದಿನದೊರ್ಮೆಯುಂ ಪೆರ್ಚದು ಭಾ ॥
ವಿಪೊಡೆಯ್ದಿ ಮಿತ್ರಮಂಡಳ ।
ಮುಪಚಯಮಂ ತಾಳ್ವುದಂತದುಚಿತಂ ಚಿತ್ರಂ ॥ ೮ ॥

ವಸುವಂ ಸನ್ಮಾರ್ಗದೊಳಾ ।
ರ್ಜಿಸುವಂ ವರ್ಧಿಸುವನೆಯ್ದೆ ರಕ್ಷಿಸದೀವಂ ॥
ನಿಸದಂ ವಿಬುಧರ್ಗಿದು ಭಾ ।
ವಿಸೆ ಚಿತ್ರಂ ರಾಜವೃತ್ತಮಾಯ್ತನ್ಯೂನಂ ॥ ೯ ॥

ಪ್ರಜೆಗಳದೃಷ್ಟೋಪಾದಾ ।
ನಜದುಃಖಪ್ರಾಪ್ತಿಗಾವಗಂ ಪ್ರತಿಕೃತಿಯಂ ॥
ಸೃಜಿಯಿಸುವ ನೃಪಂ ಸ್ವನಿಮಿ ।
ತ್ತಜದುಃಖಮನೆಂತುಮೆಂದುಮೇಂ ಮಾಡುಗುಮೇ ॥ ೧೦ ॥

ಗುಣಮೇಱಿದ ಧರ್ಮಂ ಮಾ ।
ರ್ಗಣತತಿಯಂ ಲಕ್ಷ್ಯಸಿದ್ಧಿಯೊಳ್ ಕೂಡಿ ನೃಪಾ ॥
ಗ್ರಣಿಯನಿಹಸೌಖ್ಯದಿಂದಮೆ ।
ತಣಿಪುದದೆ ಪರಮಸುಖೈಕಕಾರಣಮಲ್ತೇ ॥ ೧೧ ॥

ಧರೆಯೊಳಗುಳ್ಳಖಿಲಾರ್ಥಿಗ ।
ಳೆರೆದರ್ಥಮನೇನನಿತ್ತೊಡಂ ತವೆಯದ ಮೆ ॥
ಯ್ಸಿರಿಯುಂ ಸಿರಿಯುಂ ಪದ್ಮಂ ।
ಗೆರವೇ ನೃಪನಿಧಿ ಯೆನಿಪ್ಪ ಪೆಸರನ್ವರ್ಥಂ ॥ ೧೨ ॥

ಚಂ॥ ವಿತರಣಲಕ್ಷ್ಮಿಗಿತ್ತು ಬೆರಲಂ ಜಯಲಕ್ಷ್ಮಿಗೆ ಮುಯ್ವನಿತ್ತು ಸಂ ।
ಗತಮೆನೆ ಲಕ್ಷ್ಮಿಗಿತ್ತುರಮ ನಾನನಮಂ ವರವಾಣಿಗಿತ್ತು ಕೂ ॥
ರ್ಪತಿಶಯಮಾಗೆ ಮಾಡಿ ಕಡುಗೂರ್ತ ಯಶೋವಧುಗೇಕದೇಶಸಂ ।
ಸ್ಥಿತಿಯುಮನಿತ್ತನಿಲ್ಲ ನೃಪನೊಲ್ಪ ಬಲಾವಳಿಗಾಸೆಮುಟ್ಟದೇ ॥ ೧೩ ॥

ಮ॥ಸ್ರ॥ ಜಗಮೆಲ್ಲಂ ಗಂಗೆಯಂ ಮಿಂದುದೊ ದುಗುಲದೆ ಮೇಲ್ಕೊಂಡುದೋ ಕೂಡೆ ಮೆಯ್ಗ ।
ಣ್ಪುಗಳಂ ಶ್ರೀಖಂಡಕರ್ಪೂರದೆ ರಚಿಸಿತೊ ಮುಕ್ತಾಳಿಯಂ ತೊಟ್ಟುದೋ ಮ ॥
ಲ್ಲಿಗೆಯಂ ಸೂಡಿತ್ತೊ ಪೀಯೂಷದೆ ತಣಿದುದೊ ಬೆಳ್ದಿಂಗಳೊಳ್ ಸಂದುದೋ ಸಂ ।
ದೆಗಮೇನೆಂಬಂತದೇಂ ಪರ್ವಿದುದೊ ನೃಪನತಿಸ್ಫೂರ್ತಿಕೀರ್ತಿಪ್ರತಾನಂ ॥ ೧೪ ॥

ಮ॥ ನಿಡುದೋಳುರ್ವಿದ ಮುಯ್ಯು ಕೊರ್ವಿದ ಪೆಗಲ್ ತಾಮ್ರಾಧರಂ ನಾಡೆ ಕೆಂ ।
ಪೆಡೆಗೊಂಡಾಯತನೇತ್ರ ವೊಡ್ಡಿದ ನೊಸಲ್ ವಿಸ್ತೀರ್ಣವಕ್ಷಸ್ಸ್ಥಲಂ ॥
ಪೊಡೆವುತ್ತುಂಗಕಟೀತಟಂ ಕಡುಪುವೆತ್ತೂರುದ್ವಯಂ ಕೂರ್ಮೆಯಂ ।
ಪಡೆಗುಂ ಲಕ್ಷ್ಮಿಯೊಳಿನ್ನದಾರ್ ನೃಪನ ರೂಪಿಂ ಸೋಲದಬ್ಜಾಕ್ಷಿಯರ್ ॥ ೧೫ ॥

ಕಂ॥ ಎಡೆಗೊಂಡಿರೆ ತನ್ನಯ ತೋ ।
ಳೆಡೆಯಂ ಜಯಲಕ್ಷ್ಮಿ ಮೊಗದ ಪೊಗರಿಂದತಿನೀ ॥
ಳ್ದೊಡನೊಡನೆ ನೃಪನ ಜಡಿಪದೆ ।
ನಡುಗುವಳಸಿಕಾಂತೆ ಕೂರ್ಪಿದೇಂ ಕೈವಸಮೋ ॥ ೧೬ ॥

ಚಂ॥ ಹರಿ ಮದಸಿಂಧುರಂಗಳೆ ಜಯಕ್ಕೆ ನೆರಂ ಮೃಗಯೂಥಮೆಂದವಂ ।
ಪೊರೆವುದೆ ಚಂದ್ರನಂಧತಮಮಂ ಕಿಡಿಸಲ್ ನೆರಮೆಂದು ತಾರಕೋ ॥
ತ್ಕರಮನದೆಂದು ಮುಜ್ಜಳಿಪನೇ ರಿಪುಸಂತತಿಯಂ ಗೆಲಲ್ ನೃಪಂ ।
ಪೊರೆವನೆ ಚಾತುರಂಗಬಲಮಂ ಪುಸಿ ಪೆರ್ಮೆಗೆ ಕಾಣ ನಿಶ್ಚಯಂ ॥ ೧೭ ॥

ಮ॥ ಕದನಕ್ಷೇತ್ರದೊಳಾಂತ ಶತ್ರು ಪಿಡಿಪಟ್ಟಂ ಕೂಡೆ ಕಣ್ಗೆಟ್ಟ ನೋ ।
ಡಿದ ನೞ್ಕಾಡಿದ ನೆಂಬ ಮಾತವನ ವಂಶಕ್ಕೆಯ್ದುಗುಂ ತಳ್ತು ಕಾ ॥
ದಿದ ನಾದಂ ಸರಿವೋದನೆಂಬ ನುಡಿ ತಾನಿಲ್ಲೆಂದೊಡೆಲ್ಲಿತ್ತೊ ಗೆ ।
ಲ್ಲದ ಮಾತಿಂತುಟು ಪದ್ಮರಾಜನರಿದುಷ್ಪ್ರಾಪಪ್ರತಾಪೋದಯಂ ॥ ೧೮ ॥

ಉ॥ ಆತನ ದಿಗ್ಜಯೋದ್ಯಮಮನಾಂ ಮಿಗೆ ಪೇೞಿದೊಡೇನೊ ಶತ್ರುಸಂ ।
ಘಾತಮಿದಿರ್ಚಿ ದೀಪ್ತಿಗಿದಿರಾದ ಪತಂಗದ ಮಾಳೆಯಾದುದುಂ ॥
ಭೀತನೃಪಾಲರಿತ್ತೆರೆದುದುಂ ಮಿಗೆ ಬಾೞ್ವುದು ಮುಂತೆ ಕೈತವೋ ।
ಪೇತರಡರ್ತು ಬೆರ್ಚಿ ಬೆಸಕೆಯ್ದು ಬೞಲ್ದುದು ಮೆಯ್ದೆ ಪೇೞ್ವೆ ॥ ೧೯ ॥

ಉ॥ ಕಿನ್ನರಗಾಣರಾ ನೃಪನ ಗೀತಮನೊಪ್ಪಿರೆ ಪಾಡುವಾಗಳುಂ ।
[1]ತನ್ನ ಸುಖಾಶ್ರುವಿಂದೆಸೆಯೆ ನೇತ್ರಸಹಸ್ರ ಪೊಱಲ್ದು ಕೇಳುತಾಂ ॥
ಪನ್ನಗರಾಜನಾಗೆ ಸಫಳಂ ಗಳೆ ಜನ್ಮಮೆನುತ್ತೆ ವಾಸವಂ ।
ಮನ್ನಿಸಿ ಮಾತನಾಡಿ ಪರಿತೋಷಿಸುವಂ ದಿವಿಜಪ್ರಧಾನರಂ ॥ ೨೦ ॥

---

1 ತೆನ್ನ.

ಉ|| ಸಮದಾರಾತಿಗಳಂ ಪಡಲ್ವಡಿಸಿ ಭೀತವ್ರಾತಮಂ ಕಾಯ್ದು ಕಾ ।
ರ್ಯಮನಾಳೋಚಿಸಿ ಮಾಡಿ ಮಾಡಿದನಿತುಂ ಧರ್ಮಾರ್ಥಕಾಮಂಗಳಂ ॥
ಕ್ರಮದಿಂ ಪೆರ್ಚಿಸಿ ಪೆತ್ತು ನಿತ್ಯಸುಖಮಂ ಸತ್ಕೀರ್ತಿಯಂ ತಾಳ್ದಿ ರಾ ।
ಜ್ಯಮನಾರಾಳ್ದರೊ ಪದ್ಮರಾಜನವೊಲುರ್ವೀಭಾಗದೊಳ್ ಭೂಭುಜರ್　　॥ ೨೧ ॥

ವ|| ಮತ್ತಮಾನರೇಂದ್ರನನೂನದಾನವಿಧಾನನಾಗಿಯು ಮುದಿತಮದೋದ್ರೇಕನಲ್ಲದ ರಾಜದಿಕ್ಕುಂಜರನುಂ, ಅಹೀನವೃತ್ತಿಪ್ರವರ್ತಕನಾಗಿಯುಂ ವಿನತಾನಂದನವಿದ್ವೇಷಿಯಲ್ಲದ ಭೋಗೀಶ್ವರನುಂ, ಜಗತ್ಪ್ರೀತಿಕರವರಿಗ್ರಹೀತನಾಗಿಯುಂ ದೋಷಾನುವರ್ತನೆಗೊಳಗಾಗದ ಕಳಂಕರಾಜನುಂ, ಅತುಳಪ್ರತಾಪತೇಜಃಸಮಾಜನಾಗಿಯುಃ ತಮಃಪ್ರಮೋಷಿತನಲ್ಲದ ಜಗನ್ಮಿತ್ರನುಂ, ಅಗಣ್ಯಲಾವಣ್ಯ ಪೂರ್ಣರೂಪನಾಗಿಯುಂ ನಿಮಗ್ನಕುಲಗೋತ್ರನಲ್ಲದ ಮಹಿಜೀವನಾಧಾರಭೂತನುಂ, ನಿರಂತರಲಕ್ಷ್ಮೀನಿವಾಸನಾಗಿಯುಂ ವಿರಥವೃತ್ತಿಯೊಳ್ ವರ್ತಿಸದ ಪುರುಷೋತ್ತಮನುಂ, ಅಧಿಗತಸ್ವಾಮಿಸಂಪತ್ಪ್ರಮೋದಿತನಾಗಿಯುಂ ದುರ್ಗಾಶ್ರಯವಿಗ್ರಹನಲ್ಲದ ವಿಭೂತಿಭೂಷಿತನುಂ, ಸರಸಸರಸ್ವತೀಸುಂದರಮುಖಾರವಿಂದನಾಗಿಯುಂ ರಜೋರಂಜಿತಮೂರ್ತಿಯಲ್ಲದಾಲೋಕೇಶನುಂ, ವಿಪಕ್ಷಭೂಭೃತ್ಪಕ್ಷವಿಚ್ಛೇದಿಯಾಗಿಯುಂ ತ್ರಿದಿವಪರಿಪ್ರಾಪ್ತಪರಮೈಶ್ವರ್ಯನಲ್ಲದ ವಿಬುಧಪತಿಯುಂ, ಸಮವರ್ತಿಯಾಗಿಯುಂ ಕೃತಾಂತನಲ್ಲದ ಧರ್ಮರಾಜನುಂ, ಅನೇಕರತ್ನಾಕರಾಧಿಪತಿಯಾಗಿಯುಂ ಜಡಾಶ್ರಯನಲ್ಲದ ಪ್ರಚೇತಸನುಂ, ಶಿವಾನುಬಂಧಸಯುಕ್ತನಾಗಿಯುಂ ದಶಾನನಾಸ್ತಂಗತಪ್ರಾಭವನಲ್ಲದ ಪುಣ್ಯಜನೇಶ್ವರನು ಮೆನಿಸಿ ದೇವತಾಸ್ವರೂಪನಾದನಾ ಮಹೀಕಾಂತಂಗೆ

ಕಂ|| ಶ್ರೀಧರನೆನೆ ಸಕಳಧರಿ ।
ತ್ರೀಧರನೆನೆ ಸಂದದೊಂದು ಸೊಬಗಿಂ ವನಮಾ ॥
ಲಾಧರನಾದನೆನಲ್ ಮಧು ।
ರಾಧರೆ ವನಮಾಲೆ ವಲ್ಲಭಾಗ್ರಣಿಯಾದಳ್　　॥ ೨೨ ॥

ಮ|ಸ್ರ|| ಯುವತೀನಿರ್ಮಾಣನಂ ಕರ್ಮದ ವಿಧಿಕೃತಮೇಂ ಬಾಡಿತ್ತಿ ಲೋಕತ್ರಯಿಾಜಿ ।
ಷ್ಣುವನೆನ್ನಂ ಭೂಪನಂದಂ ತೃಣ[ಮೆನೆ]ಲಘುವಂ ಮಾಡಿತೆಂದೇಮದಿಂ ಕಂ ॥
ತುಮೆ ತಾಂ ಪದ್ಮೋದ್ಭವತ್ವಂಬಡೆದುಳಿದು ತಪಸ್ತಪ್ತನಾಕಾಂತೆಯಂ ಸಾ ।
ರವಿಲಾಸಾಕ್ರಾಂತೆಯಂ ನಿರ್ಮಿಸಿ ಜಯಿಸಿದನಿಂ ಬಣ್ಣಿಸಲ್ ಬಲ್ಲನಾವಂ　　॥ ೨೩ ॥

ಕಂ|| ಶೃಂಗಾರಾಬ್ಧಿಯೊಳೊಗೆತಂ ।
ದಂಗಜಜಯಲಕ್ಷ್ಮಿ ಯೆನೆ ಕಳಾನಿಧಿಸಹಿತಂ ॥
ಸಂಗಳಿಸಿ ಚೆಲ್ವನಾಕೆ ಬೆ ।
ಡಂಗಿಂ ಪದ್ಮಾಂತರಂಗದೊಳ್ ರಂಜಿಸಿದಳ್　　॥ ೨೪ ॥

ಮ॥ಸ್ರ॥ ರತಿಯಿಂ ಸೌಂದರ್ಯಸೌಭಾಗ್ಯಮನೊ ಸಗೆ[ಯ]ಪೌಲೋಮಿಯಿಂ ಭಾಗ್ಯಮಂ ಭಾ ।
ರತಿಯಿಂ ನಾನಾಕಳಾಕೌಶಲಮನತಿಶಯಂಬೆತ್ತಿರಲ್ ಮೈಮೆಯಂ ಪಾ ॥
ರ್ವತಿಯಿಂದೀಟಿಕೊಂಡು ಮೂಲೋಕದೊಳನುಪಮ ಮಾಕಾಂತೆಯೆಂ(ದಂ)ತಪೂರ್ವಾ ।
ಕೃತಿಯಂ ಕೆಯ್ಗೆಯ್ದು ಕಣ್ಣಿಟ್ಟವೊಲರರೆ ಮಹಾದೇವಿ ಕಣ್ಗೆಡ್ಡಮಾದಳ್ ॥ ೨೫ ॥

ಕಂ॥ ಅಡಿಗಿಕ್ಕಿ ಮೆಟ್ಟಿ ತಪ್ಪಿ ।
ಟ್ಟ(ಡೆ)ವಡೆದನುರಾಗ ಮೆಲ್ಲಮಂ ಕಾಂತೆಯ ಮೆ ॥
ಲ್ಲಡಿಯಡಿ ಯೆನಿಸಿರ್ದನಿತಱಿಂ ।
ಳೆಡೆಗೊಂಡುದೆ ಗೆಲ್ಲವರುಣಪಲ್ಲವತತಿಯೊಳ್ ॥ ೨೬ ॥

ಮೃಗನೇತ್ರೆಯ ತೊಳಗುವ ಕಾ ।
ಲುಗುರಿಂ ಕಂಗೊಳಿಪ ಕೋಮಲಾಂಗುಳಿಗಳದೇಂ ॥
ಬಗೆಯಂ ಬೆದಱಿಪುವೊ ಪುಣಂ ।
ಬುಗಳೆಂಬಂತಿಂಬುವೆತ್ತು ವಿಷಮಾಯುಧನಾ ॥ ೨೭ ॥

ಒದವಿದ ಲಾವಣ್ಯರಸಂ ।
ಪುದಿದೆತ್ತಂ ತುಳ್ಕಿ ತೋರ್ಪ ಕುಪ್ಪಿಗೆಯಿವೆ ದಲ್ ॥
ಮದನನ ಮೋಹನಭಂಡಾ ।
ರದ ಬಾಟಿಕೊಡಲೆನಿಸಿ ಸತಿಯ ಪೊಱಅಡಿಯೆಸೆಗುಂ ॥ ೨೮ ॥

ಪಡೆದುವೆ ನಮ್ಮುನ್ನತಿಯಂ ।
ಮಡದಿಯ ಪಾದಾಶ್ರಿತಂಗಳಾಗಿಯು ಮಿಂತೀ ॥
ಮಡಮುಂ ಬೆರಲ್ಗಳುಂ ಕಿ ।
ತ್ತಡಿಯು ಮೆನುತ್ತುರ್ವಿದಂತೆ ಮೇಂಗಾಲೆಸೆಗುಂ ॥ ೨೯ ॥

ಕಳನೂಪುರಕೀಲಿತಮಣಿ ।
ಗಳಿನೊಗೆದುನ್ಮಯೂಖ ಲೇಖೆ[ಯಿಂದವದೇಂ] ಕ ॥
ಣ್ಗೊಳಿಪುದೊ ಬರ್ಚಸೆ ರತಿಯೋ ।
ಕುಳಿಯಾಡುವ ಕನಕಶೃಂಗಮಂ ಕಿಱುದೊಡೆಗಳ್ ॥ ೩೦ ॥

ಒಳಕೆಯ್ದುವು ಗಡ ರಂಭಾ ।
ವಿಳಸನಮಂ ಸತಿಯ ಬಟ್ಟನುಣ್ದೊಡೆಗಳದಿಂ ॥
(ನ್ನೆ)ಳಕೊಳಿಸುವುದರಿದೇ ಕ ।
ಣ್ಗೊಳೆ ನಿಟ್ಟಿಪ ಸತಿಯ ದಿಟ್ಟಗೆಮೆಯಿಕ್ಕದುದಂ ॥ ೩೧ ॥

ಕಂ॥ ಇನಿಯನ ಮನಮಂ ಪೊಱಮಾ ।
ಱನೆಂದು ಮೆಯ್ದಿಸದ ಸತಿಯ ಪೊಱವಾಱಂ ಕಾ ॥
ಮನ ಕೇಳೀನಗವೆಂದೆಂ ।
ಬನ ನುಡಿ ಯೇನುಚಿತಮಾಯ್ತೊ ಮಣಿಮೇಖಲೆಯಿಂ ॥ ೩೦ ॥

ಇಲ್ಲದೊಡಗ್ರವಿಭಾಗ ।
ಕ್ಕೆಲ್ಲಿಯದಾಧಾರವದಱಿನುಂಟಾದೊಡೆ ತೋ ॥
ಱಲ್ಲಿರ್ದ್ದದೆನಿಪ್ಪೂಹೆಯ ।
ಸೊಲ್ಲಿಂಗೆಡೆಯಾದುದಸಿಯನಡು ಕಾಮಿನಿಯಾ ॥ ೩೩ ॥

ಬಳವಳಿಯಿಂದಿವು ಸೊಬಗಿನ ।
ಬಳವಳಿಯಂದೆನಿಸಿ ಮಿಸುವ ಲಾವಣ್ಯರಸೋ ॥
ತ್ಕಳಿಕೆಗಳೆ ತಪ್ಪದೆನಲು ।
ತ್ಕಳಿಕೆಯನಿನಿಯಂಗೆ ಮಾಱ್ಪವಾಕೆಯ ವಳಿಗಳ್ ॥ ೩೪ ॥

ಇನಿಯನ ಮನೋಮದೇಭವ ।
ನೆನಸುಂ ಕೆಡಪಲ್ಕೆವೇಡಿ ಕಾಮಕಿರಾತಂ ॥
ಮುನಿಸಿಂಮಾಡಿದ ಕುೞಿ ಯಂ ।
ದೆನೆ ವನಿತೆಯ ನಿಮ್ನನಾಭಿ ಯೇನೊಪ್ಪಿದುದೋ ॥ ೩೫ ॥

ಮದನನ ಕಟ್ಟಿದ ಕಿಱುಗೇ ।
ಣಿದು ಸಂದೆಯಮಾವುದೆನಿಸಿ ನುಣ್ಗಪ್ಪಿಂದು ॥
ಣ್ಮಿದ ಬಾಸೆಯ ದೇಸಿಗೆ ವ ।
ರ್ಪುದೆ ಮಿಕ್ಕುಪಮಾನವರ್ಗ ಮಾಕಾಮಿನಿಯಾ ॥ ೩೬ ॥

ಒತ್ತಿದುವಿರ್ಕ್ಕೆಲನ ಮು[ದು ।
ದ್ವೃತ್ತ]ತೆಯಿಂದೆಯ್ದೆ ತಮ್ಮೊಳಿದಿರೆಱ್ಪ ವೊಗ ॥
ಕ್ಕೆತ್ತಂ ಪಾಯ್ದುವೀಯು ।
ದ್ವೃತ್ತತೆ ಕಠಿಣತೆ ಕುಚಕ್ಕೆ ಸಹಜಂ ಸತಿಯಾ ॥ ೩೭ ॥

ಮನಸಿಜಸಿದ್ಧನ ವಿವಿಧಾ ।
ರ್ಚನೆಗೆಯ್ದಿರಿಸಿಟ್ಟ ಯಂತ್ರಮೆನೆ ಮಾಱ್ಪುದು ಕಂ ॥
ಪಿನ ಸೊಂಪಿನ ಪೊಗರಿಂದಂ ।
ವನಿತೆಯ ಕಕ್ಷಪುಟ ಮಾಕ್ಷಣಾಕರ್ಷಣಮಂ ॥ ೩೮ ॥

ಕಂ॥ ಇದೆ ಪೋ ಕಂದರ್ಪನ ಬಾ ।
ಱಿಕ್ಕೊದಲೆಂದು ವಿದಗ್ಧರಾಡೆ ತೋಳ್ಕೊದಲಂತ ॥
ಪ್ಪುದು ಬಾಳೆಂದರ್ ಚದುರರ್ ।
ಸುದತಿಯ ತೋಳ್ಗಳನದಾವಬಾಱಿಂದೆಂಬೆಂ ॥ ೩೯ ॥

ಬಾಡುವ ಕೆಂದಳಿರಂ ನೀ ।
ರೋಡುವ ತಾವರೆಯನೇಕೆ ವಡಿಯಿಡುವರವೇಂ ॥
ತೋಡೆಪ್ಪುವೆ ಕರತಳದೊಳ ।
ಗುಣ್ಮಿದ ಸೌಭಾಗ್ಯರೇಖೆಯೊಂದಱಿಳವಳಾ ॥ ೪೦ ॥

ಸುದತಿಯ ಬೆರಲಿಂ ಮೂವಡಿ ।
ಸಿದುವು ಸರಲ್ ಗೆಲ್ದನಾಗಳೊಂದೊಂದಱಿ ನಿಂ ॥
ಪದಿನಾಲ್ಕುಜಗವ ನಂಗಜ ।
ನದೊಂದೆ ಕಿಱುಗುಣಿಕೆಯಿಂದೆ ಗೆಲ್ಲನೆ ವತಿಯಂ ॥ ೪೧ ॥

ಲಲನೆಯ ಕರಜಂಗಳ್ ಕೆಂ ।
ಬೆಳಗಂ ದೆಸೆದೆಸೆಗೆ ವಸರಿಸುತ್ತೊಪ್ಪಿದುವು ॥
ಜ್ವಳಿಸುವ ತೇಜದ ಕೀರ್ತಿಯ ।
ಬೆಳಸಿನ ಬಿತ್ತುಗಳ ತೆಱದೆ ಕುಸುಮಾಯುಧನಾ ॥ ೪೨ ॥

ಸುರನರಪನ್ನಗವನಿತೋ ।
ತ್ಕರಸೌಭಾಗ್ಯಮನೆ ಗೆಲ್ದ ಮೂರೇಖೆಯ ಸುಂ ॥
ದರಿಯೊಪ್ಪುವ ಕೊರಲೇಂ ಬಿ ।
ತ್ತರಿಸಿದುದೋ ಹಾರಲತೆಯ ಕಂದದ ಚೆಲ್ವಂ ॥ ೪೩ ॥

ಯುವತಿಯ ನಗೆಮೊಗಮಂ ಮಿ[1]ಗು ।
ಗುವೆ ಭಾವಿಸೆ ದರ್ಪಣೇಂದುಜಳಜಂಗಳ್ ಸೋ ॥
ಲವನಾಂತುವು ಗಡ ಮುನ್ನವ ।
ಱವಯುವವೊಂದೊಂದಱಿಂದೆನೆ ತವೊಂದೊಂದುಂ ॥ ೪೪ ॥

ರದನಂಗಳೋಳಿಯಿಂ ತೀ ।
ವಿದ ಪಳಿಕಂ ಪೋಲೆ ಸತಿಯ ಬಾಯ್ದೆಱಿ ಪೋಲ್ಗುಂ ॥
ಮದನಂ ತನ್ನಱಿಗೆ ಮಾ ।
ಡಿದ ಮಾಣಿಕವೆಸದ ಕಪ್ಪುರದ ಕರಡಿಗೆಯಂ ॥ ೪೫ ॥

---

[1] ಮಿಸುಗುವ.

ಕಂ॥ ವದನಂ ಗೆಲವಿಂ ವಿಧುಬಿಂ ।
ಬದ ಕಳೆಗಳನೊಳಗೆ ಪಾಯ್ಸಿಕೊಂಡುದೆನಲ್ ಕುಂ ॥
ದದ ಕಾಂತಿಯಿ ನಾಕಾಂತೆಯ ।
ರದನಾವಳಿ ಯೆಂ ಕರಂ ತಳತ್ತಳಿಸಿದುದೋ ॥ ೪೬ ॥

ಮನಸಿಜ ನರ್ಚಿಸಿ ಸಂಮೋ ।
ಹನದ ಮರ್ದಂ ಮಣಿಯ ಭರಣಿಯೊಳ್ ತೀವಿಯ ನ ॥
ಚ್ಚಿನ ನಿಧಿಯ ಮೊಗದೊಳಿರಿಸಿದ ।
ನೆನಲ್ಕೆ ಮಧುರಾಧರಂ ಮನೋಹರ ಮವಳಾ ॥ ೪೭ ॥

ಲಾವಣ್ಯಾಮೃತರಸದೊಳ್ ।
ತೀವಿದ ಪೊಸಪೊನ್ನ ಮಿಸುಪ ಶುಕ್ತಿಕೆಗಳೆನಲ್ ॥
ದೇವಿಯ ತಾಂಬೂಲಚ್ಛಾ ।
ಯಾವಿಷ್ಕೃತ ಮಾದ ತೆಳ್ಗದಂಪುಗ ಳೆಸೆಗುಂ ॥ ೪೮ ॥

ಅನುಪಮಸುಗಂಧಿ ವನಜಾ ।
ನನಮಂ ಪರಿಮುತ್ತುಗೊಳ್ವ ತುಂಬಿಯ ರಕ್ಷಾ ॥
ವಿನಿಯೋಗಕ್ಕಿಕ್ಕಿದ ಕಾಂ ।
ಚನಚಂಪಕ ಮಲ್ತೆ ಸತಿಯ ನಾಸಾಮುಕುಳಂ ॥ ೪೯ ॥

ಎಡಬಲನಲ್ಲದೆ ಭೇದಂ ।
ಬೆಡಂಗಿನಿಂ ಕೂರ್ಪಿನಿಂ ಬೆಳರ್ಪಿಂದಿಲ್ಲಾ ॥
ಗಡಮಾಕೆಯ ಕಣ್ಣೆಕೆಯೊ ।
ಗಡ ಕಿವಿವರ್ಚಿಪುರ್ವೆತ್ತರೊಂದೊಂದಿತ್ತಂ ॥ ೫೦ ॥

ಪೆಱಮೆಟ್ಟೆ ತುಱುಗಿ ಮಿಗೆ ತ ।
ಳ್ತಿಱಿದಪ್ಪುವೊಡನೊಡನೆ ತಮ್ಮೊಳೀಕಾಂತೆಯ ನು ॥
ಣ್ದಿಱುಗೆವೆಗ[ಣ್ಗ]ಳ್ಕೀಗಿನ ।
ಕೊಱತೆಗೆ ದಲ್ಪಾಱುಗಣ್ಣ ಬಱಿಗದು ಸಹಜಂ ॥ ೫೧ ॥

ಮೋಹನಲಕ್ಷಣರೇಖೆಗ ।
ಳೀಹರಿಣಾಕ್ಷಿಯ ಮುಖಾಮೃತಾಂಶುಗಿಮೆಂದೇ ॥
ನಾಹಾರವದಿಂ ಮನ್ಮಥ ।
ನೂಹಿಸಿ ನಲಿವನೊ ಸವಿಭ್ರಮಭ್ರೂಯುಗಮಂ ॥ ೫೨ ॥

ಕಂ॥ ಪರಿಪೂರ್ಣೇಂದುವ ಗೆಲವಿಂ ।
ದರಸ್ಮಿತಸ್ಮೇರವಕ್ತ್ರಶಶಿಯೊಳ್ ಮತ್ತೊಂ ॥
ದರರೆ ಕಲೆ ಯೆನಿಸಿತೆನೆ ಸುಂ ।
ದರ ಮಾಯ್ತನ್ವರ್ಥಮಾಗಿ ಪೆಱರಿನೊಸಲವಳಾ ॥ ೫೩ ॥

ಅವತಂಸಲಕ್ಷ್ಮಿಗಿಂತಿದೆ ।
ಸವತಿ ಯೆನಲ್ ಮೇಲೆ ಮಂದಪಾಂಗಶ್ರೀಯು ॥
ತ್ಸವಲೀಲಾಗ್ರಹ ಮೆಂಬೆಂ ।
ಕಿವಿಯಂ ಪೆಱತೇನನೆಂಬೆ ನಾಕೋಮಳೆಯಾ ॥ ೫೪ ॥

ಎಂತೋ ಕಾಂತೆಯ ವರಸೀ ।
ಮಂತಂ ಕೆಳೆಗೊಂಡು ಇಕ್ಕೆಲದ ಕುಟಿಲಾಂತಃ ॥
ಕುಂತಳಮಂ ಸ್ನಿಗ್ಧಮೃದು ।
ತ್ವಂ ತೋಱಲ್ ಪೊಱಗೆ ಋಜುಗಳೇನಂ ಬಲ್ಲರ್ ॥ ೫೫ ॥

ತಲೆವೊತ್ತು ತಾರಕಾವಳಿ ।
ತಲೆಗರೆದಿದೆ ರಾಹು ವದನಶಶಿಬಿಂಬದ ಪಿಂ ॥
ದಲೆಯೊಳೆನೆ ತೋರಮುತ್ತಿನ ।
ತಲೆಮುಡುಗೆಯಿ ನೆಸೆದುದಲರ ಸೋರ್ಮುಡಿ ಸತಿಯಾ ॥ ೫೬ ॥

ಮದನನ ದಿಗ್ವಿಜಯದೊಳಿಂ ।
ತಿದೆ ಬೆನ್ನಾಗಿರ್ದುದೆಂಬ ಚೆನ್ನಿಂ ದೆಸೆಗುಂ ॥
ಸುದತಿಯ ಸೊಬಗಿನ ಸರ್ವ ।
ಸ್ವದ ಭಾಗಂಗೊಂಡ ಪೂರ್ವಭಾಗಾಭೋಗಂ ॥ ೫೭ ॥

ಮ॥ ಮೃಗಭೂಕುಂಕುಮಚಂದನಾಗರುವಿಲೇಪಕ್ಕಂಗಸೌರಭ್ಯ ಮೊಂ ।
ದುಗೆಯಂ ಮಾಡಿಪ್ಪುದಪೂರ್ವಗಂಧಮ ನುದಂಚದ್ರತ್ನನಾನಾವಿಭೂ ॥
ಷೆಗಳಂ ದೇಹದ ಕಾಂತಿ ರಂಜಿಪುದಪೂರ್ವಚ್ಛಾಯೆಯಿಂ ಮಾಲ್ಯಲ ।
ಕ್ಷ್ಮಿಗೆ ಕೆಯ್ಗೆಯ್ದುದು ಕೇಶಸಂಚಯ ಮಪೂರ್ವಸ್ಮೇರ ಮಾಕಾಂತೆಯಾ ॥ ೫೮ ॥

ಕಂ॥ ವನಮಾಲೆ ವನಕ್ರೀಡೆಗೆ ।
ವನಮಾಲೆಯೆ ಪದ್ಮನೊಳ್ ಜಲಕ್ರೀಡೆಗೆ ತ ॥
ದ್ವನಮಾಲೆ ರತಿಕ್ರೀಡೆಗೆ ।
ಮನೋಜ್ಞ ಮನುಕೂಲ ಮುಚಿತ ಮೆನೆ ರಂಜಿಸಿದಳ್ ॥ ೫೯ ॥

ವ॥ ಮತ್ತ ಮಾಮದನಮೋಹನವಿದ್ಯಾಲಕ್ಷ್ಮಿ ಯಾಚತುಷ್ಷಷ್ಟಿವಿದ್ಯಾಚಾತುರ್ಯಚತುರಾನನ ಸಹಜಪ್ರಸನ್ನಸುಂದರದರವಿಕಸಿತಾನನಸರಸಿಹದೊಳ್ ನಲಿದು ನೆಲಸಿ ನೆಲೆಗೊಂಡ ಹಿತಮಿತಾನ್ವಿತೋದಾರಗಂಭೀರತಾಸಾರಸಾರಸ್ವತಲಕ್ಷ್ಮಿಯುಂ ತನ್ನ ನಿರತಿಶಯರೂಪಯೌವನವಿಳಾಸವಿಭ್ರಮಸೌಭಾಗ್ಯಭಾಗ್ಯಾದಿನಿಖಿಳಗುಣಗಣವರ್ಣನವ್ಯಾಪಾರದೊಳ್ ನಿತ್ಯನಿಯಮದಿಂ ನಿರವಿಸಿ ಸುಸ್ಥಮಿರಿಸಿಯುಂ, ಆಕಾಮಸಾಮ್ರಾಜ್ಯಲೀಲಾಲಕ್ಷ್ಮಿ ಯಾಪರಮಪುರುಷೋತ್ತಮಾವತಾರನ ವಿಶಾಲೋರಸ್ಥಳಪದ್ಮಪೀಠದೊಳವಿಚಳಸ್ಥಿತಿಲೀಲೆಯುಂತಳೆದ ಸಕಳಸುರಾಸುರಲೋಕವಿಸ್ಮಯಾವಹಾನೇಕವಿಪಕ್ಷಕ್ಷತ್ರಿಯಾವಹಪಾರಾವಾರಮಹಾಮಥನಪರಿಲಬ್ಧಮಹನೀಯಮಹಾಲಕ್ಷ್ಮಿಯುಂ ಸ್ವಕೀಯನಿತ್ಯನೈಮಿತ್ತಿಕದಾನಪೂಜಾತ್ಯಾಗಭೋಗೋಚಿತಪರಿಮಿತದ್ರವ್ಯದತ್ತಿಯೊಳೊಡಂಬಡಿಸಿ ಸಂಭಾವಿಸಿಯುಂ, ಆ ಸಂಕಲ್ಪಜನ್ಮನ ಮನೋರಥಜನ್ಮಭೂಮಿ ಯಾಮಹೇಶ್ವರಮಹಾವರಾಹೋತ್ಖಾತತೀಕ್ಷ್ಣಕೌಕ್ಷೇಯಕದಂಷ್ಟ್ರಾಸಮುದ್ಧರಣಪ್ರೀತಿಯಿಂ ಪ್ರಚಂಡದೋರ್ದಂಡಪರಿರಂಭಸಂಭವಸುಖಾನುಭವಲಂಪಟೆಯಾದಕ್ಷೂಣಕ್ಷೋಣಿಯುಂ ತನ್ನಾಣತಿಯೊಳ್ ತೊಡರ್ಚಿ ವಿನಯಮನೊಡರ್ಚಿಯುಂ, ಅಮನೋ[ಜ]ರಾಜವಿಜಯಲಕ್ಷ್ಮಿ ಯಾವಿಕ್ರಾಂತಕಂಠೀರವನ ಮೆಯ್ಯೊಳ್ ಸಕಲದಿಗ್ವಿಜಯಯಾತ್ರಾಸಮಯಸಮುಜ್ಜೃಂಭಿತಸಂಕ್ಷುಬ್ಧಸೈನ್ಯಕೋಳಾಹಳಾಭೀಳಭೇರೀಭಾಂಕಾರಕ್ಷ್ವೇಡಾಕ್ರೀಡಾತಿಚಕಿತನಿಶ್ಚಳಕರ್ಣತಾಳದಿಕ್ಕುಂಡಳಾಮಂಡಳೆಯೆನಿಸಿ ಮೆಯ್ವೆತ್ತ ವೀರಲಕ್ಷ್ಮಿಯ ನಸಿಧಾರಾಚರಣಪರಿಣತೆಯೊಳ್ ಪತ್ತಿಸಿಮದಂಬೆತ್ತುಂ, ಆಮದನಮಂಗಳೆಯಶೋಲಕ್ಷ್ಮಿ ಯಾರಾಜೇಂದ್ರಚಂದ್ರನ ವಂದಿಚಕೋರವೃಂದಾರಮಂದಾನಂದಕರಣವಿತರಣಕರಣಪ್ರಭೂತೆಯೆನಿಸಿ ನಿಖಿಳದಿಗ್ದಂತಿದಂತದಂಡಾಂದೋಳಡೋಳಾವಿನೋದವಿಶ್ರಾಂತವಿಹಾರ ಕೇಳಿಯೊಳ್ ಮನಂಗೊಂಡವಿಶದಯಶಶ್ಚಂದ್ರಿಕಾಲಕ್ಷ್ಮಿಯಾನಿಜಮನೋರಾಗಸುಧಾಸಾಗರಮಂ ನೆರೆ ಪೆರ್ಚಿಸುವಂತು ನಿರಂತರಂ ಸಂತಮಿರಿಸೆಯುಂ, ಇಂತು ನಿಸ್ಸಪತ್ನೀವೃತ್ತಿಯೊಳ್ ನೆಗೞ್ತೆವೆತ್ತುಂ ಸಪತ್ನೀಜನಾನುಕೂಲ್ಯದಿಂ ಬೇಱಿಱೊಂದು ಪೊಗೞ್ತೆವೆತ್ತಳಂತುಮಲ್ಲದೆಯುಂ.

ಚಂ॥ ಜಿತರತಿಕಾಮಿನೀಲಲಿತಲೀಲೆ ಮನೋಭವಮೋಹನಾಕ್ಷರಾಂ ।
ಚಿತನುತಭಾಲೆ ವಿಶ್ರುತಕಳಾಭವನರ್ತನಶಾಲೆ ಸಂತತಂ ॥
ಪತಿಚರಿತಾನುಕೂಲೆ ಘನರಾಗರಸಾರ್ಣವವೇಲೆ ಲೋಕಸಂ ।
ಸ್ತುತಿಯುತಪುಣ್ಯಶೀಲೆ ಗುಣಮಾಲೆ ಯೆನಲ್ ವನಮಾಲೆ ರಂಜಿಪಳ್ ॥ ೬೦ ॥

ಉ॥ ಆ ಸತಿಯೊಳ್ ಮಹೀರಮಣ ನುತ್ಕಟರಾಗದೆ ಭೋಗಗಂಧಸಂ ।
ವಾಸಿತ ನಾಗಿ ಧರ್ಮದೊಳ ಮರ್ಥದೊಳಂ ಬಗೆಯಂ ಕಟಿಲ್ಚದು ॥
ದ್ಭಾಸಿಸಿದಂ ಗಡಂತವ ನವಕ್ಕೆ ಫಲಂ ಸುಖ ಮೆಂದು ಬಲ್ಲವಂ ।
ಬೇಸಱಿನಾಳ್ವನೇ ಬೆಳೆವ ಬಿತ್ತಿನ ಸಂಕ್ರಮದೊಳ್ ಫಲೋತ್ಸುಕಂ ॥ ೬೧ ॥

ಕಂ॥ ಪಲಬರವರೋಧಕಾಂತೆಯ ।
ರೊಲವಿಂ ಪತ್ತಿರೆಯು ಮಾಕೆಯೊಳ್ ನೃಪ ನನಿಶಂ ॥
ನಲಿದೊಂದಿರ್ಪಂ ತಾರಾ ।
ವಳಿ ತಳ್ತಿರ ಲಿಂದು ಚಂದ್ರಿಕೆಯೊಳೊಂದುವವೋಲ್ ॥ ೬೨ ॥

ಚಂ॥ ಚತುರುಪಧಾವಿಶುದ್ಧ ನನವದ್ಯಚರಿತ್ರ ನನೂನವಂಶ ನ ।
ಸ್ವಿತಮಹಿಮಾವಭಾಸಿ ಸಕಳಕ್ಷಿತಿಭಾರಧುರೀಣ ನನ್ವಯಾ ॥
ಗತ ನೆನೆ ಸಂದ ವೈಶ್ರವಣಮಂತ್ರಿವರೇಣ್ಯನ ಮೇಲೆ ರಾಜ್ಯಸಂ ।
ಸ್ಥಿತಿಗೆಡೆಮಾಡಿ ತದ್ವನಿತೆಯೊಳ್ ನಲಿವಂ ನೃಪ ನೇಂ ವಿವೇಕಿಯೋ ॥ ೬೩ ॥

ವ॥ ಇಂತಿಷ್ಟವಿಷಯೋಪಭೋಗಂಗಳಿಂ ದನೇಕಸಂವತ್ಸರಂಗ ಳೇಕೈಕಕ್ಷಣಂಗಳಂತೆ ವಿದಿತ ಸ್ವರೂಪಂಗಳಾಗಿ ಸಲುತ್ತು ಮಿರ್ಪಿನ ಮೊಂದುದಿವಸಂ.

ಚಂ॥ ತುಱುಗಿ ತುರಂಗಮಂ ಪೊಳೆದು ಮೆಟ್ಟುವ ದೇಸೆಯ ನಾಡಿತೋರ್ಪ ವೋಲ್ ।
ತುಱುಗಿ ಕಪೋಲರಂಗತಟದೊಳ್ ಕುಣಿಯಲ್ ಮಣಿಕುಂಡಳದ್ವಯಂ ॥
ತುಱುಗಿ ಕರಂಗಳಂ ಕೆದಱಿ ವಕ್ಷದೊಳುಜ್ವಳತಾರಹಾರ ಮೇಂ ।
ಮೆಱೆದನೋ ಭೂಪ ನುತ್ಸವದಿ ನೆಟ್ಟಿರುತುಂ ಮನೆಗಾಗಿ ದೇವಿಯಾ ॥ ೬೪ ॥

ವ॥ ಅಂತಂತಃಪುರಮಂ ಪೊಕ್ಕಾಕಾಂತೆಯಂತಿಕಕ್ಕಾಮಹೀಕಾಂತ ನೆಯ್ದೆವಂದಾಗಳ್.

ಕಂ॥ ಎಂದಿನ ತೆಱನಲ್ಲದಿದೇ ।
ನಿಂದೀವಲ್ಲಭೆಯ ವದನವನಜಂ ಕೊರಗಿ ॥
ತ್ತೆಂದುದನೆ ಪರ್ಚುಗೊಳ್ವೆಂ ।
ದಂದದಿ ನೇನರಸನಾನನಂ ಕೊರಗಿದುದೋ ॥ ೬೫ ॥

ಚಿಂತಾಪರವಶತೆಯಿ ನಿನಿ ।
ಸಂ ತಡೆದಿದಿರೇಳದಾತ್ಮಪರ್ಯಂಕದೊಳಾ ॥
ಕಾಂತಂ ಕುಳ್ಳಿರೆ ಕಂಡು ಕ ।
ರಂ ತಳವೆಳಗಾಗಿ ಸಖಿಯ ನೇಂ ನೋಡಿದಳೋ ॥ ೬೬ ॥

ವ॥ ಆಗಳಾ ವಿಳೋಕನಾಮಳಜಳಕ್ಷಾಳಿತಾತ್ಮಹೃದಯಸರಃಶಂಕಾಪಂಕನಾಗಿ ಭೂಕಾಂತಂ ಮೆಲ್ಲನಿಂತೆಂದಂ.

ಕಂ॥ ಪೊಗಸಿನ ಚಂದ್ರನ ತೆಱದಿಂ ।
ನಗೆಮೊಗ ಮೇಕಾಂತುದುಬ್ಬರಂ ಬಿರಿವಿನ ಮೇ ॥
ಕುಗುತಿರ್ದುವು ತುಱುಗೆಮೆದುಂ ।
ಬಿಗಳುಳ್ಳಲರ್ದಕ್ಷಿಕುವಮುದಮಧುಬಿಂದುಗಳಂ ॥ ೬೭ ॥

ಕವಪನದೇಕೆಯೊ ಪತ್ತಿ ।
ರ್ದುದು ಕೆಂದಳದೊಂದು ಪಜ್ಜೆ ತದ್ವರ್ಣಮನಾಂ ॥
[ತುದು]ತಮುದ ಮಱಿಯ ಮುತ್ತಿಗೆ ।
ಯೊದವೆನೆ ಮುಖಶಶಿಗಿದೇಕೆ ಕುರುಳಿಱುದವುದೋ ॥ ೬೮ ॥

ಚಂ॥ ಒಸರದಿದೇಕೆ ನಿನ್ನವದನೇಂದು ವಚೋಮೃತಮಂ ಸುಕೇಸರ ।
ಪ್ರಸವಮ ನೇಕೆ ಚುಂಬಿಸವು ತುಂಬಿಗುರುಳ್ ತನುವಲ್ಲಿ ಪಲ್ಲವ ॥
ಪ್ರಸರಮ ನೇಕೆ ಸಂಗಳಿಸ ದುನ್ಮಣಿಭೂಷಣದಿಂದ ಮೇಕೆ ಸಂ ।
ತಸಮ ನೊಡರ್ಚೆ ಯೆನ್ನ ಮನದಂಚೆಗೆ ಪೇೞ್ ದರಹಾಸದುಗ್ಧದಿಂ ॥ ೧೯ ॥

ಕಂ॥ ಅಂತಸ್ತಾಪಂ ತನುಲತೆ ।
ಯಂ ತವೆ ಕೊರಗಿಸಿದುದೆಯ್ದೆ ನೀಂ ಬಿಸುಸುಯ್ಯಿಂ ॥
ದಿಂತೇಕೆ ತಿಱಿದ ತಳಿರಿಂ ।
ಬಂತಿರೆ ಕೊರಗಿಸುವೆ ಯಧರನವಪಲ್ಲವಮಂ ॥ ೨೦ ॥

ಚಂ॥ ಅನುವಶವೃತ್ತಿ ಗಲ್ಲದ ಸಪತ್ನಿಯರಿಲ್ಲ ಮನಕ್ಕೆ ನಲ್ಮೆಯಂ ।
ಜನಿಯಿಸುವಟ್ಟಿಗಲ್ಲದ ಸುವಸ್ತುಗಳಿಲ್ಲಿನಿಕೆಯ್ಯೆ ರಾಗದಿಂ ॥
ನನೆಕೊನೆವೋಗಲಿಲ್ಲದವರಾಧಲವಂ ಪೆಱತೆನ್ನೊಳಿಲ್ಲ ಪೇೞ್ ।
ನಿನಗಿನಿತೊಂದು ಚಿತ್ತದ ನಿಮಿತ್ತದ ಚಿಂತೆ ಲತಾಂತಕೋಮಳೇ ॥ ೨೧ ॥

ಉ॥ ಈ ತೆಱದಿಂ ನೃಪಂ ಪ್ರಿಯೆಯ ಚಿತ್ತದ ಖೇದಮ ನೆಯ್ದೆ ಕೇಳ್ವ ಸಂ ।
ಜಾತಕುತೂಹಳಂ ನುಡಿಯದಶ್ರುಗಳಂ ಸಿಡಿಯುತ್ತಿರಲ್ಕೆ ಮ ॥
ಚ್ಚೇತದೊಳುಣ್ಮಿ ಪೊಣ್ಮುವ ತನೂಭವಲಾಭದ ಚಿಂತೆ ಪೋ ಸುನಿ ।
ರ್ಣೀತ ಮಿದೆಂದದೇಂ ನುಡಿದನೋ ಬಗೆಯಂ ನವಭಾವಕೋವಿದಂ ॥ ೨೨ ॥

ವ॥ ಆಗಳ್

ಕಂ॥ ನುಡಿದಾಮಾತಿನ ಬೞಿಯನೆ ।
ಗುಡುಗುಡನುಗಲಶ್ರು ಹರ್ಷಬಾಷ್ಪ ಮೆನಲ್ ತ ॥
ಳ್ತಿಡಿದು ಮೊಳೆಯಾಯ್ತು ಪುಳಕಂ ।
ಕಡೆಗಣ್ಣಿಂ ನೋಡಿದಳ್ ವಯಸ್ಯೆಯ ಮೊಗಮಂ ॥ ೨೩ ॥

ವ॥ ಆಗಳಾಮಹಾದೇವಿಯ ಕಣ್ಣಱಿದು ಚತುರಿಕೆಯೆಂಬ ಕೆಳದಿ ಯಿಂತೆಂದಳ್.

ಕಂ॥ ದೇವಿಯ ಬಗೆಯ ನಲರ್ಚಲ್ ।
ದೇವರವೋಲ್ ಬಲ್ಲರಾರೊ ಸಖಿಯರ್ಕಳ್ ತಾ ॥
ರಾವಳಿ ಯಲರ್ಚಲಾರ್ಕುಮ ।
ಭಾವಿಸೆ ಹಿಮಕಿರಣನಂತೆವೋಲ್ ಕುಮುದಿನಿಯಂ ॥ ೨೪ ॥

ವ॥ ಎಂದಭಿಮುಖಂಬಡೆದು ಪೇೞಲ್ತಗುಳ್ದಳ್. ಇಂದು ಪರ್ವದಿನಮಪ್ಪುದಱಿಂ ದೇವಿಯುದಯಸಮಯದೊಳ್ ಮಂಗಳಾಲಂಕಾರಾಲಂಕೃತೆಯಾಗಿ ಪರಿವಾರಾಂಗನಾಕರತಳಪರಿಕಳಿತವಿವಿಧಾರ್ಚನಾವಿಶೇಷಂಬೆರಸು

ಚಂ॥ ಪ್ರಮದವನಕ್ಕೆ ಪೋಗಿ ನವರತ್ನವಿನಿರ್ಮಿತನೂತ್ನಜೈನಗೇ ।
ಹಮ ನತಿಭಕ್ತಿಯಿಂದೆ ಬಲವಂದು ಶಚೀವಧು ವೆಂದೆನಲ್(ಸ)ಸಂ ॥
ಭ್ರಮ ವಿವಿಧಾರ್ಚನಾವಳಿಯಿ ನರ್ಚಿಸಿ ದೇವನ ನಱ್ತಿಯಿಂ ಬರು ।
ತ್ತಮರ್ದಿನ ಸೋನೆಯಂ ಸುರಿದವೋಲ್ ನಡೆ ನೋಡಿದಳಾವನಾಂತವಮಂ ॥ ೭೫ ॥

ವ॥ ಅಲ್ಲಿ ಮನಂಗೊಳ್ವ ಮರಾಳ[1] ಬಾಳಕಂಗಳ್ಗೆ ಮಂದಮಂದಪದನ್ಯಾಸಮ ನುಪದೇಶಿಸು ತ್ತುಂ ಬರುತ್ತು ಮಿರೆ ತದ್ವನೈಕದೇಶದೊಳ್.

ಮ।ಸ್ರ॥ ಪಸುರ್ಗರ್ಪ್ಪಿಂ ಸುತ್ತಲುಂ ಕಟ್ಟಿಲಿಪ ಪಸಲೆ ಯಾಕಾಸಮಂ ಮಧ್ಯದೊಳ್.ಶೋ ।
ಭಿಸಿ ತೆಳ್ಪಂ ತಾಳ್ದ ಚಂದ್ರೋಪಳ ಮಮಳಶರತ್ಪೂರ್ಣಶುಭ್ರಾಂಶುಮಂ ಸಂ ॥
ತಸದಿಂದಂತಲ್ಲಿ ಪಟ್ಟಿರ್ದ್ದರಲೆವಱಿ ಲಸಲ್ಲಕ್ಷ್ಮಮಂ ಪೋಲ್ತುದೇಂ ಪು ।
ಟ್ಟಿಸಿದತ್ತೋ ದೃಕ್ಚಕೋರಂಗಳನೆ ತಣಿಪುವಾ ಶಕ್ತಿಯಂ ದೇವಿಗಾಗಳ್ ॥ ೭೬ ॥

ವ॥ ಅಂತು ಮನಂಗೊಳೆ ನೋಟ್ಟಿನ ಮುದಱಿ ಕೆಲನೆಲದ ಪಸುರ್ಪುಲ್ಲಂ ಮೇವುತಿರ್ದ ಪೊಸವಾಣಿತಿವುಲ್ಲೆ ಮುನ್ನ ತನ್ನ ನಡೆಪಿದುದಪ್ಪುದಱಿಂ ಪರಿಚಯಕ್ಕೆಳಸಿ ಪರಿತರಲುಜ್ಜುಗಂಗೆಯ್ದು ಪಟ್ಟಿರ್ದ ಕೋಣಸುಮಂ ಬಿಟ್ಟು ಬರಲಾಱದಂಗದೇಶಂಗಳನಲ್ಲಲ್ಲಿಗಾಘ್ರಾಣನಂಮಾಡಿಯುಂ ಮುಗುಟ್ಟಿದ್ದ ಮಾಲೇಹನಂಗೈದು ಮೆಟ್ಟಿಱಿಸಿ ತೊಱಿದ ಮೊಲೆಯಂ ಸಾರ್ಚಿ ತಣಿಯೂಡದೆ ನಡೆಗೊಳಿಸಿ ತವಕದಿಂ ಬರುತ್ತುಂ ಕೂಡೆ ವರಲು ಮಿರಲು ಮಱಿಯದೆ ತಡಂಗಾಲ್ಗೊಂಡು ತಡೆದು ತಡೆದಡವರ್ಪ ತರುಣ ಹರಿಣಂ ಕೂಡೆವರ್ಪಂತಡಿಗಡಿಗೆ ನಿಂದು ನೋಡುತ್ತುಂ, ಕಡೆವಾಯ ಕಱುಂಕೆಯೆಸಳಂ ಬಾಯ್ವಾಯೊಳ್ ನೀಡುತ್ತುಂ, ಮೋಹರಸದೊಳೋಲಾಡುತ್ತುಬಂದುತುಡುಗೆಯ ಪಚ್ಚೆವರಲ ಪಸುರ್ವೆಳಗು ಪಸರಿಸಿದ ಪರಿಸರಸ್ಥಳಿಯಂ ಪಸಲೆಗೆತ್ತು ಕಾದುರ್ಕನಲ್ವ ಮುಗ್ಧಶಾಬಕದ ಮೊಗಮಂ ಮೊಗಮೊಗದಿಂ ನೂಂಕಿ ಮೊಲೆಯೂಡುವ ಹರಿಣಿಯಂ ನೀಡುಂ ಭಾವಿಸಿ ನೋಡಿ ವಿಸ್ಮಯಾಂಬುರಾಶಿಯೊಳ್ ಮುಬಿಗ್ಗಾಡಿ ಮತ್ತ ಮಾಕುರಂಗಿಯ ತನ್ನೊಳಾದ ನಿರತಿಶಯಸ್ನೇಹಮಂ ಮಱಿಯೊಳಾದಸಾಧಾರಣಮೋಹಮುಮ ನಾವುದಗ್ಗಳಂ ಪೇೞಿಂಬಂತೆನ್ನಂ ಕೂಂಕಿ ತೋಱಿತ್ತು ಮುತ್ತರಮಂ ತಾನೆ ನುಡಿವಂತೆನ್ನೊಳಿಂತೆಂದಳ್.

ಕಂ॥ ಎನ್ನಯ ನಡೆಪಿದ ಪುಲ್ಲೆಯಿ ।
ದೆನ್ನಂ ಕಾಣುತ್ತೆ ಪರಿದು ಬರುತಿರ್ಪುದು ದಲ್ ॥
ಮುನ್ನೀಗಳ್ ಸಖಿ ಕೋಣಸಂ ।
ನಿಲ್ಲದು ತಾಂ ಬಿಟ್ಟು ಪುತ್ರಸುಖಮೇಂ ಪಿರಿದೋ ॥ ೭೭ ॥

ವ॥ ಎಂದದನೆ ಪುನಃಪುನಃಕಥನಂಮಾಡಿ ಮುಹುರ್ಮುಹುಃಶ್ಲೇಷಾಂದೋಳನಂಗೆಯ್ವುತ್ತು ಮಂತಃಪುರಕ್ಕೆ ವಪಾಗಳ್.

[1] ಬಳಗಂಗಳ್ಗೆ.

ಕಂ|| ಏನೆಂಬುದೊಂದುಹರ್ಷದ ।
ಹಾನಿಯು ನೀಪರಮಹರ್ಷಹೋ ಪಲಕಾಲಂ ॥
ತಾನಿರ್ದಂದದ ಚಿಂತಾ ।
ಗ್ಲಾನಿ ಮನಂಬೊಕ್ಕುದರಸಿಗಾತ್ಮಜವಿಷಯಂ ॥ ೭೮ ॥

ವ॥ ಅಂತಚಿಂತ್ಯಚಿಂತಾಪರತಂತ್ರಾಂತರಂಗೆಯಾಗಿ ಬಂದರಮನೆಯಂ ಪೊಕ್ಕೆಲ್ಲರುಮಂ ವಿಸರ್ಜಿಸಿ ಮೆಲ್ಲನೆನ್ನೊಳಿಂತೆಂದಳ್.

ಚಂ|| ನಡೆಪಿದ ಪುಲ್ಲೆ ನೋಡೆ ಕೋಣಸಂ ಪಡೆದಿಂತೆಸೆದಿರ್ದುದೀಗಳೀ ।
ನಡೆಪಿದ ಪಕ್ಕಿಗಳ್ ಮಱಿಗಳೊಳ್ ಗಱಿಸೋಂಕಿ ಸುಖಕ್ಕೆ ಸಂದುವಾ ॥
ನಡೆಪಿದ ಬಳ್ಳಿಗಳ್ ಪಲವುಸೂಱ್ ಸುಫಲಪ್ರಸವಕ್ಕೆ ವಂದುವಾಂ ।
ಪಡೆಯದೆ ಸರ್ವಲೋಕಹಿತನಂ ಸುತನಂ ತಡೆದಿರ್ದೆ ನೇಕೆಯೋ ॥ ೭೯ ॥

ಕಂ|| ನೋಡೆನ್ನೋರಗೆವೆಣ್ಗಳ್ ।
ಕೂಡೆ ಮನಂಗೊಳ್ವ ಮಕ್ಕಳಂ ಮುದದಿಂ ಮು ॥
ದ್ದಾಡಿಸುತಿರ್ದಪ್ಪರ್ ತಾ ।
ಮೋಡಿಸುವಂತೆನ್ನ ಸಿರಿಯುಮಂ ಪರಿಯುವಮುಮಂ ॥ ೮೦ ॥

ಚಂ॥ ಕ್ಷಿತಿಪನ ಮಾಡಿದುನ್ನತಿ ಸಪತ್ನಿಯರೊಳ್ಪಿನ ಮಾಳ್ಪಿನೂನಸ ।
ತ್ಕೃತಿ ಜನಮುಯ್ದು ಕೀರ್ತಿಸುವ ಸನ್ನುತಿ ಲೋಕದೊಳಾಣೆ ಸಲ್ವಹಂ ॥
ಕೃತಿ ದೊರೆವೆತ್ತ ಭಾಗ್ಯದ ಚಮತ್ಕೃತಿ ಸಂದ ವಿವೇಕವೃದ್ಧಸ ।
ಮ್ಮತಿ ಸುತನಿಲ್ಲದಂದೆನಗೆ ನಿಷ್ಫಲ ಮೆನ್ನದದೇನ ನೆಂಬುದೋ ॥ ೮೧ ॥

ಚಂ|| ಇಹಪರಲೋಕಸಂಭವಸುಖಂ ಸಮನಿಪ್ಪುದು ಪುತ್ರ ನಪ್ಪುದುಂ ।
ಗೃಹಿಗವನಿಲ್ಲದಿರ್ಪಧಿಕರಾಜ್ಯವಿಭೂತಿಯಿ ನಪ್ಪುದೇನೊ ನಿ ॥
ರ್ವಹಿಸದರಣ್ಯದೊಳ್ ಚರಿಪೊಡಂ ತಪದಿಂ ಸತಿಯರ್ಗೆ ಮುಕ್ತಿ ಯಾ ।
ನಹಹ ನಿರರ್ಥಜನ್ಮೆ ಯೆನುತುಂ ಸುರಿದಳ್ ಬಿಸುಸುಯ್ದು ಬಾಷ್ಪಮಂ ॥ ೮೨ ॥

ವ|| ಅಂತಳವಿಗಱಿದಳಲನೊಳಕೊಳ್ವುದು ಮಾತನಿಂತೆಂದಂ.

ಉ|| ಸರ್ವಕಳಾವಿಭಾಸಿ ಸುಮನಃಪರಿತೋಷಕರಂ ಸಲಕ್ಷಣಂ ।
ಪಾರ್ವಣಚಂದ್ರ ನಸ್ತಮಿತದುಸ್ತಮ ನಾತ್ತಸುವೃತ್ತ ನೊರ್ವಯೀ ॥
ಪೂರ್ವದಿಶಾಸಮುದ್ಭವನೆ ಪೇೞ್ ಪಲವುಂ ದಿನಮಿರ್ದೊಡಲ್ಲದಂ ।
ತುರ್ವಿಗೆ ರಾಜನಪ್ಪ[ನು]ದಯಂ ನಿನಗಪ್ಪುದು ದೇವಿ ನಿಶ್ಚಯಂ ॥ ೮೩ ॥

ಚಂ॥ ಪಡೆದೊಡದೇನೊ ಕಾಡ ಲತೆಗಳ್ ಪಲವಂ ಪಲವುಂ ಫಲಂ ದಿಟಂ ।
ತಡೆದೊಡಮೇನೊ ಕಲ್ಪಲತೆ ಲೋಕದದೃಷ್ಟದೆ ಸೇವ್ಯಸತ್ಫಲಂ ॥
ಬಿಡಿಯದುದಲ್ತು ಮಿಕ್ಕ ವಧುಗಳ್ ಪಡೆದೇಂ ಗಳ ಮಕ್ಕಳಂ ಮಗಂ ।
ಬಡೆದಪೆ ನೀನೆ ದಲ್ ಜಗದ ಭಾಗ್ಯದ ಮುಂಬಿನೊಳಂಬುಜಾನನೇ ॥ ೮೪ ॥

ವ॥ ಎಂದೆನೆ ತತ್ಕಾಲೋಚಿತವಚನತುಷಾರಸೇಚನದಿನೀಷದ್ವಿಶ್ರಾಂತಚಿಂತಾಸಮುದ್ಭೂತಾಂತಃಶೋಕಸಂತಾಪಶ್ರಮೆಯಾಗಿ ಮತ್ತಮಿನಿತುಂ ಪೊೞ್ತಂ ಬಸಿಱಿಳಪ್ಪ ಬಯಕೆಗಳ್ಗಿವೆ ಕಾರಣಂಗಳೆನಿಸಲ್ತಕ್ಕ ಬಯಕೆಗಳಂ ಬಯಸುತಿರ್ದಳದೆಂತೆಂದೊಡೆ.

ಕಂ॥ ಈ ತನುವಲ್ಲಿ ಜಗತ್ಸಂ ।
ಪ್ರೀತಿಕರಪ್ರಸವಮೊಂದರೊಳಮೊಂದದೆ ತಾ ॥
ನೇತಕ್ಕೆ ನಿಷ್ಫಲಂ ಪು ।
ಷ್ಪಾತಿಶಯಂಬಡೆದು ಬೇಸಱಿಂ ಬೀೞುವುದೋ ॥ ೮೫ ॥

ಪೊಲೆ ಪಿಂಗದೆ ಪೊಂಗುವುದ ।
ಕ್ಕಲಸುವರಾಳಿಜನಂಗ ಳೆನ್ನಯ ಬಸಿಱಿಳ್ ॥
ಕುಲಪೂತ ನೆನಿಪ್ಪ ಮಗಂ ।
ನೆಲಸುತ್ತೀಪೊಲೆಯು ನೆಂದು ಪೇೞ್ ಪಿಂಗಿಪನೋ ॥ ೮೬ ॥

ಅಂಗಭವನಂಗಭವನೆನೆ ।
ಪಿಂಗದೆ ಮನದೊಳಗೆ ಪುಟ್ಟಿ ರತಿಯುತ್ತಮಳಂ ॥
ಸಂಗಳಿಸಲ್ತೋರ್ಪವನೆಂ ।
ದಂಗದೊಳೊಗೆದೆನಗೆ ಸಿರಿಯ ಸೈಪಂ ಮಾೞ್ಪಂ ॥ ೮೭ ॥

ಸುವಿದಿತಮಿನಿತುದಿನಂ ಸ್ತ್ರೀ ।
ಸವನಂ ನಿನಗಿಂದು ಕಾಂತೆ ಪುಂಸವನಂ ಮಾ ॥
ಡುವದೊಂದರ್ಥಾಂತರದಿಂ ।
ದವನೀಶಂ ಸರಸಮಾಡಿ ಕಾಡುಗು ಮೆಂದೋ ॥ ೮೮ ॥

ಪೆರ್ಚಿಸಿದ ಪೊಕ್ಕುೞಿಳ್ ಮಿಗೆ ।
ಸಾರ್ಚಿ [1]ಹರಿದಾಪ್ರಂಭಕಾಂಶಮಂ ತಳ್ತಮೆಗಳ್ ॥
ಬಿರ್ಚಿದ ಬಾಳಕನಂ ಮೆ ।
ಯ್ವೆರ್ಚುತ್ತೀಕ್ಷಿಸುವ ಸೈಪದೆಂದಾದಪುದೋ ॥ ೮೯ ॥

1 ಹರಿದಾಪ್ರಂಶುಕಾಂಶಮಂ

ಕಂ॥ ಕಂದಂಗೆ ರಾಜ್ಯಚಿಹ್ನಮ ।
ನೊಂದೆರಡುಮ ನುಱಿಯಿಸಿ ಮುಂದಿಗೆರೆದರ್ಘಮ ನಾ ॥
ಮಂದಾರಂ ಕೆಯ್ವಂದವೊ ।
ಲೆಂದಿತ್ತಿಸಗುವನೊ ನೃಪತಿ ಜನನೋತ್ಸವಮಂ ॥ ೯೦ ॥

ಅಂಜನ ಮಕ್ಷಿದ್ವಯದೊಳ್ ।
ರಂಜಿಸೆ ಸೊಡರ್ವರ್ಕಕ್ಕ ನೊಸಲೊಳೆಸೆದಿರೆ ಪದದಿಂ ॥
ಮಂಜೀರಕರವ ಪೊಗೆಯೆ ಮ ।
ಗಂ ಜಗುಬಿತ್ತೆಂದೊ ತೊಟ್ಟಿಲಂ ಪಟ್ಟೊದೆವಂ ॥ ೯೧ ॥

ತನುಜ ನಖಿಳಶರ್ಫಕಲ್ಪಾ ।
ವನಿಜಂ ತಣಿಯಮಂತು ಬಳೆವೊಡೀಬೀನಳುನ ॥
ಸ್ತನವೆ ಪಯೋಧರ[ಮಾತ... ।
ಕ್ಕಿ]ನುರೋಜಖರಕ್ಕದೊಂದು ಪೆಸರೊಳ್ಪೊರೆಯೇ ॥ ೯೨ ॥

ಹಾರಕ್ಕದೊಂದೆ ನಾಯ್ಕುಕ ।
ವಾರಯಲೆಂದರಸ ನೀಕ್ಷಿಸುತ್ತುಂ ನಲಿಯಲ್ ॥
ದಾರಕನಂ ಘನತೇಜ ।
ಸ್ಸಾರನ ನಾನೆಂದು ನಲ್ಮೆಯಿಂ ದೆತ್ತುವೆನೋ ॥ ೯೩ ॥

ಓಲಗದೊಳ್ ಮಗ ನವನೀ ।
ಪಾಳರ ಕೆಯ್ಗೆಯ್ಗೆ ವಂದು ಕೆಯ್ಗನ್ನಡಿಯಂ ॥
ತಾಲೋಕಿಸಿ ಪೊಗಮಂ ಮಣಿ ।
ಮೌಳಿಯೊಳೆಂದಭಯಮಿಾವವೊಲ್ ಕೆಯ್ಯಿಡುವಂ ॥ ೯೪ ॥

ಕೆಂದಾವರೆಗೆತ್ತಡಿಯೊಳ್ ।
ಸಂಘಿಸಿ ಕಳಭಂಗಳೆಳಸೆ ಕೆಯ್ಯಂ ಮಱಿಯಾ ॥
ಸ್ಯೇಂದುವ ನೀಕ್ಷಿಸಿ ಸಿಂಗದ ।
ಚಂದದಿ ನೆಂಪಂಬೆಗಾಲೊಳೆಸೆವನೊ ಕಂದಂ ॥ ೯೫ ॥

ಅಂದುಗೆಯಉ ನೂಲ ಕಂಕಣ ।
ದಿಂ ದನಿ ಮಿಗೆ ದೇವದೇವದೇವೆಂದೆರೆದಾ ॥
ನುಂ ದೇವನು ಪೊನೆ ಕಂದಂ ।
ನಿಂದು ಬೆರಲ್ವಿಡಿದದೆಂದೊ ದಟ್ಟಡಿಯಿಡುವಂ ॥ ೯೬ ॥

ಉ|| ಬಾಳೆಮರಾಳೆಮಂ ಬಳಸಿ ಬೆಂಬಟಿಸಿಗೊಂಡೆಡೆಯಾಡುತುಂ ಪ್ಟೃಗೀ ।
ಬಾಳಕಜಾಳದೊಳ್ ನಲಿವಿನಿಂ ನೆಗೆದಾಡುತು ಮಂತೆ ಹಸ್ತಿನೀ ॥
ಬಾಳಕಹಸ್ತಮಂ ಪಿಡಿದು ಪಿಂದಣ ಮೆಯ್ಗೊಲೆದಾಡುತುಂ ದರೋ ।
ನ್ಮೀಳಿತ ಮೆನ್ನ ದಿಟ್ಟಿಯನೆ ತನ್ನೊಡಸಾಡಿಪ ನೆಂದೊ ಬಾಳಕಂ ॥ ೯೭ ॥

ಚಂ|| ಅರಮನೆವಾಗಿಲೊಳ್ ಚರಿಗೆಗೊಟ್ಟವರಂ ನಿಲಿಸಲ್ಕೆ ಪೋಪ ಭೂ ।
ಪರ ನೊಡವೋಗಿ ಪುಂಬರಿದು ಪೊಟಿಸ್ಗಿ ತದಂಘ್ರಿಯ ರೇಣುವಕ್ಕಜಂ ॥
ಬೊರೆಯದ ರಕ್ಕೆವೊಟ್ಟಿನಿಸಿರಲ್ಕೆ ಣಪೋದು ಣಪೋದು ನಿಲ್ಲಿ ಪೆಂ ।
[1] ದೊರೆದು ಮುನೀಂದ್ರರಾನನದರಸ್ಮಿತಮಂ ಮಗನೆಂದು ಮಾಳ್ಪಿನೋ ॥ ೯೮ ॥

ಕಂ|| ಬಾಲಕನ ನಿರುಳ್ವಗಲುಪ ।
ಲಾಲಿಸುತುಂ ಮಜ್ಜನಾದಿಯಿಂ ದಲಸದ ಧಾ ॥
ತ್ರೀಲಲಿತಕೃತ್ಯಮಂ ಕಂ ।
ಡೋಲಗಿಸುವೆನೆಂದೊ ವಸ್ತ್ರಭೂಷಾದಿಗಳಂ ॥ ೯೯ ॥

ವ॥ ಎಂದಿವುಮೊದಲಾಗೆ ಪಲವುಂ ಪುತ್ರದೌಹೃದಂಗಳಂ ಪಂಬಲಿಸುತ್ತು ಮಿರ್ದಳಲ್ಲದೆಯುಂ.

ಚಂ|| ದಿವಸಕರೋದಯಂ ತಡೆದ ಪೂರ್ವದಿಶಾರಮೆ ಪುರ್ವಕೊರ್ವಿ ತೋ ।
ಱುವ ತೆಱದಿಂದೆ ಮುನ್ನೆ ತನುಕಾಂತಿ ಕಟಿಲ್ದುದು ಮತ್ತೆ ಭಾನು ಮೂ ॥
ಡುವ ಪದದೊಂದು ಮುಂಬಿನೊಳೆ ಬೆಳ್ಕರಿಪಂತಿರೆ ಕೂಡೆ ಪಾಂಡುರ ।
ಚ್ಛವಿಯೊಳಕೊಂಡುದೊಂದೆ ದಿನ ಮಿಂತುಟು ಚಿಂತೆ ನರೇಂದ್ರದೇವಿಯಾ ॥ ೧೦೦ ॥

ವ॥ ಎಂದಾದ್ಯಂತಂಬರಂ ಚದುರಿಕೆ ಬಿನ್ನಪಂಗೆಯ್ವುದು ಮರಸನದೆಲ್ಲಮಂ ಕೇಳ್ದು ನಸುಗು ತ್ತುಂ ಮಹಾದೇವಿಗಿಂತೆಂದಂ.

ಮ॥ಸ್ರ॥ ಇದು ದೈವಾಯತ್ತ ಮಾಗಿರ್ಪುದು ಬಗೆವೊಡೆ ಚಿಂತಾಸಮುತ್ಸೇಕದಿಂ ದ ।
ಪ್ಪುದೆ ಪುತ್ರೋತ್ಪತ್ತಿ ಮುನ್ನಂ ನೆರಪಿದ ಸುಕೃತಂ ಪಕ್ವಮಾದಲ್ಲದಂದಾ ॥
ಪುದು ಮಿಷ್ಟಾವಾಪ್ತಿ ಯಿಲ್ಲಾನನುದಿನ ಮಿದೆ ದಲ್ ಚಿಂತೆಯಾಗಿರ್ದಪೆಂ ತೋ ।
ಱದೆ ಚೇತೋವೃತ್ತಿಯಂ ಕೊರಗುವೆ[2]ಯರುಣಾಂ? ಭೋಜಪತ್ರಾಯತಾಕ್ಷೀ ॥೧೦೧॥

ಕಂ|| ಸುತರಿಲ್ಲದ ಬಾಟಿಟ್ ನ್ಯಾಯೋ ।
ಚಿತಮಿಲ್ಲದ ರಾಜ್ಯಸಂಪದಂ ಸದ್ದಲಿಷ್ಟಿ ॥
ಸ್ಥಿತಿಯಿಲ್ಲದ ಚರಿತ ಮಿವಾ ।
ಯತಿಯೊಳತಿವ್ಯರ್ಥ ಮೆಂದು ನಿಶ್ಚಯಿಸಿರ್ಪೆಂ ॥ ೧೦೨ ॥

[1] ದಿರಿದು ? [2] ಯನುತಂ.

ವ॥ ಅದಲ್ಲದಿಂದೆ ನಿನ್ನ ಚಿಂತಾಪರಿಹಾರಕ ಮಪ್ಪುದೊಂದುದಂತಮಂ ಕೇಳೆಂದಿಂತೆಂದಂ.

ಉ॥ ಅಷ್ಟಮಿ ಯಿಂದೆನಲ್ ಪುರದ ತೀರ್ಥದ ಚೈತ್ಯಗೃಹಕ್ಕೆ ಪೋಗಿ ತ ।
ದ್ವಿಷ್ಟಪನಾಥನಂ ನಮಿಸಿ ಪೂಜಿಸಿ ವಂದಿಸಿ ದೇವ ಮಾೞ್ಪದೆ ॥
ನ್ನಿಷ್ಟಮ ನೆಂದು ಬೇೞ್ಪ ಪದದೊಳ್ ಪದಪೀಠದ ಮಾತುಳುಂಗ ಮೇಂ ।
ತುಷ್ಟಿಯ ನಿತ್ತುದೋ ಜಗುೞಿವಂದಿದಿರ್ಗೊಂಡು ಮನಕ್ಕಪೂರ್ವಮಂ ॥ ೧೦೩ ॥

ಕಂ॥ ಆಗಳ್ ಪುರೋಹಿತಂ ವಿವಿ ।
ಧಾಗಮವಿದ ನಿದುವೆ ಭಾವಿ ಪುತ್ರಾವಾಪ್ತಿ ॥
ಶ್ರೀಗೆ ನಿಮಿತ್ತಂ ಪಿಡಿ ನೀಂ ।
ರಾಗದೊಳೆಂದೆನ್ನ ಕೆಯ್ಗೆ ಪರಸುತ್ತಿತ್ತಂ ॥ ೧೦೪ ॥

ವ॥ ಎಂದು ಪೇೞ್ದು.

ಕಂ॥ ಕೆಲದಡಪವಳ್ತಿಯಂ ನೋ ।
ಡಲವಳ್ ಗಂಧಾಕ್ಷತಪ್ರಸೂನಸುಧೂಪಂ ॥
ಕಲಸೆ ಪೊಸಗಂಪುವೀಱುವ ।
ಫಲವಂ ತೆಗೆದೀಯೆ ಕೊಟ್ಟ ನರಸಿಯ ಕೆಯ್ಯೊಳ್ ॥ ೧೦೫ ॥

ವ॥ ಆ ಮಾತುಳುಂಗ ಫಲಮ [ನಾತ್ಮಜಫಲಮ] ನಾಂಪಂತಂಜಳಿಪುಟದಿ ನಾಂತು ಮನಂಗೊಂಡು.

ಮ॥ ಸುತಜನ್ಮೋತ್ಸವ ಮಾಗಳಾದ ತೆಱದಿಂ ರೋಮಾಂಚಮಂ ತಾಳ್ದಿ ಹ ।
ರ್ಷಿತೆ ಹರ್ಷಾಶ್ರುಜಲಾರ್ದ್ರನೇತ್ರೆ ಫಲಪೂರಂ ಜನ್ಮಸಾಫಲ್ಯಸಂ ॥
ಸ್ಥಿತಿಯಂ ಮಾಡಿದುದೆಂದು ನೋಡಿದಳಲಂಪಿಂ ಸುತ್ತಿರಲ್ ಲೋಚನ ।
ದ್ಯುತಿ ಕೆಯ್ವೊಕ್ಕ ನಿಧಾನಮಂ ಬಡವನಂದಾಚ್ಛಾದನಂ ಗೆಯ್ವವೋಲ್ ॥ ೧೦೬ ॥

ವ॥ ಅಂತು ನೀಡುಂ ನೋಡಿ ಸಂತತಸಂತೋಷಾಮೃತಾಂಬುನಿಧಿಯೊಳೋಲಾಡಿ ಮೂಡಿ ಮುೞ್ಕಾಡಿ ತದನಂತರಂ.

ಕಂ॥ ವಿಸ್ಮಯ ಮೆಂತೆಂತೆಂದು ದ ।
ರಸ್ಮಿತೆ ಬಗೆಗೊಂಡು ಬೆಸಗೊಳಲ್ ಶಾಸನದೇ ॥
ವೀಸ್ಮೃತಿಯಿಂದಾಯ್ತುವರ್ಗೇಂ ।
ವಿಸ್ಮೃತಿಯೇ ನಿನ್ನ ಮಾೞ್ಪ ಬಹುಸತ್ಕಾರಂ ॥ ೧೦೭ ॥

ವ॥ ಎಂದಗಸಂ ಯಥಾರ್ಥಪ್ರೇಮಚಾರುಚಾಟುವಚನಾಮೃತವರ್ಷದಿಂ ದರಸಿಯ ಗಾತ್ರಕ್ಷೇತ್ರದೊಳ್ ರೋಮಹರ್ಷಸಸ್ಯಸಮೃದ್ಧಿಯಂ ಮಾಡಿ ಮತ್ತಮಿಂತೆಂದಂ.

ಕಂ॥ ಧರ್ಮಮೆ ದೇಹಿಗ(ಮಿ)ಹಪರ ।
ಶರ್ಮಕ್ಕೆ ನಿದಾನ ಮದನನೂನವಿಧಾನಂ ॥
ನರ್ಮದಿ ನೆಸೆಗುತ್ಕಟಸ ।
ತ್ಕರ್ಮಂ ಪ್ರತ್ಯಕ್ಷಫಲಮ ನೀವುದು ಪುಸಿಯೇ ॥ ೧೦೮ ॥

ವ॥ ಎಂದು ಪದ್ಮರಾಜಂ ಧರ್ಮೋದ್ಯೋಗದೊಳ್ ನಿಯಾಮಿಸುವುದು ಮಾದಿನಂ ಮೊದಲ್ಗೊಂಡು ವನಮಾಲಾಮಹಾದೇವಿ ಪುತ್ರಕಾಮ್ಯದಿಂದ ಮೌಷಧಾನ್ನದಾನಾದಿಚತುರ್ವಿಧಧರ್ಮತತ್ಪರೆಯಾಗಿ.

ಕಂ॥ ಸುರಭಿಯ ತೊರೆದ ಕುಚಂಗಳ ।
ಬೆರಗಂ ಬೆರಲಿಳಿಸೆ ಪರಮಹಸ್ತಪುಟಾಂ ॥
ತರದೊಳಮೃತ ಮೆನೆ ಕಱಿಸಿದಾ ।
ವರವಧು ಪುತ್ರಾರ್ಥಿ ಪಾತ್ರಶೇಷಮ ನುಣ್ಬಳ್ ॥ ೧೦೯ ॥

ಚ॥ ನವವರರತ್ನಕಾಂಚನದೆ ನಿರ್ಮಿಸಿ ನಾಟ್ತ್ರಿಭುವಂಶಮೇರು ಸಂ ।
ಭವಿಸುವಸಕ್ಕೆ ಮಜ್ಜರರಭೂಮಿಯೊಳೆಂದು ಸುಮೇರುವಂ ಮಹೋ ॥
ತ್ಸವದೆ ಜಿನೇಂದ್ರಜನ್ಮಸವನೋತ್ಸವಮಂ ಮಿಗೆ ಮಾಡಿ ತತ್ಪಯಃ ।
ಪ್ಲವದೊಳೆ ಮಿಂದು ವಂದಿಗೆ ತದದ್ರಿಯ ನೀವಳಿದೇನುದಾತ್ತೆಯೋ ॥ ೧೧೦ ॥

ಮಂದಾಕ್ರಾಂತ:—ಸಂತಾನಶ್ರೀಪ್ರದ ಮಿದೆನಗಕ್ಕೆಂದು ರತ್ನಂಗಳಿಂದಂ ।
ಸಂತಾನೋರ್ವೀಜಮ ನೆಸಗಿ ತನ್ಮೂಲದೊಳ್ ಭವ್ಯವಿದ್ವ ॥
ತ್ಸಂತಾನಂ ಜೇಂಕರಿಸಿ ಜಿನಪೂಜೋತ್ಸವಂಮಾಡೆ ದಿಗ್ವಾ ।
ಸಂ ತಾನಾಯ್ತೆಂದೆನೆ ಜಸಮೊಱಲ್ದರ್ಥಿಗೀಯುತ್ತು ಮಿರ್ಪಳ್ ॥ ೧೧೧ ॥

ಕಂ॥ ವ್ರತಮೆನಿತೊಳವನಿತುಮ ಸಾ ।
ಸತಿ ಸತತಂ ನಿರತಿಚಾರದಿಂ ನೆಗಳ್ದಳ್ ವಿ ॥
ಶ್ರುತತೀರ್ಥಕೃತ್ಪುರಾಣಂ ।
ಶ್ರುತಿಪೂರ ಮೆನಲ್ ಕರಂ ಸುತಾರ್ಥಿನಿ ಕೇಳ್ದಳ್ ॥ ೧೧೨ ॥

ಪದೆದಷ್ಟಾಹ್ನಿಕದೊಳ್ ಪ ।
ರ್ವದಿನಂಗಳೊಳಖಿಳತೀರ್ಥಕೃತ್ಕಲ್ಯಾಣಾ ॥
ಭ್ಯುದಯದಿವಸಂಗಳೊಳ್ ತ ।
ಪ್ಪದುಪೋಷಿತೆಯಾಗಿ ದರ್ಭಶಯನದೊಳಿರ್ಪಳ್ ॥ ೧೧೩ ॥

ಕಂ॥ ಪದಿನಾಱನೆಯಗ್ಗದ ಸ ।
ಗ್ಗದ ಸಾಧನಮೆನಿಪ ಪುಣ್ಯಮಂ ಪುತ್ರನಿಮಿ ॥
ತ್ತದಿ ನಾಚರಿಸಿದಳಾ ಸ ।
ಗ್ಗದೊಳಾರ್ ಗಳ ಪುತ್ರಸೌಖ್ಯಮಂ ಪೆತ್ತವರ್ಗಳ್ ॥ ೧೧೪ ॥

ವ॥ ಇಂತು ನೆಗೞ್ತೆಗಂ ಪೊಗೞ್ತೆಗಮುಳ್ಳುಂಬಮಪ್ಪ ಧರ್ಮತತ್ಪರತೆಯಿ ನಿನಿತುಪೊೞ್ತು ಪ್ಪೊಡಂ ತಪ್ಪದೆ ಕಾಲಂ ಸಲುತ್ತುಮಿರಲೊಂದುದೆವಸಂ.

ಕಂ॥ ಮೂಡಿದ ಮೊಡವಿ ಮುಗುಳ್ಮಾಗ ।
ಮೀಡಿಱುವುನ್ಮಂಜರೀಸ್ತನಂ ತೋಳ್ಮಾದಲೊಳ್ ॥
ತೀಡುವ ನಱುಗಂಪೇಂ ಪಿಸು ।
ಣಾಡಿದುದೋ ಸತಿಗೆ ಪುಷ್ಪಸಮಯೋದಯಮಂ ॥ ೧೧೫ ॥

ವ॥ ಆಗಳ್.

ಕಂ॥ ಕಳೆದುಂ ಮಣಿದೊಡವಂ ಪೊಂ ।
ಗಳ ತೊಡವಂ ತೊಟ್ಟು ತಳದು ಸೆಳೆಯಂ ಪೋಲ್ತಳ್ ॥
ಕಳೆದುಡುಗಣಮಂ ಕೆಮ್ಮಗಿ ।
ಲೆಳಸಿದ ಪೆಱತೆ ಪೊಳೆವ ಪೂರ್ವದಿಗ್ದೇವತೆಯುಂ ॥ ೧೧೬ ॥

ವ॥ ಆ ಚತುರ್ಥದಿನದ ದಿನಕರೋದಯದೊಳ್.

ಚಂ॥ ಒದಗಿದ ಸೌಖ್ಯಮಂ ಧರೆಗೆ ಬೀಱುವಪೂರ್ವಫಲೋದಯಕ್ಕೆ ತಾ ।
ನಿದೆ ಸೆಲೆ ಯೆಂದು ಕಲ್ಪಲತೆಗಚ್ಚರಿಯರ್ ಪೊರೆದೊಂದುದೇಸೆಯಿಂ ॥
ಮೊದಲೊಳಲಂಪಿನಿಂ ಸುರಭಿಗೋಮಯಮಂ ತಳಿವಂತೆ ಗಾಂಗತೋ ।
ಯದೆ ಸಖಿಯರ್ ನೃಪಾಂಗನೆಗೆ ಮಂಗಳಮಜ್ಜನಮಂ ನಿಮಿರ್ಚಿದರ್ ॥ ೧೧೭ ॥

ವ॥ ಅನಂತರಂ ಭಗವಜ್ಜಿನೇಂದ್ರಪೂಜಾವಿವಿಧಮಂಗಳಮ ನಾಚರಿಸಿ ಮಂಗಳಾಲಂಕಾರಾ ಲಂಕೃತೆಯಾಗಿ.

ಚಂ॥ ಮಲಯಜದಣ್ಪು ಸೋರ್ಮಡಿಯ ಮಲ್ಲಿಗೆ ಯುಟ್ಟದುಕೂಲಚೇಲ ಮು ।
ಜ್ಜ್ವಳಿಸುವ ಮುತ್ತಿನಾಭರಣ ಮೊಪ್ಪುವ ಕಪ್ಪುರದೋಲೆ ಬಾಯ ಕೆಂ ॥
ಬೆಳಗಿನೊಳಣ್ಕೆಗೊಂಡ ಸುಲಿಪಲ್ ಪೊಸದೇಸೆಯ ನೀಯ ಕೂಡೆ ಕಂ ।
ಗೊಳಿಸಿದುದಂದು ಬೆಳ್ವಸದನಂ ಕುಮುದಾಯತಲೋಲ ನೇತ್ರೆಯಾ ॥ ೧೧೮ ॥

ವ॥ ಅಂತು ಕೆಯ್ಗೆಯ್ದಂದಿನಿರುಳ್ ಮನಃಪ್ರಿಯನ ಸೋಂಕಿಗೆ ವಂದು.

ಕಂ॥ ರತಿ ರಾಗಾಮೃತವಾರ್ಧಿಯೊ ।
ಳತನುಕ್ರೀಡಾನಿಮಗ್ನೆಯಾದಂತಾದಂ ॥
ಪತಿಗೆ ಮಿಗೆ ಮೂಡುತೆ ಮುಟಿಸಿಂ ।
ಗುತೆ ಬೆಂಡೇಳ್ವಂತಿರಾಗೆ ಕಣ್ಗೆಯ್ದಾಗಳ್ ॥ ೧೧೯ ॥

ಪರಿಪೂರ್ಣಚಂದ್ರನಂ ತಿ ।
ಗ್ಮರೋಚಿಯಂ ಕಲ್ಪವೃಕ್ಷಮಂ ಕ್ಷೀರಜಲಾ ॥
ಕರಮಂ ದರವಿಕಸದ್ವಾ ।
ರಿರುಹಮ ನಾಕಾಂತೆ ನಿಶೆಯ ಕಡೆಯೊಳ್ ಕಂಡಳ್ ॥ ೧೨೦ ॥

ಉ॥ ಮಂಗಳಗಾಯಿಕಾಮಧುರಗಾನದಿ ನೆಚ್ಚಿಱನೆಯ್ದಿ ನಿತ್ಯಕೃ ।
ತ್ಯಂಗಳ ಮಂಗಳಾಚರಣಮಂ ನೆಗಟ್ಟುತ್ತ ಜಿನೇಂದ್ರನಂ ಜಗ ॥
ನ್ಮಂಗಳವಸ್ತುವಿಂ ದಧಿಕಭಕ್ತಿಯಿ ನರ್ಚಿಸಿ ಕಾಂತನಲ್ಲಿಗೊ ।
ಲ್ದಂಗನೆ ಬಂದಳಂಗಜನ ಮಂಗಳಲಕ್ಷ್ಮಿ ಯೆನಲ್ ವಿಲಾಸದಿಂ ॥ ೧೨೧ ॥

ವ॥ ಬಂದು ಮನೋವಲ್ಲಭನ ಸಿಂಹಾಸನಾರ್ಧಕ್ಕಲಂಕಾರವಾಗಿರ್ದು ತನ್ನ ಕಂಡ ಕನಸುಗಳ ನನುಕ್ರಮದಿಂ ಪೇಳ್ವುದು ಮರಸನಪರಿಮಿತಪರಿತೋಷಪೀಯೂಷಪಾರಾವಾರದೊಳೋಲಾಡಿ ಕೆಲದೊಳಿರ್ದ ಪುರೋಹಿತನ ಮೊಗಮಂ ನೋಟಿಪ್ಪುದು ಮಾತ ನಾಸ್ವಪ್ನವಿಶೇಷಫಲಂಗಳಂ ಜಲಕ್ಕನಾಗೆ ತಿಳಿದಿಂತೆಂದಂ.

ಮ॥ ವಿಧುವಿಂದಂ ವಿಬುಧೋತ್ಕರಪ್ರಿಯಕರಂ ತೀವ್ರಾಂಶುವಿಂದಂ ಪ್ರತಾ ।
ಪಧನಂ ಕಲ್ಪಮಹೀಜದಿಂ ದನವಧಿತ್ಯಾಗಪ್ರಭಾವಂ ಪಯೋ ॥
ನಿಧಿಯಿಂದಂ ನಿಖಿಳಾವನೀಶ್ವರಭಯಸ್ಥಾನಂ ದಳತ್ಪದ್ಮದಿಂ ।
ದಧಿಕಶ್ರೀನಿಳಯಂ ಸುಪುತ್ರ ನೊಗೆತರ್ಕುಂ ನಿಮ್ಮೊಳುರ್ವೀಶ್ವರಾ ॥ ೧೨೨ ॥

ವ॥ ಎಂದು ಪೇಟ್ವುದುಂ ಪುರೋಹಿತನ ನನೂನಪ್ರೀತಿದಾನದಿಂ ಮನ್ನಿಸಿ.

ಕಂ॥ ಮಂದಾನಿಳನಲೆಪದೆ ಮಾ ।
ಕಂದಂ ವಿಚಕಿಳಲತಾಸಮೇತ ಮರಲ್ವಾಂ ॥
ತಂದು ಪುರೋಹಿತನಮೃತ ।
ಸ್ಯಂದಿವಚಸ್ತುತಿಯಿ ನೊಸೆದು ದಾನ್ನೃಪ[1]ಚಿತ್ತಂ ॥ ೧೨೩ ॥

---

[1] ಪುತ್ರಂ ?

ವ|| ಅಂತು ಸುಖಸಂಕಥಾವಿನೋದದಿಂ ದಿರುತ್ತುಂ ಕೆಲವಾನುಂ ದಿವಸಂಗಳ್ಗೆ.

ಕಂ|| ಭವಭವದೊಳ್ ಕಟ್ಟಿದನೇ ।
ಕವಿಧಧ ದುಷ್ಕರ್ಮಮಂ ಕೞಿಲ್ಚಲ್ ಪುಣ್ಯಾ ||
ಸ್ರವದೊಳ್ ನೆರೆಯಲ್ ಭವ್ಯ ।
ರ್ಗವೆ ದಿವಸ ಮೆನಲ್ಕೆ ಬಂದ ನಂದೀಶ್ವರದೊಳ್ || ೧೦೪ ||

ಮ||ಸ್ರ|| ಪಿರಿದುಂ ದೇವೇಂದ್ರನೊಳ್ ಮಚ್ಚರಮಿದೆನೆ ಚೈತ್ಯಾಲಯಂ ಮಂ ।
ದರಚೈತ್ಯಾವಾಸ ಮಾಗಲ್ಕುಪವನಚತುರಾಶಾಸರೋಮಧ್ಯಕೇಳೀ ||
ಧರಣೀಭೃಚ್ಚೈತ್ಯಗೇಹಾವಳಿ ನಿರುಪಮನಂದೀಶ್ವರದ್ವೀಪಚೈತ್ಯೋ ।
ತ್ಕರಮಾಗಲ್ ಪೆಂಪಿನಷ್ಟಾಹ್ನಿಕದ ಮಹಿಮೆಯಂ ಮಾಡಿದಂ ಪದ್ಮರಾಜಂ || ೧೦೫ ||

ವ|| ಅಂತು ನಿರ್ವರ್ತಿತನಂದೀಶ್ವರಪರ್ವಾಪೂರ್ವ ಮಹಾಮಹನಾಗಿ ಬಹಿರುದ್ಯಾನದಿಂ ಪುರಾಭಿಮುಖನಾದ ಸಮಯದೊಳ್ ಒರ್ವದೂತ ನತಿತ್ವರಿತಗತಿಯಿಂ ಬಂದು ಸರ್ವಾಂಗಾಲಿಂಗಿತಮಹೀತಳ ನಾಗಿಂತೆಂದಂ.

ಉ|| ದೇವ ಭವದ್ವಿರೋಧಿನರಪಾಳರ ದೇಶದಶೇಷವಸ್ತುವಾ ।
ಹಾವಳಿ ಯೆಲ್ಲಮಂ ನೆಱೆಯೆ ಸೂಱೆಯು ನೀಳ್ಕುಳಿಗೊಂಡು ಚಂಪೆಯೊಳ್ ||
ತೀವಿ ತದೀಶನಂ ಸೆಱೆಗೆದಂದಿಳೆಯೀಂದುದೆನಲ್ ಪುಳಿಂದರೆಂ ।
ಮೀವಿಷಯಕ್ಕೆ ದಾೞಿಯಿಡಲುಜ್ಜುಗದಿಂದಿರೆ ಮಿಕ್ಕ ಸೊರ್ಕಿನಿಂ || ೧೦೬ ||

ಕಂ|| ಚರರಱಿಪೆ ಚತುರ್ಬಲಮಂ ।
ನೆರಪುತ್ತುಂ ಭರದೆ ಸಿಂಹವರ್ಮಧರಾದೇ ||
ವರ ಸೇನಾಪತಿ ಚಂಪಾ ।
ಪುರಮಂ ಪರಿಯಿಟ್ಟು ಮುತ್ತಿದಂ ಮೂವಳಸಿಂ || ೧೦೭ ||

ವ|| ಅಂತು ಗಾಳಿಗಂ ನುಸುಳಲ್ಬಾರದಂದದಿಂ ಸಂದಣಿಸಿ ಮುತ್ತಿ ಕೋಂಟೆಯಂ ಪತ್ತಲ್ವಳಿ ಪಗುರ್ವಿನ ದೋರ್ವಲದ ಪೆರ್ವಲಮಂ ಕಂಡಡವಿಯೆಲ್ಲಮಂ ಸುಟ್ಟುರೆಯ ಮಸಕದಿಂ ಸುೞಿದು ಸುತ್ತಿ ಸುಡುವ ಬೆಟ್ಟವೇಸಗೆಯ ಬೇಗೆಗಿರ್ಚಿನ ಬಳಸಿಂಗೊಳಗಾದಸಿಂಗದ ಸಂಗಡದಂತೆಯುಂ ಕಾಡಾನೆಯ ಕಡುಪಿನಂತೆಯುಂ, ಪೆರ್ವುಲಿಯ ಪಿಂಡಿನಂತೆಯುಂ, ಕಾಡೆಮ್ಮೆವೋರಿಯ ಹಾರಿಯಂತೆಯುಂ, ಪಂದಿಯ ಗೊಂದಳದಂತೆಯುಂ, ಅಮ್ಮಾವಿನ ತೋಮೆಯಂತೆಯುಂ, ತೋಳದ ಗೂಳೆಯದಂತೆಯುಂ, ಎತ್ತಲುಂ ಮಿಡುಂಕಲ್ಪಡೆಯದೆ ಸಿಡಿಮಿಡಿಗೊಂಡು ಸಿಡಿದು ಸಿಡಿಲೇಱಿಗ್ಗಿಯೆದರ್ದು ಪಲ್ಗಿಡಿದು ಮಾಮಸಕಂಮಸಗಿ ಮುನ್ನಾರ್ಗ ಮೊಳಸೋರದಗ್ಗಲಿಸಿದ ಮದದಿಂ ಮೇಗುಂ ಮೆಯ್ಸರಿಯದೆ ತಮ್ಮೊಳ್ ಪರಿಚ್ಛೇದಿಸಿ.

ಮ॥ ರಸೆಯಂ ಪೊಕ್ಕುಱಿದಿರ್ದ ದಾನವಚಯಂ ದೇವೇಂದ್ರನೊಳ್ ಕಾದುವೇ ।
ರ್ವೆಸದಿಂ ದರ್ಪಿಸಿ ಬಂದುದೋ ರವಿಯ ಮೇಲೆತ್ತಿಂದುದೋ ದುಸ್ತಮಃ ॥
ಪ್ರಸರಂ ತಾರ್ಕ್ಷ್ಯನ ನಿಕ್ಕಲುಕ್ಕಿರ್ದುದೊ ಕಾಳವ್ಯಾಳಜಾಳಂ ವಿಗು ।
ರ್ವಿಸಿತೆಂಬಂತೆ ಪುಳಿಂದಸೇನೆ ಪೊಱಮಟ್ಟತ್ತಾ ಪುರದ್ವಾರದಿಂ ॥ ೧೨೮ ॥

ವ॥ ಅಂತು ಪೊಱಮಟ್ಟು ಅಗುರ್ವು ಮದ್ಭುತಮುಮಾಗೆ ತಾಗಿ ತಳ್ತಿಱಿವಾಗಳ್.

ಮ॥ ಅದನೇವೇೞ್ದಪೆ ನೀಗಳಾಸಮಯದೊಳ್ ಪತ್ತಿರ್ದ ಸೇನಾಸಮು ।
ದ್ರದದಂದೇಶಮಹೌರ್ವದುಗ್ರಸುಭಟಜ್ವಾಲಾಳಿಯಸ್ತ್ರಸ್ಫುಲಿಂ ॥
ಗದ ಕೋಳ್ಗೆೞ್ದುದಿಲ್ಲ ತನ್ನಗರಕೋಟಾವೇದಿಕಾದ್ವಾರಮಾ ।
ರ್ಗದಿ ನುರ್ಬಿಂ ಪರಿದಾಂಪ ಲುಬ್ಧಕವಿಜೃಂಭದ್ವಾಹಿನೀಸಂಚಯಂ ॥ ೧೨೯ ॥

ವ॥ ಅಂತು ಗಾಳಿಗಿದಿರ್ಚಿದ ಮೇಘಾಳಿಯಂತೆ ಬೇಡವಡೆ ಯುಱುಕ್ಕಾಡಿ ಪೋಗೆ ಚಂಪಾಪುರಮಂ ಪೊಕ್ಕು ತತ್ಪುರಾಧಿಪಂ ದೇವರ ದಿಗ್ವಿಜಯದಿಂತೊಟ್ಟು ಮೂವಿಡಿವಟ್ಟಿರ್ಪನಪ್ಪುದಱಿಂ ಸೆಱೆಯುಂ ಬಿಟ್ಟಲ್ಲಿಯೆ ನಿಲಿಸಿ ಕಿರಾತಕರ್ ತಂದೊಟ್ಟಿ ಬೆಟ್ಟದಂತಿರ್ದ ಸಾರದ್ರವ್ಯಸಂಚಯಕ್ಕೆ ಭಂಡಿಯುಂ, ಕೊಟ್ಟಗೆಯತ್ತುಂ, ಪೊಟ್ಟಿಯುಂ, ಪೊಱೆಯಾಳುಂ, ನೆಱೆಯದೆ ಚಾತುರ್ಬಲದ ತಲೆಪೊರೆಯೊಳ್ ತಂದಿಂದೀಗಳ್ ನಿನ್ನ ಪಾದಪದ್ಮಮಂ ಕಾಣಲ್ ಬರುತಿರ್ದಪ ನೆಂದು ಪತ್ತ್ರಮಿಂತೆಂದಂ.

ಶಾ॥ ದೇವರ್ ದಿಗ್ವಿಜಯಂಗೆಯುತ್ತಖಿಳಧಾತ್ರೀನಾಥರೊಳ್ ಕೊಂಡ ನಾ ।
ನಾವಸ್ತೂತ್ಕರದಿಂದನೇಕಗುಣ ಮಿಂತೀವಸ್ತು ವಂತಾದೊಡೇ ॥
ನೀವರ್ತ್ಥಿಜನಕ್ಕಣಂ ತಣಿಯದಿರ್ಪ ನಿನ್ನ ಕೆಯ್ಯೊಕ್ಕೆಡಾ ।
ದೇವಾದ್ರೀಂದ್ರ ಮಣೂಪಮಾನ ಮೆನೆ ಷುತ್ತಿನ್ನಾವುದುಂ ದೊಡ್ಡಿತೇ ॥ ೧೩೦ ॥

ವ॥ ಎಂದು ಬಿನ್ನವಿಸಿ ಮಾಣ್ದ ದೂತನ ಮಾತಂ ಮನದೆಗೊಂಡು ತುಷ್ಟಿದಾನಂಗಳಿಂದವನಭೀಷ್ಟಮಂ ತೀರ್ಚಿ ತದುದ್ಯಾನಬಾಹಿರವಾಹಳೀಪ್ರದೇಶಕ್ಕೆ ವಂದು ಸಾಷ್ಟಾಂಗಪ್ರಣತಿಪೂರ್ವಕಂ ಕಾಣ್ಕೆಗೊಟ್ಟು ಪೊಡೆವಟ್ಟ ಸಿಂಹವರ್ಮನುತ್ತಮಾಂಗದೊಳ್ ಪದಮಿಟ್ಟು ತಂದು ಸಂದಳಿಸಿ ಗೊಂದಳಂಗೊಳಿಸಿದ ವಸ್ತುವಾಹನಾದಿಗಳಂ ಬೇಱೆವೇಱೆ ವಿವರಿಸಿ ನೋೞ್ಪಾಗಳ್ ಸಂತೋಷಗೊಂಡು.

ಚಂ॥ ಎಣಿಸುವೊಡಂಹದೊಂದೆರಡುಮೂಱಱ ಲೆಕ್ಕಮೆ ಲಕ್ಷಕೋಟಿಯಿಂ ।
ಗಣಿಯಿಸುವಾನೆಯೊಟ್ಟಿಯ ತುರಂಗದ ವೇಸರಿಯುಷ್ಟ್ರಯಾಕಳೊ ॥
ಳ್ಗಣಿಕೆಯರಸ್ತ್ರವಸ್ತ್ರಮಣಿಕಾಂಚನಭೂಷಣಪೂರ್ಣಪೇಟಿಕಾ ।
ಗಣ(ವರ)ಕುಪ್ಯಸಾರಧನದೋಳಿ(ಗಳೆ)ಣ್ದೆಸೆಗೆಲ್ಲ ಕಣ್ಬೊಲಂ ॥ ೧೩೧ ॥

ವ॥ ಅಂತು ತೋರ್ಕೆಗಳುಂಬಮು ಮಾದನೇಕಧನಜೀವಧನಂಗಳುಮಂ ತಂದ ಸೇನಾನಿಯ ಸಾಹಸಮಂ ವೈಶ್ರವಣಾಮಾತ್ಯನುಂ, ತಾನು ಮೋರೊರ್ವರೊಳ್ ಮಗುೞ್ಚಿಮಗುೞ್ಚಿ ನುಡಿಯುತ್ತುಂ ಮಂಗಳಾನಕರವಂಗಳ್ ಮೊೞಗೆ ಪೊೞಲಂ ಪುಗುವಾಗಳ್.

ಚಂ॥ ಅತನುಗುಣೋನ್ನತಂ ವಿನತಶತ್ರುಕುಲಂ ಸುಕುಲಪ್ರಭೂತಿ ಸಂ ।
ಗತಮಹಿಮೋತ್ತರಂ ವಿತರಣಪ್ರಥಿತಂ ಕಥಿತಪ್ರಭಾವಸ ॥
ನ್ನುತಜಿನಮಾರ್ಗಧರ್ಮಚರಣಂ ಕರಣತ್ರಯಶುದ್ಧನೆಂದದೇಂ ।
ಸ್ತುತಿಯಿಸಿದತ್ತೊ ಸಂತಸದೆ ಪೌರಜನಂ ಪ್ರಭುವಂಶಮೋರುವಂ ॥ ೧೩೦ ॥

ಗದ್ಯ

ಇದು ಸಮಸ್ತಭುವನಜನಸಂಸ್ತುತಜಿನಾಗಮಕುಮುದ್ವತೀ
ಚಾರುಚಂದ್ರಾಯಮಾಣಮಾನಿತಶ್ರೀ ಮದುಭಯಕವಿ ಕಮಳಗರ್ಭ
ಮುನಿಚಂದ್ರಪಂಡಿತದೇವಸುವ್ಯಕ್ತಸೂಕ್ತಿಚಂದ್ರಿಕಾಪಾಶಪರಿಪುಷ್ಟಮಾನಸಮರಾಳ
ಗು ಣ ವ ರ್ಮ ನಿ ರ್ಮಿ ತ ಮ ಪ್ಪ
ಪುಷ್ಪದಂತ ಪುರಾಣದೊಳ್
ನಾಯಿಕಾಭ್ಯುದಯವರ್ಣನಂ
ನಾಮ
ತೃತೀಯಾ ಶ್ವಾಸಂ

---

# ಪುಷ್ಪದಂತ ಪುರಾಣಂ

## ಚತುರ್ಥಾಶ್ವಾಸಂ

ಕಂ|| ಶ್ರೀಜಿನಪದನಖಮುಕುರಸ ।
ಮಾಜದೊಳೋರಂತೆ ನೋಡಿ ನಿಚ್ಚಂ ಕೆಯ್ಗ ॥
ಯ್ದಾ ಜಗದೊಳ್ ಸದ್ದೃಷ್ಟಿಗೆ ।
ರಾಜಿಸುವಂ ಪ್ರಭುಗುಣಾಬ್ಜವನಕಳಹಂಸಂ || ೧ ||

ವ|| ಎಂದು ಪೊಗೞುತ್ತುಮಲ್ಲಲ್ಲಿ ನಿಂದು ನೋೞ್ಪ ಪುರಜನದ ಗೊಂದಣದಿ ನೊಂದಿ ಸೊಗಯಿಸುವ ವಿಪಣಿವೀಥಿಯೊಳಗನೇಕಮಣಿತೋರಣಂಗಳಂ ನುಸುಳುತ್ತರಮನೆಗೆ ವಂದು ಚಂಪಾಪುರದ ಸೂಱೆಯಿಂ ಬಂದ ಸಮಸ್ತವಸ್ತುವಾಹನವಧೂಸಮೂಹಮಂ ಗೃಹಮಹತ್ತರಂಗೆ ಕೆಯ್ಕೊಳಲ್ವೇೞ್ದನಂತರಂ ಸಿಂಹವರ್ಮನ ನನೂನಸನ್ಮಾನದಾನದಿಂ ಸಂತೋಷಂಬಡಿಸಿ ಬೀಡಿಂಗೆ ಕಳಿಪಿ ಸುಖದಿ ನಿರೆ.

ಕಂ|| ಪರಿಜನಕೆ ಹರ್ಷಗರ್ಭಂ ।
ಪರಭೂಮಿಗೆ ಭೀತಿಗರ್ಭ ಮಧಿಪಜಯಶ್ರೀ ॥
ಗರಿಜ್ಯೈತ್ರಕೇಳಿಗರ್ಭಂ ।
ನಿರುತಂ ನೆಲಸಲ್ಕೆ ನೆಲಸಿತರಸಿಯ ಗರ್ಭಂ || ೨ ||

ಕಿಡೆ ಮಧ್ಯದ ವಳಿರೇಖೆಗ ।
ಳೊಡರಿಸೆ ತೀರದ ಸಮೃದ್ಧಿ ಪುಟ್ಟೆ ಗುರುತ್ವಂ ॥
ಜಡೆಗತಿಗೆ ಗಾಳಿಯಲಸಿಂ ।
ಗೆಡೆಯಾಗಿರೆ ಬರ್ಪ ತೊಱೆಯ ನಂಗನೆ ಪೋಲ್ತಳ್ || ೩ ||

ಚಂ|| ಒಳಗೆ ಸಮಸ್ತಭೂಭೃದಧಿಕಂ ಪ್ರಬಳಂ ಮನುಜೇಂದ್ರನಂದರಂ ।
ಬಳೆಯೆ ತೞುಂಬಿ ಸಂಚಳಿಸದಿರ್ದಪುದೀನಡು ವೆಂಬ ಕೌತುಕಾ ॥
ಕುಳಿತರ ದುಷ್ಟದೃಷ್ಟಿವಿಷರಕ್ಷೆಗಿದಂಜನಲೇಖೆ ಯೆಂಬ ಬ ।
ಳ್ವಳಿಕೆಯ ನಾಳ್ದು ತಾಳ್ದಿದುದು ಕಾಂತೆಯ ಕರ್ಗಿದ ಬಾಸೆ ದೞಸೆಯಂ || ೪ ||

ವ|| ಅದಲ್ಲದೆಯುಂ.

ಮ|| ಉದರೋದ್ದೇಶದೊಳಿರ್ಪ ಮಂಡಳಿಕಮಾರ್ತಂಡಂಗೆ ಮೆಯ್ದೋಱಲ ।
ಣ್ಮದೆ ಮಟ್ಟಂ ಪೊಱಮಟ್ಟು ನೆಟ್ಟನೆಸೆದಿರ್ದೀನಾಭಿರಂಧ್ರಪ್ರದೇ ॥
ಶದೆ ನೋಡುತ್ತಿದೆ ನೋಡೆ ಚಿತ್ತದ ತಮಂ ವಕ್ಷೋಜದೊತ್ತಿಂಗೆನಲ್ ।
ಸುದತೀರಾಜಿತರೋಮರಾಜಿ ನಿಮಿರ್ದತ್ತುತ್ತಕೋಮಳಶ್ಯಾಮಳಂ || ೫ ||

ಚಂ|| ಒದವಿದ ಲೋಕಲೋಚನಸುಖಾಮೃತಮಂ ಕಱೆವೊಳ್ಮುಗಿಲ್ ಮುಸುಂ |
ಕಿದ ಶಿಖರಂಗಳೊಪ್ಪುತಿವೆ ಕಾಮನ ಕಾಂಚನಭೂಧರಪ್ರದೇ ||
ಶದೊಳೆನೆ ಕಂಬುಕಂಧರೆಯ ಕರ್ಬೊಗರೇಱಿದ ಚೂಚುಕಂಗಳೊ |
ಪ್ಪಿದುವು ಪೊದಟ್ಟಿ ನುಣ್ಪುಮರ್ದ ಕೊರ್ವಿದ ಪೀನಕುಚಪ್ರದೇಶದೊಳ್ || ೬ ||

ವ|| ಮತ್ತಂ.

ಉ|| ಭಾವೆ ನಿಜಾತ್ಮಜಂ ತೊಳಪ ಕೀರ್ತಿಯಿ ನೆನ್ನ ನದಿರ್ಪ ದಂತೆವೋಲ್ |
ಕಾವುದು ದೇವಿ ನೀಂ ದಿಟಕೆನುತ್ತ ಮನಾಗತಬಾಧೆಗಳ್ಗೆ ಬಂ ||
ದಾವಿಧು ವೀವಧೂಮುಖದೊಳಿರ್ಪ ನೋಲಗಿಸುತ್ತು ಮುಂಬಿನಂ |
ಭಾವಕರಂ ಮನಂಗೊಳಿಸಿದತ್ತು ಬೆಳರ್ತ ಮೊಗಂ ಮೃಗಾಕ್ಷಿಯಾ || ೭ ||

ವ|| ಆಸಮಯದೊಳ್.

ಕಂ|| ಸುರಕುಜದ ವನಮುಮಂ ಸಿ |
ದ್ಧರಸದ ಪರಿಕಾಲ ನಿಂದ್ರಧೇನುವ ಪಯಮಂ ||
ಪರಿವಾರಜನಕೆ ಪದಪಿಂ |
ವಿರಚಿಸುವೀಬಯಕೆ ದೇವಿಗಾಯ್ತುಳವಸಿಱಿಯೊಳ್ || ೮ ||

ಧರಣಿಯ ಸೀಮೆಯ ನಾಲ್ಕುಂ |
ಪರಿಧಿಯ ನವಲೋಕಿಸಲ್ ತ್ರಿಷಷ್ಟಿಶಲಾಕಾ ||
ಪುರುಷಪ್ರತತಿಯ ಕಥೆಯಂ |
ಪರಿಭಾವಿಸಲಾಯ್ತು ದೌಹೃದಂ ನೃಪಸತಿಯೊಳ್ || ೯ ||

ವ|| ಅಂತು.

ಮ|| ಪ್ರಣುತೋದಾತ್ತನ ಗರ್ಭದರ್ಭಕನ ಸರ್ವೌದಾರ್ಯಶೌರ್ಯಾದಿಸ |
ದ್ಗುಣಮಂ ಸೂಚಿಸಲಾದು ಮಂದರಸಿಯೊಳ್ ಭೂಕಂಟಕಧ್ವಂಸಕಾ ||
ರಣಹಾಳಾಹಳ ಮುದ್ಗತಾರಿ[1]ಜಯವತ್ಕೋಳಾಹಳಂ ಲೋಕರ |
ಕ್ಷಣಕೇಳೀಜಯಕಾರಣೀಕೃತಮಹಾಕೌತೂಹಳಂ ದೌಹಳಂ || ೧೦ ||

ವ|| ಅದಲ್ಲದೆಯುಂ.

ಕಂ|| ತನಗೆ ಪತಿಯಪ್ಪ ಯತ್ನತೆ |
ಗನುನಯದಿಂ ದವನಿವನಿತೆ ಯಟ್ಟಿದ ರಕ್ಷಾಂ ||
ಜನಗುಟಿಕೆಯ ನೊಳಪೊಯ್ದಪ |
ಳೆನೆ ಮಾಡಿವಳರಸಿ ಸುರಭಿಮೃತ್ಸೇವನೆಯಂ || ೧೧ ||

[1] ಭಯ.

ವ|| ಅಂತಾ ಕಾಂತೆಯ ಗರ್ಭಚಿಹ್ನಂಗಳಿನಿಸುಂ ಪ್ರಸನ್ನಂಗಳಾಗೆ.

ಕಂ|| ಪರಿವಾರದ ಕರ್ಣಪರಂ ।
ಪರೆಯಿಂ ವಲ್ಲಭೆಯ ಗರ್ಭವೃತ್ತಕಮ ನಿಳೇ ||
ಶ್ವರ ನಱಿದು ಮಂತ್ರಿಮುಖ್ಯಂ ।
ಬೆರಸಂತಃಪುರಕೆ ಬಂದು ಸಂತಸದಿಂದಂ || ೧೨ ||

ಮ||ಸ್ರ|| ವಿವಿಧಾತೋದ್ಯಸ್ವನಂಗಳ್ ದೆಸೆಗೆಸೆವಿನೆಗಂ ಬಾಯಿನಂಗೊಟ್ಟು ನಾನಾ ।
ನವರತ್ನಸ್ವರ್ಣವಸ್ತ್ರಂಗಳಿ ನಖಿಳಜನಂ ಕೂಡೆ ಸಂಪನ್ನ ಮಪ್ಪ ||
ನ್ನ ವಿಳಾಚಕ್ರಂ ಮನಂಗೊಳ್ವಿನ ಮೆಸೆದು ಯಥಾಪ್ರಸ್ತುತೌಚಿತ್ಯದಿಂ ಪುಂ।
ಸವನಾದ್ಯು[1]ತ್ಸಾಹಮಂ ಮಾಡಿದ ನಭಿನುತಮಂ ಪದ್ಮರಾಜಾಧಿರಾಜಂ || ೧೩ ||

ವ|| ಅಂತುಮಾಡಿ.

ಕಂ|| ವನಿತೆಯ ತನುರಕ್ಷೆಗೆ ತ ।
ಕ್ಕನುಚರಜನ ಕುಶಲಜನ ಸುಹೃಜ್ಜನ ಧಾತ್ರೀ ||
ಜನ ಸೂತೀಜನ ಸಖಿಜನ ।
ಮೆನಿತನಿತುಮ ನವನಿಪತಿ ನಿಯೋಜಿಸಿ ತಳರ್ದಂ || ೧೪ ||

ವ|| ಅಂತನಂತರಂ.

ಚಂ|| ಅಲಸುವ ಮೆಯ್ಯು ಮಾಗುಳಿಸು ಮಾನನಮುಂ ನಯದಿಂ ತೊಟಿಲ್ವ ಕ ।
ಣ್ಮಲರು ಮನಾಕುಳಂ ತಳೆದ ತೆಳ್ವರಿಜುಂ ಚಿಗುರೇಱುತಿರ್ಪ ಮೇ ||
ಖಳೆಯ ತೊಡರ್ಪು ಕಣ್ಗೊಳಿಪ ಯೌನದ ಮೆಲ್ಪು ಮಪೂರ್ವಭಾವಮಂ ।
ಲಲನೆಗೆ ತಂದು ವಂದನುದಿನಂ ಬಳೆಯುತ್ತಿರೆ ಗರ್ಭದರ್ಭಕಂ || ೧೫ ||

ಕಂ|| ಕಿಡೆ ಕೃಶತೆ ಪೂರ್ಣಮಾಗಿಯು ।
ಮುಡುಪತಿಯಂತೆಱಗಿಸಿತ್ತು ಜಗಮಂ ದಿಟದಿಂ ||
ಬಡತನದೊಳುಂತೆ ಸೊಗಯಿಪ ।
ನಡು ತನಗಭಿವೃದ್ಧಿ ಯಾಗೆ ಸೊಗಯಿಪು ದರಿದೇ || ೧೬ ||

ವ|| ತತ್ಸಮಯದೊಳ್.

ಕಂ|| ಸುದತಿ ಘನತೋದ್ಯದಳಿಗೀ ।
ತದ ಮಾದ್ಯದ ಹೃದ್ಯದುಚಿತಪತ್ರದ ರಸಚಿ ||
ತ್ರದ ಮಾಳಾಕರ್ಮದ ನ ।
ರ್ಮದ ಸಖಿಯರ ಬಿನದದಿಂದ ಮಲಸಿಕೆಗಳೆವಳ್ || ೧೭ ||

[1] ಸುತ್ಸಾಹಸಂದೋಹಮ ನಭಿನುತಮಂ ಮಾಡಿದಂ ಪದ್ಮರಾಜ.

ವ|| ಮತ್ತಂ.

ಚಂ|| ಅರಗಿಳಿವೆಣ್ಣ ನೊರ್ಮೆ ನಲಿದೋದಿಸಿ ಸೋಗೆಯ ನೊರ್ಮೆ ನೃತ್ಯದೊಳ್ ।
ವಿರಚಿಸಿ ಹಂಸಗರ್ಭಿಣಿಯ ನೊರ್ಮೆ ಗತಿಶ್ರಮ ಮಾಜಿಸಿ ಬೀಸಿ ಪೆ ॥
ಣ್ಬುರುಳಿಯ ನೊರ್ಮೆ ಮೆಲ್ನುಡಿಯಿ ನಾಜಿಸಿ ಕಾಂತೆ ವಿನೋದದಿಂ ಗೃಹಾಂ ।
ತರದೊಳಗಿಂತು ಪೊೞ್ತುಗಳೆವಳ್ ಗುರುಗರ್ಭಭರಾಲಸತ್ವದಿಂ ॥ ೧೮ ॥

ಚಂ|| ಬಲಿಕುಸುಮಂಗಳೊಳ್ ನಲಿವ ಭೃಂಗಮ ನಂಗನೆ ನೋಯೆ ಮೆಟ್ಟುಗುಂ ।
ತೊಲತೊಲಗೆಂದು ಚಪ್ಪರಿಸಿದಪ್ಪಳೊ ಪಾದಪಯೋಜಲಕ್ಷ್ಮಿ ಮೇಣ್ ॥
ನೆಲನ ನನಂಗ ನುಗ್ಗಡಿಸಿದಪ್ಪನೊ ಪೇೞಿಮೆನೆ ನೂಪುರಂ ತಗು ।
ಳ್ದುಲಿಯೆ ಲತಾಂಗಿ ಗರ್ಭಭರದಿಂ ಸುೞಿವಳ್ ನವರತ್ನರಂಗದೊಳ್ ॥ ೧೯ ॥

ಚಂ|| ಗುರುತರಗರ್ಭದೊಳ್ ತನು ತನುತ್ವಮ ನಾಂತೊಡೆ ರತ್ನರಂಜಿತಾ ।
ಭರಣಭರಕ್ಕೆ ಮೆಯ್ದೆಗೆದುಪಾರ್ಜಿಸಿದಳ್ ಸುಮನೋಲಸದ್ಗುಣಾ ॥
ಭರಣಮ ನಾತ್ಮಗರ್ಭದೊಳಗಿರ್ಪ್ಪಸುತಂ ಸುಮನೋಲಸದ್ಗುಣಾ ।
ಭರಣ ನೆನಿಪ್ಪುದಂ ಕುಸುಮಕೋಮಳೆ ಭೂಮಿಗೆ ಸೂಚಿಪಂದದಿಂ ॥ ೨೦ ॥

ಕಂ|| ಅಮೃತೋದ್ಭವ ಮನಿಪಾಹಾ ।
ರಮಿರಲ್ ಸೇವಿಸುವರಾರೊ ಕನಕಮ ನೆನೆ ಹೇ ॥
ಮಮಯಗ್ರೈವೇಯಕಭಾ ।
ರಮ ನೊಲ್ಲದೆ ತಳೆದಳರಸಿ ಮುತ್ತಿನ ಸರಮಂ ॥ ೨೧ ॥

ವ|| ಅಂತನೇಕವಿನೋದದೊಳ, ಮಕೃತಪೂರ್ವರಸದೊಳಂ, ನಿರ್ಭರಪ್ರಾದುರ್ಭಾವದಿವಸಂಗಳಂ ಕಳಿಪುತ್ತಿರ್ದು ಸಂಪ್ರಾಪ್ತಪ್ರಸವಸಮಯದೊಳ್ ನಿಖಿಳಶೋಭನವಾರಮಪ್ಪ ವಾರಮು, ಮಖಿಳಮಂಗಳಾಗ್ರೇಸರಮಪ್ಪ ವಾಸರಮು, ಮಶೇಷಕಲ್ಯಾಣಪಾತ್ರಮುಮಪ್ಪ ನಕ್ಷತ್ರಮುಂ, ನಿಃಶೇಷಮಾಂಗಲ್ಯಕರಣಮುಮಪ್ಪ ಕರಣಮುಂ, ಸಕಳಶ್ರೇಯೋನಿಧಿನಿಯೋಗಮಪ್ಪ ಯೋಗಮು, ಮೊಂದಿಬರ್ಪ್ಪುದುಂ ಗಣಕಸಂಕುಳಂ ಸಂಕುಮಂ ಪೂಜಿಸಿ ಸಮಾಹಿತಚಿತ್ತರಾಗಿ ಪಾರ್ದಿರೆ.

ಮ||ಸ್ರ|| ವಿಳಸನ್ನಿತ್ಯೋದಯಾಳಂಕೃತ ನಸಮಹಯಪ್ರೌಢ ನಕ್ಷೂಣಲಕ್ಷ್ಮೀ ।
ನಿಳಯಂ ಸನ್ಮಂಡಳಾಗ್ರಸ್ಫುರಿತಕರಹತೋದ್ವೃತ್ತರಾಜಂ ಮಹೀಭೃ ॥
ತ್ಕುಳಮಸ್ತನ್ಯಸ್ತಪಾದಂ ಸಮುದಿತವಿನತಾನಂದನಂ ವೃತ್ತವೀತಾ ।
ಖಿಳದೋಷಂ ದ್ಯೋತಿತಾಶಾಂಬರಮುಖ ನೊಗೆದಂ ಭವ್ಯಲೋಕೈಕಮಿತ್ರಂ ॥ ೨೨ ॥

ವ|| ಆಗಳ್.

ಕಂ|| ಎಸಗಿದುದು ತೆಂಬೆಲರ್ ಘೂ ।
ರ್ಣಿಸಿದುದು ಪಲತೆಱದ ಮಂಗಳಾನಕನಿನದಂ ॥
ವಸುಧಾಜನದಿಂ ದಾದಂ ।
ಪಸರಿಸಿತೆತ್ತಂ ಪೊದಱ್ದು ಜಯಜಯಘೋಷಂ ॥ ೨೩ ॥

ಮ॥ ನೆರವಾದಂ ನಮಗೊರ್ವ ನುರ್ವರೆಯು ನಾನಲ್ಕೀಗಳೆಂದಷ್ಟದಿ ।
ಕ್ಕರಿಗಳ್ ರಾಗಿಸಿ ತತ್ಕುಮಾರಕನ ಜನ್ಮೋತ್ಸಾಹತೂರ್ಯಸ್ವನೋ ॥
ತ್ಕರಮಂ ಭಾವಿಸಿ ಕೇಳಲಾಸಮಯದೊಳ್ ನಿಷ್ಕಂಪಕರ್ಣಂಗಳಿಂ ।
ಗಿರಿ ಗಂಡಸ್ಥಳದಾನಲೀನಮಧುಪಂ ತಾಳ್ದಿತ್ತು ಸೌಸ್ಥಿತ್ಯಮಂ ॥ ೨೪ ॥

ವ॥ ಮತ್ತಂ.

ಚಂ॥ ಅವಿರಳ ಮಾದುದಂತಪುರದೊಳ್ ಕಡೆಯಿಕ್ಕುವ ತೋಱಮುತ್ತು ಸೂ ।
ಸುವ ಪಟವಾಸ ಮಾವರಿಪ ಪೂವಲಿ ಪೊಣ್ಮುವ ಮಂಗಳೋಕ್ತಿ ಕ ॥
ಟ್ಟುವ ಗುಡಿ ಪೊಯ್ವ ಬದ್ದವಣ ಮುತ್ತುವ ಬೆಳ್ಗೊಡೆ ಯಾರ್ವ ವಂದಿ ಪು ।
ಟ್ಟುವ ಜನಸಂಭ್ರಮಂ ಕುಣಿವ ಗೊಂದಣಮೆಕ್ಕಣ ಮೀವ ಬಾಗಿನಂ ॥ ೨೫ ॥

ವ॥ ಆಗಳೊರ್ವಳಂತಃಪುರವಿಲಾಸಿನಿ ತದುತ್ಸವಮ ನವನೀಪತಿಗಱಿಪಲುತ್ಸುಕೆ ಯಾಗಿ.

ಮ॥ ವಸನಂ ಮೇಖಳೆಯೊಳ್ ಸಹರ್ಷವಚನಂ ವಕ್ತ್ರಾಬ್ಜದೊಳ್ ವೇಗವಿ ।
ನ್ಯಸನಂ ಪಾದದೊ ಳುತ್ತರೀಯವಸನಂ ದೋರ್ವಲ್ಲಿಯೊಳ್ ಸಾರ್ದ್ರನಿ ॥
ಶ್ವಸನಂ ನಾಸಿಕೆಯೊಳ್ ಮುದೋಲ್ಲಸನ ಮಾಲೋಲಾಕ್ಷಿಯೊಳ್ ಕೂಡೆ ವ ।
ರ್ತಿಸುವನ್ನಂ ಪರಿತಂದು ನಿಂದೆಱಗಿದಳ್ ಭೂಪಾಂಘ್ರಿಗಾಸ್ಥಾನದೊಳ್ ॥ ೨೬ ॥

ವ॥ ಅಂತೆಱಗಿ.

ಕಂ॥ ಬಿನ್ನಪ ಮವನೀವಲ್ಲಭ ।
ನಿನ್ನ ಮಹಾದೇವಿ ಸಕಳಭೂವಳಯದ ಭಾ ॥
ಗ್ಯೋನ್ನತಿಯಿಂದಂ ಪಡೆದಳ್ ।
ಸನ್ನುತಶುಭಲಕ್ಷಣಾಭಿನುತನಂ ಸುತನಂ ॥ ೨೭ ॥

ವ॥ ಎಂದು ಬಿನ್ನವಿಸಿ.

ಮ॥ ಒಸೆದೀವಾರ್ತೆಗೆ ಪೂರ್ಣಪಾತ್ರ ಮಿದು ದೇವರ್ ಮನ್ನಿಸಲ್ವೇೞ್ಕುಮೆಂ ।
ದು ಸಮಂತೀೞ್ಕಳಿಗೊಂಡಳಾಕೆ ನೃಪಕಂಠೋದ್ದೇಶದಿಂ ಶ್ರೀವಧೂ ॥
ಹಸನಸ್ಫಾರಮ ನುಲ್ಲಸತ್ತರಳರತ್ನಾಧಾರಮಂ ತಾರಕ ।
ಪ್ರಸರಾಕಾರಮ ನಂಶುಜಾಳಕಲಸನ್ನೀಹಾರಮಂ ಹಾರಮಂ ॥ ೨೮ ॥

ಮಣಿವಿಭೂಷಣವೃತ್ತಂ॥ ಅಂದೆ ವಿಶ್ವಭುವನಂ ತನಗುಂಡಿಗೆಸಾಧ್ಯ ಮಾ ।
ದಂದದಿಂ ಮನ ಮೊೞಲ್ಕೆ ಮಹೀಪತಿ ತೀವಿದಂ ॥
ತಂದು ತನ್ನ ವದನಕ್ಕೆ ವಿಕಾಸಮ ನಕ್ಷಿಗಾ ।
ನಂದಬಾಷ್ಪಮ ಮೊಡಲ್ಗೆ ಬೃಹತ್ಪುಳಕಂಗಳಂ ॥ ೨೯ ॥

ವ॥ ಅಂತನಂತಸಂತೋಷಶಿಖರಿಶೇಖರಾಧಿರೂಢನಾಗಿ ಪದ್ಮರಾಜಂ ತನ್ನಿಂ ದಧಿಕಸಮ್ಮದದ ಪರಮಸುಖಕೋಟಿಯ ನೆಯ್ದುತ್ತು ಮಿರ್ದ ನಿಜಾವಮಾತ್ಯವೈಶ್ರವಣನ ಕೆಯ್ಯಂ ಪಿಡಿದಾಸ್ಥಾನಮಂಟಪದಿಂ ತಳರ್ದು ಪುತ್ರಮುಖಾವಳೋಕನಕುತೂಹಳತೆಯಿಂ ಬರ್ಪ್ಪಾಗಳ್.

ಮ॥ ವಿಳಸದ್ಗೀತರವಂ ಮೃದಂಗನಿನದಂ ಶಂಖಸ್ವನಂ ಸೂತಮಂ ।
ಗಳಪಾಠಧ್ವನಿ ಕಾಹಳಾವಿರುತಿ ಯಾಶೀರ್ವಾದನಾದಂ ನಟ ॥
ಲ್ಲಲನಾನೂಪುರನಾದ ಮೆಂಬಿವು ಪೊದಳ್ದುಜ್ಜೃಂಭಿಸಲ್ ಚಂದ್ರಮಂ ।
ಡಲಲೀಲೋದಯವಾರ್ಧಿಯಂತೆ ರಭಸಂಬೆತ್ತತ್ತು ರಾಜಾಲಯಂ ॥ ೨೦ ॥

ಕಂ॥ ನೆಗೆದುವು ಮನೆಮನೆದಪ್ಪದೆ ।
ಮುಗುಲದ ಕೌಸುಂಭಪಟದ ನೀಲದ ಗುಡಿಗಳ್ ॥
ಸೊಗಯಿಸಿ ಬೆಳ್ಮುಗಿಲಂ ಕೆ ।
ಮ್ಮುಗಿಲಂ ಕಾರ್ಮುಗಿಲ ನೆಸಗಲಾರ್ತುವು ನಭದೊಳ್ ॥ ೨೧ ॥

ಕೆದರಿದ ಪಿಷ್ಟಾತಕಚೂ ।
ರ್ಣದೊಳಂ ಪಟವಾಸಚೂರ್ಣದೊಳ ಮಷ್ಟದಿಶಾ ॥
ವದನ[1]ಮುಮಾ ನಭಮುಂ ಪಡೆ ।
ದುದು ನಾನಾವರ್ಣರುಚಿರರಚ[2]ನಾಚ್ಛವಿಯಂ ॥ ೨೨ ॥

ಮೃಗಮದದ ಯಕ್ಷಕರ್ದಮ ।
ದಗರುವ ಕುಂಕುಮದ ಕದಡುನೀರ್ದಳಿಪದಿ ನೋ ॥
ಲಗಿಸಿದುವು ಸುೞಿವ ತಂಗಾ ।
ಳಿಗೆ ನೃಪಗೃಹವೀಥಿ ಬೆರಕೆಗಂಪಿನ ಸೊಂಪಂ ॥ ೨೩ ॥

ತೊಳಗುವ ತಾರಾತತಿ ಮಾ ।
ರ್ಪೊಳೆಯೆ ಮನಂಗೊಳಿಪ ತಿಳಿಗೊಳಂಗಳ ತೆಱನಂ ॥
ತಳೆದುವು ಬಲಿಗೆದಱಿದ ವಿಚ ।
ಕಿಳದಲರಿಂ ನೀಲಮಣಿಮಯಪ್ರಘಣಂಗಳ್ ॥ ೨೪ ॥

ಒಸಗೆಮರುಳ್ಗೊಂಡಾಡುವ ।
ವಿಸರುಹವದನೆಯರ ನೂಪುರಂಗಳ ದನಿಯಿಂ ॥
ಕುಸುಮೋಪಹಾರದಳಿಗಳ ।
ರಸಿತಂ ದ್ವಿಗುಣಿಸಿತು ನೃಪಗೃಹಪ್ರಾಂಗಣದೊಳ್ ॥ ೨೫ ॥

---

[1] ನಮುಮಂ ನಭಮುಂ,........ರಸನಾಚ್ಛಯಂ. [2] ನೋಚ್ಛ್ರಯಂ.

ಕಂ॥ ಹೃದಯಪ್ರಮೋದಮುದಿರಾ ।
ಮದದಿಂ ಮೆಯ್ಮಱೆದು ಮೋಲುದಂ ಮಱೆದಿರ್ದರ್ ॥
ಡಿದುದು ಪಱೆ ಮಾಣ್ದೊಡಂ ಮಾ ।
ಣದೆ ಮೆಚ್ಚಿದ ತೆಱದಿ ನಾಪ್ತವೃದ್ಧಕದಂಬಂ ॥ ೩೬ ॥

ಮ॥ ಎಳಮಿಂಚಂ ಮಣಿತೋರಣಾಂಶು ಮೊೞಗಂ ವಾದ್ಯಸ್ವನಂ ನೀರದೋ ।
ಪಳಮಂ ಪೂವಲಿ ತಳ್ತ ಕಾರ್ಮುಗಿಲ ನುದ್ಯದ್ಧೂಪಧೂಮಂ ನಿರಾ ॥
ಕುಳದಿಂ ಪೋಲ್ತು ಖರಾಂಶು ಪೊೞೆ ಪಟವಾಸಕ್ಷೋದದಿಂ ಕೇಕಿಸಂ ।
ಕುಳ ಮಾಡಿತ್ತು ನಟೀಕದಂಬ[1]ದೊಡವಂದಭ್ರಾಗಮಭ್ರಾಂತಿಯಿಂ ॥ ೩೭ ॥

ವ॥ ಅಂತು ನಿರ್ಭರಪ್ರಮೋದಪರವಶೀಭೂತಪೌರಜನಕ್ಷೋಭಶೋಭಾವಳಂಬಿಯಾದ ನಿಜ ಗೃಹಮಹೋತ್ಸವಮ ನೀಕ್ಷಿಸುತ್ತು ಮೆಟ್ಟಿಂದು ನೈಮಿತ್ತಿಕನಿರೂಪಿತಶುಭಮುಹೂರ್ತದೊಳನೇಕ ರಕ್ಷಾಪರಿಗ್ರಹಪರೀತಮುಂ ಸಕಳಮಂಗಳಪರಂಪರಾಭಿಜಾತಮು ಮಪ್ಪಭಿನೂತಪ್ರಸೂತಿಕಾನಿಕೇತ ನಮಂ ವೈಶ್ರವಣದ್ವಿತೀಯನಾಗಿ ಪೊಕ್ಕು.

ಚಂ॥ ಎಳವೆಱೆಯಂತೆ ಮಾಣಿಕದ ತಣ್ಜೊಡರಂ ತುದಯಾದ್ರಿಯಿಂದೆ ಮಾ ।
ಗಳೆ ಪೊಱಮಟ್ಟ ಪದ್ಮಸಖನಂತೆ ತಳತ್ತಳಿಪಂಗಕಾಂತಿಯಿಂ ॥
ತಳೆದೆಸೆದಿರ್ಪ ಬಾಲಕನ ಮುಗ್ಧಮುಖೇಂದುವ ನಂದು ನೋಡಿ ಭೂ ।
ತಳಪತಿ ಮಾಡಿದಂ ಸ್ನಪನಮಂಗಳಮಂ ನಿಜಹರ್ಷಬಾಷ್ಪದಿಂ ॥ ೩೮ ॥

ವ॥ ಅಂತು ಕಣ್ಣಾಱೆ ನೋಡಿನೋಡಿ ತದಂಗಸಂಗತಶುಭಲಕ್ಷಣಂಗಳುಂ, ದುಂದುಭಿಗಭೀರ ಘೋಷಮುಂ ತನ್ನುಮ ನವಾತ್ಮನಂ ಮನಂಗೊಳಿಸೆ ತಮ್ಮೊಳೋರೊರ್ವರ್ಗೆ ತೋಱಿ ನಿಧಿಗಂಡ ಬಡವನಂತೆ ಕಡೆಯಿಲ್ಲದುತ್ಸವಕ್ಕೆ ಪಕ್ಕಾಗಿ ತದನಂತರಂ.

ಉ॥ ಎನ್ನಯ ವಂಶ ವೀರಮಣಿಯಿಂ ಕುಳಸಿಂಧುವಿನಂತಿರವ್ಯವ ।
ಚ್ಛಿನ್ನಮು ಮುದ್ಧಗೋತ್ರಕುಭೃದಾಶ್ರಯಮುಂ ಸುಪವಿತ್ರಜೀವನೋ ॥
ತ್ಪನ್ನವಿಲಾಸಮುಂ ಸಕಲಸತ್ಕವಿಸೇವ್ಯಮು ಮಾದುದೆಂದು ಮು ।
ಯ್ವ ನ್ನಡೆ ನೋಡಿದಂ ಪ್ರಸವಪಾಂಡುರತನ್ವಿಯ ನೊಲ್ದು ನೋಡುತುಂ ॥ ೩೯ ॥

ವ॥ ಆಗಳರಸಿ ಲಜ್ಜಾರಸಮ ನಪ್ಪುಕೆಯ್ದಿರ್ಪುದುಂ ಸಚಿವವಚನೋಪರೋಧದಿಂ ಪೊಱಮಟ್ಟು ನೂನದಾನಸನ್ಮಾನದಿಂ ಪ್ರಸೂತಿಕಾಗೃಹನಿಹಿತನಿಖಿಳಜನಮುಮಂ, ದೈವಜ್ಞಜನಮುಮಂ ಮನಮೊ ಸೆದು ಮನ್ನಿಸಿ.

ಉ॥ ಕ್ಷೋಣಿಯೊಳಿನ್ನರಾರೆನೆ ಜನಂ ಪರಿವಾರಜನಕ್ಕೆ ಬಾಂಧವ ।
ಶ್ರೇಣಿಗೆ ವಂದಿಸಂತತಿಗೆ ವಸ್ತುಗಳಂ ತಣಿವನ್ನ ಮಿತ್ತು ಗೀ ॥
ರ್ವಾಣಕುಜಕ್ಕೆ ಲಕ್ಕೆ ಮಿಗಿಲಾಗಿ ಮಹೀಪತಿಜಾತಕರ್ಮಕ ।
ಲ್ಯಾಣವಿಭೂತಿಯಂ ಮೆಱೆದ ನುಣ್ಮೆ ಮಹೋತ್ಸವತೂರ್ಯನಿಸ್ವನಂ ॥ ೪೦ ॥

[1] ದೊಡನಂದಭ್ರಾಗಮ.

ವ|| ಅಂತು ಮೆಱೆದು.

ಮ|| ಚಿರಸಂಬದ್ಧಚಮೂರುಸಿಂಹಚಯಮಂ ಕಾಂತಾರಚಕ್ರಕ್ಕೆ ಪಂ ।
ಜರಪಾರಾವತಕೀರಸಾರಿಕೆಗಳಂ ಕೇಳೀವನಾಂತಕ್ಕೆ ಭೀ ॥
ಕರಕಾರಾಗೃಹನಿಷ್ಠಿತಾರಿನೃಪರಂ ಮುನ್ನಾಳ್ವ ದೇಶಕ್ಕೆ ಬಿ ।
ಟ್ಟಗಸಂ ರಾಗರಸಂ ಮಿಗಲ್ ಕಳುಪಿದಂ ಪುತ್ರೋದಯೋತ್ಸಾಹದೊಳ್ ॥ ೪೧ ॥

ವ|| ತದನಂತರಂ ದೈವಜ್ಞವಿಜ್ಞಾಪಿತದಶಮದಿನದ ಶೋಭನಮುಹೂರ್ತದೊಳೊಸಗೆಯ ನಸ
ದಳಂಮಾಡಿ.

ಹ|| ನಿರುತಂ ಶ್ರೀಗೆ ನಿವಾಸನಪ್ಪ ನಿಧಿರೂಪಂ ತಾನೆ ದೀನಾರ್ಥಿಗ ।
ಪ್ಪ ರಿಪುಪ್ರಾಣಸಮೀರಸಂಹರಣಕೇಳಿಶೀಳ ನಪ್ಪೀತನೊಳ್ ॥
ಕರಮನ್ವರ್ಥ ಮಿದಾದು ಹೆಂದು ವಿಬುಧರ್ ಮೆಚ್ಚಲ್ ಮಹಾಪದ್ಮ ನೆಂ ।
ದರಸಂ ಸೂನುಗೆ ನಾಮಕರ್ಮವ ನತಿಪ್ರಾಗಲ್ಭ್ಯಮಂ ಮಾಡಿದಂ ॥ ೪೨ ॥

ವ|| ಆ ಸಮಯದೊಳ್.

ಉ|| ಅರ್ಥಿಗೆ ಮುನ್ನ ಮೇಂ ತಣಿಸಿದೇನುಮ ನಿತ್ತರೆ ಪೇೞ್ "ಪರೋಪಕಾ ।
ರಾರ್ಥಮಿದಂ ಶರೀರ" ಮೆನಿಪುನ್ನತಿಯಂ ನೆಗೞ್ದಾದ್ಯರಾರೊ ಮ ॥
ತ್ಪ್ರಾರ್ಥಿತಮೆಂದು ಕೌತುಕದಿ ನೀಧರೆ ಬಣ್ಣಿಸೆ ಸೂಱೆವಿಟ್ಟ ನ ।
ರ್ಥಾರ್ಥಿಗೆ ಪೊನ್ನ ಪುಟ್ಟಗೆಯ ರನ್ನದ ರಾಶಿಗಳಂ ಮಹೀಭುಜಂ ॥ ೪೩ ॥

ವ|| ಅಂತು ಮಂಗಳೋಚಿತಕ್ರಿಯಾನಿವಹಮಂ ನಿರ್ವರ್ತಿಸಿ ಸುಖದಿ ನಿರೆ.

ಮ|| ಜನನೀಲೋಚನಕೈರವಕ್ಕತಿವಿಕಾಸಶ್ರೀಯ ನೀಯಲ್ ಸುಹೃ ।
ಜ್ಜನರಾಗಾಮೃತವಾರ್ಧಿಯಂ ಬಳೆಯಿಸಲ್ ವಿದ್ವಿಣ್ಮುಖಾಬ್ಜಕ್ಕೆ ಕುಂ ॥
ದನೊಡೆರ್ಚಲ್ ನೆಲದೇೞಿಗ್ವಾಡಿವದ ಕಾಂತಿಸ್ನಿಗ್ಧಮುಗ್ಧೇಂದು ವೆಂ ।
ಬಿನ ಮಾಳ್ದಂ ಪ್ರತಿವಾಸರೋಪಚಯಮಂ ಲಂಬಾಳಕಂ ಬಾಲಕಂ ॥ ೪೪ ॥

ಕಂ|| ಪರಕಲಿಸಿದ ಕಾಡಿಗೆಯಿಂ ।
ತರುಣನ ನಗೆಮೊಗಮು ಮಳಿಗಳೆಱಿಗಿದಹೇಮಾಂ ॥
ಬುರುಹದಲರಂತೆ ಸೊಗಯಿಸೆ ।
ಪರಿಭವಿಸಿದ ನಂದು ಪೂರ್ಣಶಶಿಮಂಡಲಮಂ ॥ ೪೫ ॥

ಕನಕಾಂಬುಜಕುಟ್ಮಲಮಧು ।
ವ ನಲಂಪಿಂ ನಲಿದು ಪೀರ್ವ ನವಮಧುಕರನಂ ॥
ನೆನೆಯಿಸಿದ ನಂದು ಜನನೀ ।
ಸ್ತನರಸಸುಖಪಾನಲೀನಲಂಪಟರಸನಂ ॥ ೪೬ ॥

ಕಂ|| ಅವಿದೊಳಗೆ ಜಿನುಗು ವಳಿಗಳೆ ।
ರವಮಂ ಗೆಡೆಗೊಂಡು ಗರ್ಭರಜವುಂ ಪೊಱಸೂ ॥
ಸುವ ಕಮಳ ಮೆನಿಸೆ ಮೊಗ ಮು ।
ತ್ಸವದ ತೊದಳ್ನುಡಿದು ಬೀಱಿದಂ ಬಿಱುನಗೆಯಂ || ೪೭ ||

ದರಹಾಸಲತೆಯ ಬೀಜೋ ।
ತ್ಕರ ಮೆನೆ ದರಹಾಸಲಕ್ಷ್ಮಿ ತಾಳ್ದಿದ ಮುಕ್ತಾ ॥
ಭರಣ ಮೆನೆ ನಗೆಗಳೊಗೆದಿರೆ ।
ಸುರತರುವಿನ ಸಸಿ ಮುಗುಳ್ತು ದೆನಿಸಿದ ನೆನಸುಂ || ೪೮ ||

ರಕ್ಕೆವಣಿ ಪುಲಿಯುಗುರ್ ಪಸು ।
ರ್ವೊರ್ಕ್ಕಳಿ ಪೊಂಗೆಜ್ಜೆ ಕಡೆಗ ಮುಡೆವಣಿ ಮಾಂಗಾಯ್ ॥
ಮೊಕ್ಕಳಗಾಡಿಗೆ ಜಡೆ ಸೊಡ ।
ರ್ವಕ್ಕಿನ ಬೊಟ್ಟೆಂಬ ಬಾಳವಜ್ಜದಿ ನೆಸೆದಂ || ೪೯ ||

ಚಂ|| ತನಗಧಿನಾಥ ನೆಂಬ ಪದಮಿಂ ದೆರ್ದೆಯೊಳ್ ಮಹಿಕಾಂತೆ ನೆಟ್ಟನೀ ।
ತನ ನಿರಿಸಿಟ್ಟ ಳೆಂಬಿನೆಗ ಮಾತ್ಮತನುಪ್ರತಿಬಿಂಬಡಂಬರಂ ||
ವಿನಿಹಿತರತ್ನಕುಟ್ಟಮದೊಳೊಪ್ಪೆ ತಳರ್ನಡೆದಾಡಿ ಚೆನ್ನಚೆ ।
ನ್ನನೆ ನಡೆತರ್ಪ್ಪ ದಾದಿಯರ್ಗೆ ಮಾಡಿದ ನಾತ ನತಿಪ್ರಮೋದಮಂ || ೫೦ ||

ವ|| ಅದಲ್ಲದೆಯುಂ.

ಚಂ|| ಉಡೆವಣಿಗಟ್ಟುವಂದೆ ರಿಪುದಂತಿಘಟಂ ಮದವೆತ್ತಿ ಕಟ್ಟಿ ದ ।
ಟ್ಟಡಿಯಿಡುವಂದೆ ವೈರಿಧರೆ ಗೋಳಿಡೆ ತೊಟ್ಟಿಲ ನೇಱುವಂದೆ ಮಾ ॥
ರ್ಪಡೆ ಗಿರಿದುರ್ಗಮೇಱಿ ತೊದಳಂ ನುಡಿವಂದೆ ವಿರೋಧಿ ಕಪ್ಪಮಂ।
ನುಡಿಯೆ ಜಗಕ್ಕೆ ಬಾಲ್ಯದೊಳೆ ಸೂಚಿಸಿದಂ ಶಿಶು ತೀವ್ರತೇಜಮಂ || ೫೧ ||

ವ|| ಅಂತೆನಿಸಿ ನೆಗಳ್ದಿ ಶತ್ರುಶಾಸನಂಗನ್ನಪ್ರಾಶನಮುಮಂ, ಬಂಧುಜನವರ್ಧನಂಗ ವರುಷವರ್ಧನಮುಂ, ಭುವನಚೂಡಾಭರಣಂಗೆ ಚೂಡಾಕರಣಮುಮಂ, ಮೊದಲಾದ ಸಮುಚಿತಕ್ರಿಯೆಗಳಂ ಯಥಾಕಾಲದೊಳ್ ಮಹೀಪಾಲಕಂ ಮಾಡಿಸಿ ತದನಂತರಂ ಕ್ರಮಕ್ರಮದಿ ನಂತಃಪುರಪ್ರಚಾರಮಾಸೇವ್ಯವೃತ್ತಿ ಸಮನಿಸೆ.

ಕಂ|| ಸಹಪಾಂಸುಖೇಳರೆನಿಸಿದ ।
ಬಹುನೃಪದಾರಕರ ನಡುವೆ [1] ದಾಸೇರಕರಿಂ ||
ಪ್ರಹಿತಮಣಿಕನಕಮಂಡನ ।
ಸಹಿತಂ ಮಾರ್ಗಜಱಿ ನೂಂಕಿ ಪೊಕ್ಕುಪವನಮಂ || ೫೨ ||

[1] ದಾಸೀಕರರೇಂಗ್ರಹಿತ ?

ಚಂ|| ತಿಳಿಗೊಳನಂ ವಿರೋಧಿಜಲದುರ್ಗ ಮಿದೆಂದು ಕಲಂಕಿ ಪಂಕಜಂ ।
ಗಳ ನವಿಧೇಯವೀರಶಿರ ಮೆಂದು ಕಿಮುಱ್ಚಿ ಮೃಣಾಳಮಂ ಖಳ ॥
ರ್ಕಳ ಕರುಳೆಂದು ಕಿೞ್ತು ಜಳಪಕ್ಷಿಯ ನನ್ಯಕುಟುಂಬ ಮೆಂದಸುಂ ।
ಗೊಳೆ ನೆಱೆಗೆಯ್ದು ಸೂಚಿಸಿದ ನೇರ್ವಸನಂ ಶಿಶು ಬಾಲಕೇಳಿಯೊಳ್ ॥ ೫೩ ॥

ವ|| ಅಂತಗಣ್ಯತಾರುಣ್ಯಲಕ್ಷ್ಮಿಯಂ ತಳೆದು ಗುರುಜನದ ಪರಿಜನದ ಮನಮೆಂಬ ನಿಮ್ನಗೆಯಿಂ ದತಿಬಹುಳಮೋಹರಸಮ ನೋರಂತೆ ತೀವಿ ಕಱೆವ [1]ನೀರ್ವಂದ ನೀರಧರ ಮೆನಿಸಿ ತತ್ಕುಮಾರ ನಿರ್ಪ್ಪನ್ನೆಗಂ.

ಮ|| ದ್ವಿರದಾರೋಹಣಯೋಗ್ಯವೀಧಿ ಹಯವ್ಯೂಹಾಳಿಪ್ರದೇಶಂ ನಿರಂ ।
ತರಶಸ್ತ್ರಶ್ರಮಭೂಮಿ ಶಾಸ್ತ್ರಸಮಿತಿವ್ಯಾಖ್ಯಾನಶಾಲಾಪರಂ ॥
ಪರೆ ಸುತ್ತಿರ್ಪಿನೆಗಂ ನೃಪಂ ನಿಜಸುತಂಗಾನಂದದಿಂ ಮಾಡಿಸಲ್ ।
ಕರ ಮೊಪ್ಪಿತ್ತು ಸಲೀಲಕೇಳಿವನದೊಳ್ ವಿದ್ಯಾಮಹಾಮಂಡಪಂ ॥ ೫೪ ॥

ವ|| ಆ ಮಹೀಮಂಡನಾಯಮಾನಮಂಟಪಕ್ಕೆ ಪದ್ಮರಾಜಂ ನಿಜತನೂಜ ನಪ್ಪ ಲೋಕೈಕಮಿತ್ರನಂ ವೈಶ್ರವಣಪುತ್ರ ನಪ್ಪ ಚಿತ್ರಭಾನುವೆರಸು ಮಂಗಳಾನಕರಹಂಗಳೆಸೆಯೆ ಶುಭಮುಹೂರದೊಳೊಂದುದಿವಸಂ ಮುಂದಿಟ್ಟೊಡಗೊಂಡು ಬಂದು ಸಕಳವಿದ್ಯಾದೇವತಾಪೂಜೆಯು, ನಖಿಳವಿದ್ಯಾಚಾರ್ಯಪೂಜೆಯುಮಂ ನಿರ್ವರ್ತಿಸಿ ವಿದ್ಯಾಪ್ರಾರಂಭದೊಳ್ ನಿಯೋಜಿಸಿ.

ಕಂ|| ಮನ ಮೊಳಸಿದಾಗಳೆಲ್ಲಿಗೆ ।
ವನಮಾಳಿಕೆವೆರಸು ವಿರಳಪರಿಜನವೃತ ನಿಂ ॥
ಬೆನೆ ಬಂದು ನಿಚ್ಚನಿಚ್ಚಂ ।
ತನಯಮುಖಾಲೋಕಸುಖಮ ನೆಯ್ದುತ್ತಿರ್ದಂ ॥ ೫೫ ॥

ವರಗುರು ತನ್ನಂ ಸುದ್ದಗೆ ।
ವರೆಯಿಸೆ ಮೂಱನೆಯ ತಾಣದೆರಡಕ್ಕರಮಂ ॥
ಸ್ವರದೊಳ ಮಂತಸ್ಥೆಯೊಳಂ ।
ಬರೆಯನೆ ವಿತರಣವಿನೋದ ನದ ನೇಕಱಿವಂ ॥ ೫೬ ॥

ಗುರುಮುಖದೊ ಳಾಕುಮಾರಂ ।
ಪರಿವಿಡಿಗೆಯ್ದಪ ನತೀತಜನ್ಮಾಭ್ಯಾಸ ॥
ಸ್ಫುರದಖಿಳವಿದ್ಯೆಗಳ ನೆನೆ ।
ಪರಿಣಮಿಸೆ ಕಳಾಕಳಾಪ ಮತಿಪಟು ಮಾದಂ ॥ ೫೭ ।

[1] ನಿವಾರ್ದ.

ವ|| ಆಗಿ.

ಕಂ|| ಲಿಪಿ ಶಬ್ದಶಾಸ್ತ್ರ ಮಭಿಧಾ |
ನಪರಂಪರೆ ನಾಟಕಪ್ರಯೋಗಂ ಕಾವ್ಯಂ ||
ನೃಪನೀತಿ ಜೋಯಿಸಂ ರ |
ತ್ನಪರೀಕ್ಷೆ ವಿಷಾಪಹರಣ ಮಾಯುರ್ವೇದಂ || ೪೮ ||

ಮ|| ಬರೆಪಂ ಬಾಜನೆ ಗಂಡಯುಕ್ತಿ ಗಣಿತಂ ಗಂಧರ್ವ ಮಾಖ್ಯಾನಕಂ |
ಭರತಾಭ್ಯಾಸ ಮಿಭೇಂದ್ರಶಿಕ್ಷೆ ಹಯಶಾಸ್ತ್ರಂ ಸೂಪಶಾಸ್ತ್ರಂ ನದೀ ||
ತರಣಂ ತಾಪನ ಮಿಂದ್ರಜಾಲ ಮೌಱಿಕಂ ಲೆಪ್ಪಂ ಶಿಲಾಕರ್ಮ ಮು |
ತ್ಕರಣಂ ಚಿತ್ರವಿಪಕ್ಷೆ ವಾಸ್ತು ಶಕುನಜ್ಞಾನಂ ರಥಾರೋಹಣಂ || ೪೯ ||

ಕಂ| ಸ್ಮರಮಂತ್ರಂ ಬಹುಭಾಷಾ |
ಪರಿಚಿತಿ ಯಂತ್ರಪ್ರಯೋಗ ಮಖಿಲವ್ಯೂಹೋ ||
ತ್ಕರ ಮೆಂಬಿನಿತಱಿತೊಳಂ ಬ |
ಲ್ಲರೆಲ್ಲರುಂ ಮೆಚ್ಚೆ ಪಡೆದ ನತಿಕೌಶಲಮಂ || ೫೦ ||

ವ|| ಅದಲ್ಲದೆಯುಂ.

ಕಂ|| ಕರವಾಳ ಕಣೆಯ ಕಂಪನ |
ಪರಶು ಶರಾಸನ ಮುಸುಂಡಿ ಮುಸಲ ಗದಾ ತೋ ||
ಮರ ಶಂಕು ಶಕ್ತಿ ಚಕ್ರ |
ಚಬ್ಬರಿಕಾದ್ಯಾಯುಧದೊ ಳಧಿಗತಶ್ರಮ ನಾದಂ || ೫೧ ||

ವ|| ಆಗಿ ಕೀರ್ತಿಪತಾಕ ನಗಣ್ಯಪುಣ್ಯಲಕ್ಷ್ಮೀಸದನವಕ್ಷಸ್ಥಳಪುರುಷಪುರುಷೋತ್ತಮ ಸರಸ್ವತೀಕರ್ಣಪೂರ ಸತ್ಯರಾಧೇಯ ಗಂಭೀರನೀರಾಕರ ಕದನಕಂಠೀರವ ಪ್ರಭುಕುಲೈಕರೋಧೋಮಣಿ ಯೆಂಬ ಗುಣನಾಮಂಗಳಂ ವಿವಿಧವಿದ್ಯೋಪಾಧ್ಯಾಯರ್ಕಳತ್ತಣಿಂ ಪೆತ್ತು ನೆಗೞ್ತೆವಡೆದ ಮಹಾಪದ್ಮನೊಡನೆ ಕೂಡಿ.

ಕಂ|| ಪರಿಣತಿವಡೆದಂ ವಿದ್ಯಾ |
ಪರಿಕರದೊಳ ಮಾತ್ಯಸುತನು ವಿದು ಚೋದ್ಯಮೆ ಪೇೞ್ ||
ಧರೆಯೊಳ್ ಪದ್ಮಜ ನೊಡನನ |
ವರತಕೃತಾಭ್ಯಾಸ ನಾದ ವಿಭು ವೆಂಬಿನೆಗಂ || ೫೨ ||

ವ॥ ಅಂತು ಪದ್ಮರಾಜಪುತ್ರಂಗೆ ಚಿತ್ರಭಾನು ಸಮವಿದ್ಯನಾದ ನಲ್ಲದೆಯುಂ.

ಕಂ॥ ಎಳವೆಯೊಳಂ ಭಕ್ತಿಯೊಳಂ ।
ಬೞಿವಿಡದೆ ನೆೞಲ್ವೊಲಿರ್ಪ ಸಂಗತಿಯೊಳ ಮೊ ॥
ಳ್ಪೞಿಯದೆ ಬಗೆಗೊಂಡಂ ಮನ ।
ದಳಿಪಿನ ಸಖನಾಗಿ ಭವ್ಯಚೂಡಾಮಣಿಯುಂ ॥ ೬೩ ॥

ಕೌತುಕಮೇಂ ಕೇವಳಮೇ ।
ಪ್ರೀತಿ ಮಹಾಪದ್ಮಚಿತ್ರಭಾನುಗಳೊಳ್ ಶ್ರೀ ॥
ಹೇತು ವದು ಚಕ್ರವರ್ತಿವಿ ।
ಭೂತಿಗೆ ಮೊದಲದು ನಿರಸ್ತದೋಷ ಮದೆಂತುಂ ॥ ೬೪ ॥

ವ॥ ಎಂಬಿನ ಮಂತವರ್ಗಳಿರ್ವರುಂ ಸಕಳಕಳೆಯುಮಂ ಕೆಳೆಯುಮಂ ನೊಡನೊಡನೆ ಬಳೆಯಿಸುತ್ತಮಿರ್ಪಲ್ಲಿ :—

ಉ॥ ಜೊನ್ನದ ರಾತ್ರಿ ನೇತ್ರಕುಮುದಕ್ಕಿನನಂಶು ಮುಖಾಂಬುಜಕ್ಕೆ ತೈ ।
ಲ ನ್ನವಕಾಂತಿದೀಪಿಕೆಗೆ ಕಾರ್ಮುಕದೇೞ್ಗೆ ಶಿರೋಜಕೇಕಿ ಗು ॥
ತ್ಪನ್ನವಸಂತ ಮಂಗಲತೆ ಗುಗ್ರಮದಂ ಭುಜದರ್ಪದಂತಿ ಗೆಂ ।
ಬನ್ನಿಗ ವಂದು ತಂದುದು ಕುಮಾರನ ಜವ್ವನ ದೇೞ್ಗೆ ಲೀಲೆಯುಂ ॥ ೬೫ ॥

ಮ॥ ತರುಣೀಮೋಹನಮಂತ್ರಮಂ ಮನಸಿಜಂ ಕಸ್ತೂರಿಕಾಪಂಕದಿಂ ।
ಬರೆದಂತಿರ್ದುವು ಬರ್ಪ ಮಿಾಸೆ ವಿಜಯಶ್ರೀಯುಂ ಬಹುಕ್ಷತ್ರವು ॥
ತ್ರರ ಸುತ್ತಿಂಗೊಳಗಾಗದಿರ್ದೞಕೆಯಿಂ ಸುತ್ತಲ್ಕೆ ನೀಳ್ದಿಂತೆ ಬಿ ।
ತ್ತರದಿಂ ದೀರ್ಘತರಂಗಳಾದುವು ಭುಜಂ ಸೌಂದರ್ಯಕಂದರ್ಪನಾ ॥ ೬೬ ॥

ಮ॥ ವಿಳಸನ್ಮಜ್ಜನಪೀಠ ಮಾದುದು ಜಿನಂ ಗೆಂಬೊಳ್ಪಿನಿಂ ಪೆರ್ಮೆಯುಂ ।
ತಳೆದತ್ತಲ್ಲದೊಡಂತದೆನ್ನೊ ಳೆಣೆಯೇ ಸನ್ಮಿತ್ರರಾಜಭ್ರಮಾ ॥
ಕಳಿತಂ ನಂದಿತಗೋತ್ರವೈರಿ ಯೆನುತುಂ ಹೇಮಾಚಳಶ್ರೀಶಿಲಾ ।
ತಳಮಂ ಮೆಚ್ಚಿಯು ಮಂದು ಮೆಚ್ಚದೆ ಬೃಹದ್ವಕ್ಷಂ ಮಹಾಪದ್ಮನಾ ॥ ೬೭ ॥

ವ॥ ಅಂತು.

ಮ॥ಸ್ರ॥ ಘನಕೇಶಂ ಪೂರ್ಣಭಾಳಂ ಕುವಲಯನಯನಂ ತುಂಗಘೋಣಂ ಗಭೀರ ।
ಧ್ವನಿ ಸೂಕ್ಷ್ಮಶ್ಮಶ್ರು ಬಿಂಬಾಧರ ಪತಿಕಠಿಣಸ್ಕಂಧ ವಕ್ಷೋಣವಕ್ಷಂ ॥
ತನುಮಧ್ಯಂ ದೀರ್ಘಬಾಹುದ್ವಯ ಮರುಣನಖಂ ರಮ್ಯರಂಭೋರು ಮಂಭೋ ।
ಜನಿಭಶ್ರೀಪಾದ ಮಂತಂತೆಸೆಯೆ ನೃಪಸುತಂ ನೋಡೆ ಕಣ್ಗೆಡ್ಡಮಾದಂ ॥ ೬೮ ॥

ಚಂ॥ ಮನಮೊಸೆದಾ ಕುಮಾರನ ವಿಳಾಸಮ ನೊಯ್ಯನೆ ಕಂಡ ವಾರಿಜಾ ।
ನನೆಗೆ ಮರಾಳಗಾಮಿನಿಗೆ ಮಾನನಿಭಾಕ್ಷಿಗೆ ಸಾರಸೀಕಳ ॥
[1]ಸ್ವನಿಗೆ ರಥಾಂಗತುಂಗಕುಚೆಗುತ್ಪಲಗಂಧಿಗೆ ಸೀಮೆ ಯಾಯ್ತು ಜೀ ।
ವನದಭಿಲಾಷೆ ಕಂತುಪರಿತಾಪದೊಳಿಂತಿದು ಚಿತ್ರ ಮೆಂಬಿನಂ ॥ ೧೯ ॥

ಚಂ॥ ಪರನೃಪಮಂಡಳಿಕ್ಕೆ ಭಯಮಂ ರಮಣೀನಿವಹಕ್ಕೆ ಕಾಮುಕಾ ।
ತರತೆಯ ನಂಗಜಂಗೆ ಮುದಮಂ ಜನದೃಷ್ಟಿಗಪೂರ್ವ ತುಷ್ಟಿಯಂ ॥
ಸರಸಕವೀಂದ್ರಜಿಹ್ವೆಗಭಿವರ್ಣನಕಾಂಕ್ಷೆಯ ನಿತ್ತು ನಂದು ಬಿ ।
ತ್ತರಿಸೆ ಸನತ್ಕುಮಾರನಳಕೂಬರಕಂತುನಿಭಂ ನೃಪಾತ್ಮಜಂ ॥ ೨೦ ॥

ವ॥ ಅಂತು ವಿದ್ಯಾಲಕ್ಷ್ಮಿಯೊಡನೆ ತನಗೆಳಸಿರ್ದ ನವಯೌವನಲಕ್ಷ್ಮಿಯ ಸಮಾಯೋಗದೊಳ್ ಸವಿಲಾಸರೂಪವಿಭ್ರಮನುಂ ಸಹಜಾತಸೌಭಾಗ್ಯನುಂ ಸಮಗ್ರತ್ವಾವಲಂಬನುಂ ಸಾಶ್ಚರ್ಯಶೌರ್ಯಾವಲೇಪನು ಮಾದ ಕುಮಾರನಂ ನೀತಿರತ್ನಾಕರಾವನೀಶ್ವರಾದೇಶದಿಂದ ಮೊಂದುದಿವಸ ಮಖಿಲವಿದ್ಯಾಚಾರ್ಯರಾ ಮುಂದಿಟ್ಟೊಡಗೊಂಡು ಬರ್ಪುದುಂ ಪಂಜರವಿಮುಕ್ತಕುಂಜರಾರಾತಿಯಂತೆ ಮಂಟಪದಿಂ ನೃಪನಿವಾಸಕ್ಕೆ ಬಂದು ಸಭಾಸದನಮಂ ಪೊಕ್ಕು.

ಕಂ॥ ತನಗಹಮಿಕೆಯಿಂ ದಿರದೆಱು ।
ಪ ನೃಪಾಳರ ಮೌಳಿಮಾಳೆ ಕುಟ್ಟಿಮಸಂಘ ॥
ಟ್ಟನದಿ ನತಿಮುಖರ ಮಾಗಿ ।
ರ್ಪಿನೆಗಂ ಸಾರ್ತಂದು ತಂದೆ ಗವನತ ನಾದಂ ॥ ೨೧ ॥

ವ॥ ಆಗಿ ದೌವಾರಿಕದತ್ತಕನಕವಿಷ್ಟರಮ ನಗಲೆ ನೂಂಕಿ.

ಮ॥ ವಿನಯಂಗುಂದದೆ ಪಾದಪೀರತಳದೊಳ್ ಕುಳ್ಳಿರ್ಪ ಲೋಕೈಕಮಿ ।
ತ್ರನ ನೊತ್ತಂಬದಿ ನೆತ್ತಿ ನೇತ್ರಯುಗದಿಂ ದಾನಂದಬಾಷ್ಪಾಂಬು ಝು ॥
ಮ್ಮನುಗಲ್ ನೀ ನೆಮಗಿನ್ನು ಮಮ್ಮ ಪಸುಗೂಸೆಂದಪ್ಪಿ ಬಾಯ್ವಾಯೊಳಿಂ ।
ಬಿನೆ ತಾಂಬೂಲಮ ನಿಕ್ಕಿ ಪೊಣ್ಮೆ ಪುಳಕಂ ಮುಂಡಾಡಿದಂ ಭೂಭುಜಂ ॥ ೨೨ ॥

ವ॥ ತದನಂತರಂ ನಿಜಪಾದಪೀಠಘಟಿತೋತ್ತಮಾಂಗನಾದ ಚಿತ್ರಭಾನುವಂ ಪುತ್ರನಿರ್ವಿಶೇಷ ಮೋಹದಿಂದ ಮಾದರಿಸಿ ತತ್ಸಮಯದೊಳಮಾತ್ಯಮೈಶ್ರವಣಂಗೆ ಪೊಡೆವಡಿಸೆ ಪೊಡೆವಟ್ಟು ತದಾಶೀರ್ವಾದಜನಿತಪ್ರಮೋದ ನಾಗಿ.

ಚಂ॥ ಅವಿಕಳರಾಜ್ಯಸಿಂಹದೆರಡುಂಕುಡುದಾಡೆವೊಲಿರ್ದ ಭೂಪಮೈ ।
ಶ್ರವಣತನೂಜರಿರ್ವರು ಮಖಂಡಿತವೃದ್ಧಿಯಿ ನಿರ್ವರುಂಕಳಾ ॥
ನಿವಹದಿ ನಿರ್ವರುಂ ಲಲಿತಯೌವನಲೀಲೆಯಿ ನಿರ್ವರುಂ ಗುಣ ।
ದ್ರವಿಣದಿ ನಿರ್ವರುಂ ವಿನಯದಿಂ ಸಭೆಗುತ್ಸವಮಂ ನಿಮಿರ್ಚಿದರ್ ॥ ೨೩ ॥

[1] ಧ್ವನಿಗೆ.

ವ|| ಅನಂತರಂ ಜನತಾನುಮತದಿ ನಾರ್ಯ್ಯಕುಳಪರಿಜನಪರೀತ ನಾಗಿ ಬಂದು ಮುನ್ನೆ ತನ್ನ ಬರ ವಿಂಗೆ ವಿರಚಿಸಿದ ಮಾಂಗಲ್ಯಪರಿಕರದಿ ನೊಪ್ಪುವಂತಃಪುರಮಂ ಪುಗುವುದು ಮಾಸಮಯದೊಳ್ ವನಮಾಳಿಕಾಮಹಾದೇವಿ.

ಕಂ|| ಎನ್ನಯ್ಯ ನೆನ್ನ ಮದಗಜ ।
ನೆನ್ನಾಳ್ದಂ ಬಂದ ನೆಂದು ಮುದದಿಂ ದಿದಿರ್ವಂ ॥
ದುನ್ನತನೃಪಾಂಗನಾವೃತೆ ।
ಮನ್ನಿಸಿ ತಳಿದಳ್ ಸುತಂಗೆ ಶೇಷಾಕ್ಷತೆಯಂ　　॥ ೭೪ ॥

ವ|| ಅಂತು ಸೇಸೆಯಿಕ್ಕಿ ನಿಜಪಾದಾರವಿಂದದ್ವಂದ್ವಮಂ ಚಳಾಳಕಮಧುವ್ರತಂಗಳಿ ನಳಂಕ ರಿಸಿರ್ದ ಚಿತ್ರಭಾನುಮಿತ್ರನಂ ಪರಮಪರಿತೋಷದಿಂ ಪರಸಿ.

ಕಂ|| ನೆಲೆವೊಲೆಯಿಂ ಕ್ಷೀರಂ ಕ ।
ಣ್ಮರಿಂ ಬಾಷ್ಪಾಂಬು ಪೊಣ್ಮೆ ಪುಳಕಸ್ವೇದಾ ॥
ರ್ದ್ರಲತಾಂಗಿ ತನಯನಂ ನಲಿ ।
ನಲಿ ದಪ್ಪಿಕೊಳ್ಳುತ್ತೆ ಪ್ಪಿ ತಣಿದ ಳಿಲ್ಲಾಕ್ಷಣದೊಳ್　　॥ ೭೫ ॥

ವ|| ಅಲ್ಲಿಂ ಬಳಿಕ್ಕ ಮಾತ್ಮಾಂಬಿಕಾದೇಶದಿಂದ ಮಖಿಳಜನನೀಜನಂಗಳ ನಿವಾಸಂಗಳ್ಗೆ ಪೋಗಿ ಪೊಡೆವಟ್ಟು ಪರಕೆವೆರಸು ಸೇಸೆಗೊಂಡಂತಃಪುರನಿಷ್ಕ್ರಾಂತ ನಾಗಿ ಸರಸ್ವತೀಕರ್ಣಪೂರಂ ಬಂದು.

ಮ|| ಸ್ರ|| ತನಗೆಂದುರ್ವೀಶ್ವರಂ ಮುನ್ನಮೆ ಸಮೆಯಿಸಿ ದುತ್ಕೃಷ್ಟಕೋಷ್ಠಾಂತರೋದ್ಭಾ ।
ಸಿ ನಿಶುಂಭಚ್ಚಂದ್ರಶಾಲಾಮಣಿಮಯವಿಲಸತ್ಸ್ಫುತ್ರಿಕೋತ್ತಂಭಿತಸ್ತಂ ॥
ಭನಿಕಾಯಂ ಚಿತ್ರಭಿತ್ತಿಸ್ಥಿತಯುತ ಮಧಿಕೃತಸ್ತ್ರೀರಣಾಭಂ ಕನತ್ಕಾಂ ।
ಚನಚೂಡಂ ಮಾಡ ಮೊಪ್ಪುತ್ತಿರೆ ಗೃಹಸಚಿವಪ್ರೇರಿತಂ ಪೊಕ್ಕ ನಾಗಳ್　　॥ ೭೬ ॥

ವ|| ಪೊಕ್ಕು ತದನಂತರೋದ್ದೇಶನಿಹಿತಚಂಚದ್ರತ್ನಪರ್ಯಂಕಿಕಾಪ್ರದೇಶಮ ನಲಂಕರಿಸಿ ಭವನ ಪ್ರವೇಶಮಾಂಗಲ್ಯಶೇಷಾಕ್ಷತಂಗಳಂ ತಳಿದು ತದನಂತರಂ ಮಜ್ಜನಭೋಜನಾದಿದಿವಸವ್ಯಾಪಾರಂ ಗಳಂ ತೀರ್ಚಿಸಿ ನಿಜಪಿತೃಸಮರ್ಪಿತಸಮಗ್ರಕುಳರೂಪವಿಭವವಿದ್ಯಾವಿಳಾಸಚಾತುರ್ಯವರ್ಯರಪ್ಪ ನೃಪ ಕುಮಾರಕರಿ ಸತತಸನ್ನಿಹಿತಪರಿವಾರ ಮಾಗೆ.

ಮ|| ಕವಿತಾಗೋಷ್ಠಿಯೊ ಳಾದಿರಾಜಕಥೆಯೊಳ್ ತತ್ಸೋಕ್ತಿನಿರ್ಣೀತಿಯೊಳ್ ।
ನವಸಂಗೀತಕಸಂಗದೊಳ್ ವನಜಳವ್ಯಾಯಾಮದೊಳ್ ಮನ್ಮಥೋ ॥
ತ್ಸವದೊಳ್ ಕಂದುಕಕೇಳಿಯೊಳ್ ಮಹಿಷಮಲ್ಲದ್ವಂದ್ವಯುದ್ಧಾವಲೋ ।
ಕವಿನೋದಂಗಳೊ ಳೆಯ್ದೆ ಪೊಳ್ತುಗಳೆವುತ್ತಿರ್ದಂ ನರೇಂದ್ರಾತ್ಮಜಂ　　॥ ೭೭ ॥

ವ॥ ಅಂತಿರ್ಪುದು ಮೊಂದುದಿವಸಂ ಪದ್ಮರಾಜಂ ತನೂಜಂಗೆ ಯುವರಾಜಪಟ್ಟಬಂಧಮಂ ಮಾಡಲ್ ಮನಂದಂದು ಸಮಾಳೋಚಿತಸಚಿವಸಂದೋಹ ನಾಗಿ ಮಾಂಗಲ್ಯಮಂಟಪಮಂ ಗೃಹಮಹ ತ್ತರಂಗೆ ಬೆಸಸಿ ಸಮೆಯಿಸುವುದುಂ.

ಉ॥ ಸುತ್ತಿದ ಚಿತ್ರಕಾಂಡಪಟ ಮಿಕ್ಕಿದ ಮಂಗಳವೇದಿ ಕಂಬದೊಳ್ ।
ಪತ್ತಿದ ಪೊನ್ನ ಪುತ್ಥಳಿ ತೊಡರ್ಚಿದ ಮುತ್ತಿನ ಸೂಸಕಂ ತಗು ॥
ಳ್ದಿತ್ತಿದ ತೋರಣಂ ಪುದಿದ ಪೂವಲಿ ತಳ್ತ ವಿತಾನವಿಸ್ತರಂ ।
ಚಿತ್ತದ ಜಾಗ ಮುಜ್ಜಳಿಪ ಕನ್ನಡಿ ಕೀವಿ ಪೊದಟ್ಟಿ ಪೊಂಗೊಡಂ ॥ ೭೮ ॥

ಕಂ॥ ಒಸಗೆವಱಿ ಸರ್ವಧಾನ್ಯಂ ।
ಮೊಸರಣ್ಕೆ ಕಱಿಂಕೆ ರಂಗವಲಿ ಭೃಂಗಾರಂ ॥
ಪಸೆ ರನ್ನಹ ಸೊಡರೆಂಬಿವ ।
ಱಿಸಕಂ ಕಣ್ಗೊಳಿಸುತಿರ್ದು ವಾಮಮಂಟಪದೊಳ್ ॥ ೭೯ ॥

ವ॥ ತದನಂತರಂ ಮೌಹೂರ್ತಿಕೋಪದಿಷ್ಟಶುಭಮುಹೂರ್ತದೊ ಳನೇಕಶಂಖಕಹಳಾಮೃ ದಂಗಭೇರೀಕಾಂಸ್ಯತಾಳರವರಭಸಮುಂ, ಮಾರ್ಯಜನಮುಖೋಚ್ಚಾರ್ಯಮಾಣಮಂಗಳವಚೋ ನಿಚ ಯಮುಂ, ಮತಿಬಹಳಕುಸುಮಫಳ ಹಸ್ತವಿಸ್ತಾರಿವಾರನಾರೀಸಮೂಹಮುಂ, ವಿಚಿತ್ರಪಾತ್ರನೃತ್ಯ ವರ್ತನಮು ಮೆಸೆಯೆ ಮಹಾಮಂತ್ರಿ ವೈಶ್ರವಣ ನೊಡಂಗೊಂಡು ತರ್ಪುದುಂ.

ಮ॥ ಜನಕಾದೇಶದೆ ಬಂದ ನಲ್ಲಿಗೆ ಕುಮಾರಂ ಪಕ್ವಬಿಂಬಾಧರಂ ।
ತನಿಗೆಂಪಿಂ ಕಿಸುಸಂಜೆಯಂ ಕೆದಱಿ ಲಾವಣ್ಯಾಮೃತಂ ಲೋಕಲೋ ॥
ಚನಮಂ ತೇಂಕಿಸೆ ಮುತ್ತಿನೊಳ್ತೊಡವುಗಳ್ ಬೆಳ್ದಿಂಗಳಂ ಬೀಱಿ ಯೌ ।
ವನದರ್ಪಂ ಸ್ಮರನಂ ಮುಗುಳ್ಚಿ ಘನತೇಜಂ ಕಿಟ್ಟಿ ತಿಗ್ಮಾಂಶುವಂ ॥ ೮೦ ॥

ವ॥ ಆಗಳನೇಕಮೂರ್ಧಾಭಿಷಿಕ್ತಮಂಡಳಿಕಮಂಡಳೀಪರಿವೃತ ನಾಗಿ ಪದ್ಮರಾಜ ನಾರಾಜ ವಿದ್ಯಾವಿಳಾಸನಂಮಂಗಳಾನಕರವಂಗಳೆಸೆಯೆ ಕಮನೀಯಕಲ್ಯಾಣಪೀಠನಿಷ್ಠಿತನಂ ಮಾಡಿ.

ಮ॥ ಸಮಸರ್ವೌಷಧಿಸರ್ವರತ್ನಪರಿಮಿಶ್ರಾಶೇಷತೀರ್ಥಾಂಬು ಪೂ ।
ರ್ಣವ ಸುತಸ್ಪಹದಿ ನೆತ್ತಿ ಪೊಂಗಳಸಮಂ ಹರ್ಷಾಶ್ರುಗಳ್ಕೂಡೆ ಪೊ ॥
ಣ್ಮವಿನಂ ಮಾಡಿದ ನಾತ್ಮಮಂತ್ರಿಜನಯುಕ್ತಂ ಯೌವರಾಜ್ಯಾಭಿಷೇ ।
ಕವ ನಾನಂದಿತಮಿತ್ರಲೋಕಮು ನತಿತ್ರಸ್ತಾಹಿತಾನೀಕಮಂ ॥ ೮೧ ॥

ವ॥ ತದನಂತರಮಿಂಗಡಲ ತೆರೆಯು ದೊರೆಯು ದುಕೂಲದೊಳ ಮಾಗಳಾಗಳೆ ನಿಶಾಮುಖ ದೊಳ್ ನೆಗೆದ ತಾರಗೆಗಳೋರಗೆಗಳೆನಿಪ ಪೊಚ್ಚಪೊಸಮುತ್ತಿನ ಪಚ್ಚದೊಡವಿನೊಳಂಮನಕ್ಕೆ ಮಚ್ಚ ರಿಪ ಚೆಲ್ವಿಂ ಬಳ್ವಲಾದ ಮಲ್ಲಿಗೆಯ ಮುಗುಳ ತಗುಳದಿಂ ದೆಸೆವ ಬಾಸಿಗಂಗಳೊಳ ಮಳಂಕರಿಸೆ.

ಕಂ|| ಅಭಿನವಸಂಗೋತ್ಕಂಠೆಯಿ ।
ನಭಿವೀಕ್ಷಿಪ ಯೌವರಾಜ್ಯಲಕ್ಷ್ಮಿಯ ನಯನ ॥
ಪ್ರಭೆ ಪೆರ್ಚಿತೆನಿಸಿದತ್ತತಿ ।
ಶುಭದಂ ಪದ್ಮಜನ ಧವಳಮಂಗಳವೇಷಂ ॥ ೮೦ ॥

ವ॥ ಅಂತಲಂಕೃತನಾದ ಭವ್ಯರತ್ನಾಕರನಂ ಸಮುತ್ತುಂಗಮಾಂಗಲ್ಯಮಂಡಪಮಂಡನೀಭೂತ ಹ್ಮೃಗರಾಜವಿಷ್ಟರದೊಳಿರಿಸಿ.

ಕಂ|| ಯುವರಾಜಕಂಠಿಕಾಬಂ ।
ಧವ ನಖಿಲಜನಾನುಬಂಧವಂ ರಿಪುದರ್ಪಾ ॥
ರ್ಣವಸೇತುಬಂಧವಂ ಶಿ ।
ಷ್ಟವಿಪತ್ರ್ಪತತಿಬಂಧವಂ ನೃಪಂ ನಿರ್ಮಿಸಿದಂ ॥ ೮೩ ॥

ಹರಿಣಿ॥ ಭುವನನುತವಿಕ್ರಾಂತಂ ಪ್ರಾಣೇಶ್ವರಪ್ರಭವಂ ಕಳಾ ।
ಭವನ ನವನೀರಕ್ಷಾದಕ್ಷಾತ್ಮ ನೆಂದು ಸಮಸ್ತರಾ ||
ಜ್ಯವನೆ ತನಯಂಗೀಯಲ್ ವೇಡಿತ್ತನಲ್ ಯುವರಾಜವ್ಯೈ ।
ಭವಮ ನದನಾಭೂಪಂ ಕೂರ್ತೀವುದಾವುದು ಕೌತುಕಂ || ೮೪ ||

ವ॥ ಎನಿಸಿದ ನವಕಂಠೀರವಂಗೆ ಯುವರಾಜಕಂಠಿಕಾಬಂಧಮಂ ಮಾಡಿ.

ಮ|| ನೆಗಟ್ದುನ್ಮತ್ತಗಜಂಗಳಂ ಪ್ರಬಳಜಾತ್ಯಶ್ವಂಗಳಂ ಸಾರವ ।
ಸ್ತುಗಳಂ ಸದ್ಗುಣವದ್ವಿಳಾಸಿನಿಯರಂ ಪ್ರೋದ್ದಾಮಸಾಮಂತರಂ ||
ಮಿಗಿಲಪ್ಪಾರ್ಗಳ ನನ್ವಯಾಗತಸಮಗ್ರಾಮಾತ್ಯರಂ ಕೊಟ್ಟು ನೆ ।
ಟ್ಟನೆ ಭೂಪಂ ಯುವರಾಜನಂ ವಿಭವದಿಂ ತನ್ನೊಳ್ ಸಮಂಮಾಡಿದಂ || ೮೫ ||

ವ॥ ಆಗಳ್.

ಚಂ॥ ಹಿಮಕರನಿಂ ನೆಲಕ್ಕೆ ನಿಮಿರ್ಪುಜ್ಜ್ವಳಚಂದ್ರಿಕೆಯಂತಧೀಶನಿಂ ।
ನಿಮಿರ್ದು ಕುಮಾರನತ್ತಲೆಳಸಿರ್ದ ಳಭಿನ್ನಪರಸ್ವರೂಪದಿಂ ||
ಕುಮುದವನಾಭಿರಾಮೆ ಪರಚಕ್ರಭಯಂಕರಶೀಲೆ ವಾಹಿನೀ ।
ರಮಣಸಮೃದ್ಧಿಸಲ್ಲಲಿತೆ ರಾಜ್ಯರಮಾವಧು ವಂದು ಲೀಲೆಯಿಂ || ೮೬ ||

ವ॥ ಅಂತಾಮನುಜೇಂದ್ರಮಂದರಂ ತಂದೆ ಕೊಟ್ಟ ಯುವರಾಜಲಕ್ಷ್ಮಿಯ ನವಪ್ರಸಂಗದಿಂ ರಾಗರಸರಂಜಿತಾಂತಃಕರಣನಾಗಿ, ತದುತ್ಸವದೊಳಾರ್ಯಜನಮ ನರ್ಘಿಸಿಯುಂ, ಪೂಜ್ಯಜನಮಂ ಪೂಜಿಸಿಯುಂ, ಮಾನ್ಯಜನಮಂ ಮನ್ನಿಸಿಯುಂ, ಇಷ್ಟಜನಮಂ ತುಷ್ಟಿವಡಿಸಿಯುಂ, ಪರಿಜನಮಂ ಪರಿವರ್ಧಿಸಿಯುಂ, ಅಖಿಳಜನವಂದ್ಯ ನಾಗಿ ಪರಚಕ್ರಮ ನಾಕ್ರಮಿಸಲುಪಕ್ರಮಿಸುತ್ತಿರ್ಪನ್ನೆಗಂ.

ವು॥ ಸಮುದಾರಾತಿಜಯೋತ್ಸುಕಂಗೆ ಯುವರಾಜಂ ಗೆತ್ತ್ತ ಲತ್ಯಂತದು ।
ರ್ಗಮ ಮಾದಧ್ವವ ನಿಂದೆ ನೇರ್ಪಡಿಪೆ ನೆಂಬಂತುರ್ವರಾಭಾಗದು ॥
ರ್ಗಮಮಂ ಕರ್ದಮಮಂ ಕಟಿಲ್ಚ ಲತುಳೋದ್ಯತ್ಫೇನಮಂ ಸಿಂಧುಯೂ ।
ಥಮ ನೋೞರಂತಿರೆ ಮಾಡಲಾದು ದೆನಸುಂ ನಿರ್ನೀರದಂ ಶಾರದಂ ॥ ೮೭ ॥

ಚಂ॥ ಸೊಗಯಿಪ ಕೇತಕೀವಿಭವ ಮೇೞಿತಿಲೆವಾೞಿತಿಗೆ ನೀಪದೇೞಿಗ್ಗೆ ಪೊ ।
ನ್ನೆಗೆ ಕುಟಜೋಪಶೋಭೆ ಕುಮುದಕ್ಕೆ ಕದಂಬದ ಸೊಂಪು ನೆಯ್ದಿಲೊ ॥
ಳ್ಗುಗುಳ್ಗೆ ಮಯೂರದಭ್ಯುದಯ ಮಂಚೆಗೆ ಚಾದಗೆ ಯುತ್ಸವಂ ಚಕೋ ।
ರಿಗೆ ತಳೆದೊರ್ಪ್ಪ ಲೊಪ್ಪಿದುದು ನೀರದಶಾರದನಿರ್ಗಮಾಗಮಂ : ॥ ೮೮ ॥

ವ॥ ಮತ್ತಂ.

ಚಂ॥ ಕಲುಷತೆಯಂ ನಿಮಿರ್ಚಿ ತಿಳಿಪಲ್ಕಣ ಮಾಱಿದೆ ಮೇಘವಲ್ಲಭಂ ।
ತಳೆದೊರ್ಡೆ ಪೆರ್ಚಿ ತೀವ್ರತಪನಂ ಬಡಪಟ್ಟನುಕೂಲೆಯರ್ ನದೀ ॥
ಲಲನೆಯ ರಂದು ಕಂಠಗತಜೀವನವೃತ್ತಿಯ ನಾಳ್ದ(ರಿಂ) ಭೃಶೋ ।
ತ್ಕಳಿಕೆಯ ರೆಂತು ಸೈರಿಸುವರೋ ಸರಸಾತ್ಮನಿ ನಾದಗಲ್ಕೆಯಂ ॥ ೮೯ ॥

ಕಂ॥ ಶರದಂಗನೆ ನಿಜಮುಖಹಿಮ ।
ಕರಬಿಂಬಮ ನಡರೆ ನೋಡಲುಜ್ಜ್ವಳಿಸಿದ ಭಾ ॥
ಸುರಚಂದ್ರಕಾಂತಮುಕುರೋ ।
ತ್ಕರ ಮೆನೆ ಸೊಗಯಿಸಿದು ದಂದು ತಿಳಿದ ಕೊಳಂಗಳ್ ॥ ೯೦ ॥

ಚಂ॥ ಶರಧಿಯ ರತ್ನಮಂ ನೆಱತಿಯ ಕಳ್ದು ಜಳಾಹರಣಕ್ಕೆ ಬರ್ಪ ಮಾ ।
ರ್ಗರಕುಳ ಮೊಯ್ದು ಕೊಟ್ಟೊಡಮಱಿಂದ ಮಲಂಕೃತ ಮಾಪುದಕ್ಕು ಮಂ ॥
ಬರತಳ ಮೆಂಬ ಶಂಕೆ ಸುರಚಾಪದಿ ನಾದೊಡೆ ನೋಡಲಿಂಗಡೆಲ್ ।
ತೆರೆಗಳ ನಟ್ಟದಂ ವರುಣನೆಂಬವೊಲೊಪ್ಪಿದು ಮೆಟ್ಟಿ ಬೆಳ್ಮುಗಿಲ್ ॥ ೯೧ ॥

ಚಂ॥ ಶರದದ ಪೆರ್ಮಿಸಿಲ್ಗಗಿದು ಬಾಂದೊಱತಿಯೊಳ್ ಸಲಿಲಾವಗಾಹತ ।
ತ್ಪರತೆಯಿ ನಿರ್ದ ವಾಸವಗಜೇಂದ್ರದ ಪುಷ್ಕರರಂಧ್ರರುಂದ್ರಶೀ ॥
ಕರಮೊ ಬಿಮಪ್ಪ ಮೇಘಪಥಲಕ್ಷ್ಮಿಯ ನಿರ್ಮಲಘರ್ಮಬಿಂದುವೋ ।
ಸುರಿದಪು ವೆಂಬಿನಂ ಸುರಿವ ಬೆಳ್ಸರಿಗಳ್ ಬಗೆಗೊಂಡು ವಾರುಮಂ ॥ ೯೨ ॥

ಕಂ॥ ನವರಾಜಲಕ್ಷ್ಮಿಯಂ ಶರ ।
ದವನೀಶಂ ಪಡೆದು ಬರೆ ದಿಶಾಧೀಶ್ವರರು ॥
ತ್ಸವದಿಂ ಕಟ್ಟಿದೊಡೆಮುದೊರ್ ।
ಪ್ಪುವ ಮಣಿತೋರಣ ಮಿದೆನಿಸಿದುದು ಸುರಚಾಪಂ ॥ ೯೩ ॥

ಚಂ|| ಬೆಳೆದು ಪೊದಟ್ದಿ ನೀಟ್ದಿರುಣಶಾಲಿಯ ಸತ್ಕಣಿಶಾಳಿಯಂ ಶುಕಾ ।
ವಳಿ ನಡೆಗರ್ಚಿ ಪಾಱುವ ಬೆಡಂಗೆನಿಸಿದುರ್ದು ಚಂಡಭಾನುವಂ ॥
ಡಳಪರಿತಾಪ ವೆಯ್ದಿದ ಶರದ್ವಧುವಿಂಗೆ ಹರೀತದಂಡದಿಂ ।
ತೊಳಗುವ ಹೇಮಚಾಮರವ ನಿಕ್ಕಿದಪರ್ ದೆಸೆವೆಣ್ಗಳೆಂಬಿನಂ ॥ ೯೪ ॥

ವ|| ಕಳಮಕ್ಷೇತ್ರಸಮೂಹದೊಳ್ ಸುೞಿದು ನಾನಾಜಾತಿಸಪ್ತಚ್ಛದೋ ।
ತ್ಪಳಪುನ್ನಾಗಪಯೋಜಕುಂದಕುಸುಮಾಮೋದಂಗಳಂ ಪೀರ್ದು ನಿ ॥
ರ್ಮಳಮೇಘಂ ಬಿಡುತಿರ್ಪ ಬೆಳ್ಸರಿಗಳಿಂದಂ ನಾಂದಬೇಂ ಪಾಂಥಸಂ ।
ಕುಳಯಾನಶ್ರಮಹಾರಿ ಯಾದುದೊ ಶರತ್ಸಂಭೂತಶೀತಾನಿಳಂ ॥ ೯೫ ॥

ವ|| ಮತ್ತಂ ತತ್ಸಮಯಸಮಭಿರಾಮಸಂಧ್ಯಾಸಮಯದೊಳ್.

ಕಂ|| ವಿಪುಲಜಳಧರಕಳಂಕಮ ।
ನಪಹರಿಸಿದ ಗಗನ ಮೆಂಬ ಮುಕುರಮ ನಾಳೌೕ ॥
ಕಿಪ ಯುವರಾಜನ ಕೀರ್ತಿಯ ।
ಲಪನಪ್ರತಿಬಿಂಬ ಮೆನಿಸಿದುದು ಶಶಿಬಿಂಬಂ ॥ ೯೬ ॥

ವ|| ಅಂತು ಸಕಲಭುವನಪ್ರಸನ್ನಶೋಭಾವಭಾಸಿ ಯಾಗಿ.

ಚಂ|| ಎಸೆದಿರೆ ಮಿತ್ರಮಂಡಳ ಮುದಗ್ರಕದಂಬ ಮಡಂಗೆ ಕುಂದದೊ ।
ಳ್ಪೆಸವಳ ವಾಗೆ ಮಿಱುದಿರೆ ವಾಹಿನಿ ರಂಜಿಸೆ ರಾಜಲೀಲೆ ನ ॥
ರ್ತಿಸೆ ಕಮಲೋದಯಂ ಕುವಲಯಂ ಸುವಿಕಾಸಮ ನುಂಟುಮಾಡೆ ಪೋ ।
ಲ್ತೆಸೆದುದು ಶಾರದೀವಿಭವಮುಂ ಸಲೆ ನಾಟ್ಟ್ರಿಭುವಂಶಮೇರುವಂ ॥ ೯೭ ॥

ಗದ್ಯ

ಇದು ಸಮಸ್ತಭುವನಜನಸಂಸ್ತುತಜಿನಾಗಮಕುಮುದ್ವತೀಚಾರುಚಂದ್ರಾಯಮಾಣಮಾನಿತ
ಶ್ರೀಮದುಭಯಕವಿಕಮಳಗರ್ಭ ಮುನಿಚಂದ್ರ ಪಂಡಿತದೇವಸುವ್ಯಕ್ತ ಸೂಕ್ತಿ
ಚಂದ್ರಿಕಾಪಾನಪರಿಪುಷ್ಟಮಾನಸಮರಾಳ
ಗುಣವರ್ಮ ನಿರ್ಮಿತಮಪ್ಪ
ಪುಷ್ಪದಂತ ಪುರಾಣದೊಳ್
ಕುಮಾರೋದಯವರ್ಣನಂ
ನಾಮ
ಚತುರ್ಥಾಶ್ವಾಸಂ

# ಪುಷ್ಪದಂತ ಪುರಾಣಂ

## ಪಂಚಮಾಶ್ವಾಸಂ

ಕಂ॥ ಶ್ರೀಗೆ ಜಯಲಕ್ಷ್ಮಿಯುಂ ಸಮ ।
ಮಾಗಿಸ ಲುದ್ಯಮಿಸು ವೆನಗೆ ನೆರ ಮಾದುದಿದೆಂ ॥
ದಾಗಳೆರ್ದೆಗೊಂಡ ನಾಶರ ।
ದಾಗಮುಮಂ ಪ್ರಭುಗುಣಾಬ್ಜಿನೀಕಳಹಂಸಂ ॥ ೧ ॥

ವ॥ ಅಂತೆರ್ದೆಗೊಂಡು ತತ್ಸಮಯದೊಳ್ ತನ್ನ ಮನದ ಕಜ್ಜದುಜ್ಜುಗಮ ನಱಪಲೆಂದು ಚಿತ್ರಭಾನುದ್ವಿತೀಯನಾಗಿ ಬಂದಾಸ್ಥಾನಮಂಟಪದೊಳನೇಕಮಂಡಳಿಕದಂಡನಾಥಸಾಮಂತಮಂತ್ರಿಮಂಡಳಪ್ರಮುಖಪರಿಜನಸಮೇತ ಮೊಡ್ಡೋಲಗಂಗೊಟ್ಟಿರ್ದ ನಿಜಜನಕನಂಘ್ರಿವನಜಕ್ಕೆ ವಿನಯದಿಂ ದೆಱಗಿ ಸಮುಚಿತಾಸನಪ್ರದೇಶಮ ನಲಂಕರಿಸಿ.

ಕಂ॥ ಕನಕಾದ್ರಿಯ ನೆಳಸುವ ನೂ ।
ತನಚಂದ್ರಿಕೆಯಂತಿರೆಳಸೆ ದಶನದ್ಯುತಿಗಳ್ ॥
ಜನಪತಿಯುಂ ನುಡಿದಂ ಮೆ ।
ಲ್ಲನೆ ಮುಕುಳಿತಕರಸರೋಜ ನಾಯುವರಾಜಂ ॥ ೨ ॥

ಮ॥ ಪೊಡೆರ್ವತ್ಯುದ್ಧತರಾಜವಂಶವನಮಂ ನಿರ್ಮೂಲಿಸಲ್ ಪೋಪೆ ನೆಂ ।
ಬೊಡೆದಂ ಮುನ್ನಮೆ ನಿಮ್ಮ ವಿಕ್ರಮದವಾಗ್ನಿಜ್ವಾಲೆ ತಳ್ತಿರ್ದುದಾ ॥
ಪಡೆಮಾತಿರ್ಕೆ ಭವತ್ಪ್ರತಾಪಕಥೆಯುಂ ಪ್ರತ್ಯಂತಭೂಚಕ್ರದೊಳ್ ।
ಬಿಡೆ ಕೇಳ್ವಾಗ್ರಹ ಮಾಯ್ತುನುಗ್ರಹಿಪು ದೆನ್ನಂ ದೇವ ಕಾರುಣ್ಯದಿಂ ॥ ೩ ॥

ವ॥ ಎಂದು ವಿನಯೋಕ್ತಿಯನೆ ಮುಂದಿಟ್ಟು ನುಡಿದ ಚಾತುರ್ಯಚತುರಾನನ ನುಡಿಗೆ ಚತುರ್ಮುಖಸಾಧನೋದ್ಯೋಗಗರ್ಭ ಮಪ್ಪ ಭಿಪ್ರಾಯಮಂ ಜಲಕ್ಕ ನಱಿದು ಪದ್ಮರಾಜಂ ವಿಕೀರ್ಣದರಹಾಸ ನಿಂತೆಂದಂ.

ಉ॥ ನಿಮ್ಮ ಭುಜಪ್ರತಾಪವನವಹ್ನಿಗೆ ಮುನ್ನೊಳಗಾದ ವೈರಿವಂ ।
ಶ ಮ್ಮಗುಱಿದ್ದುರ್ವಿ ಕೊರ್ವುಗು ಮದಂ ನಿಶಿತಾಸಿಕುಠಾರದಿಂ ಪೊಡ ॥
ರ್ಪ ಮ್ಮೆಱಿದಾಂ ಪಡೆಲ್ವಡಿಪೆ ನೆಂದು ಜಲಕ್ಕನೆ ಪೇಱಲೊಲ್ಲದೇ ।
ನಮ್ಮ ಯಥಾರ್ಥಮಂ ಮಱಿಸಿ ಮತ್ತಿನ ಸುತ್ತಿನ ಮಾತ ನಾಡುವೈ ॥ ೪ ॥

ಮ॥ ವಿಹಿತಂ ಕ್ಷತ್ರಿಯನಂದನಂಗೆ ದಿಟ ಮೆಂತುಂ ನೀತಿಯೊಳ್ ದುಷ್ಟನಿ ।
ಗ್ರಹಶಿಷ್ಟಪ್ರತಿಪಾಲನಂಗ ಳದಱಿಂ ನಿನ್ನುದ್ಯಮಂಮಾಣಿಪಾ ॥
ಗ್ರಹಮಂ ಪುಟ್ಟಿಸುವಂತುಟಲ್ತು ವಿಜಯಂಗೆಯ್ದಪ್ಪುಗೆಯ್ ನೀಂ ಮಹಾ ।
ಮಹಿಪಶ್ರೀ ಗೆಡೆಯಾಗಿ ವಿಶ್ರುತಜಯಶ್ರೀಯುಂ ಯಶಶ್ರೀಯುಮಂ ॥ ೫ ॥

ವ॥ ಎಂದಿಂತು ನುಡಿದ ಬುದ್ಧಿಗೆ ವಿನಯಮುಂ, ಪ್ರಿಯಮು ಮಪ್ಪುದಱಿಂ ನಾಳೋಚಿತಮಂತ್ರಿಜನನಾಗಿ ತನ್ನೆಂದುದನೊಡಂಬಟ್ಟು ತದನಂತರಂ ವೈಶ್ರವಣಸಹಿತಂ ಬಹುಪ್ರಕಾರಕಥಿತನೃಪನೀತಿವಿಭೂತಿಯಿಂ ಮನೋದರ್ಪಣಮ ನುಜ್ಜ್ವಳಿಸಿದಾತ್ಮಜನಕನಂ ಬೀೞ್ಕೊಂಡು ಪರಮಪರಿತೋಷದಿಂದ ಮಾಸ್ಥಾನಭವನಮಂ ಪೊಱಮಟ್ಟಂತಃಪುರಕ್ಕೆ ವಂದು ವನಮಾಳಿಕಾಮಹಾದೇವಿ ಗವನತೋತ್ತಮಾಂಗನುಂ, ನಿವೇದಿತನಿಜಪ್ರಯಾಣಾಭಿಪ್ರಾಯನು ಮಾಗಿ ತದಾಶೀರ್ವಾದನಿರ್ಘೋಷಶೇಷಾಕ್ಷತಂಗಳಂ ತಳೆದಲ್ಲಿಂದ ಮಾತ್ಮಭವನಕ್ಕೆ ಬಿಜಯಂಗೆಯ್ದು ಶುಭಮುಹೂರ್ತದೊಳ್.

ಕಂ॥ ಸೆರಪಲ್ ವೇೞ್ದಿಂ ಕೃತರಿಪು ।
ನರೇಂದ್ರಭಂಗಮ ನುದಗ್ರಜಯತುಂಗಮ ನು ॥
ದ್ಧುರಸುಭಟಸಂಗಮಂ ಚಾ ।
ತುರಂಗಮಂ ನಿಜಬಳಾಧಿಪತಿಗೆ ಕುಮಾರಂ ॥ ೬ ॥

ವ॥ ಆ ಪ್ರಸ್ತಾವದೊಳ್.

ಮ॥ ಪರಮಾಚಾಳನೃಪಾಳಜಾಳಕುಳನಾಶೋತ್ಪಾತನಿರ್ಘಾತಮಾ ।
ತರಮಂ ವಿಕ್ರಮನಾಟಕಾಭಿನಯನಾಂದೀಮಂಗಳಾತೋದ್ಯಹೃ ॥
ದ್ಯರವಂ ತಾ ನೆನೆ ಘೂರ್ಣಿಸಿತ್ತು ವಿಲಸತ್ಸೌವರ್ಣಕೋಣಾಹತಿ ।
ಸ್ಫುರಿತಂ ಶ್ರೀ ಯುವರಾಜದೇವವಿಜಯಪ್ರಸ್ಥಾನಭೇರೀರವಂ ॥ ೭ ॥

ಚಂ॥ ಬೆದಱಿದು ದಭ್ರಮೂರಮಣ ನೊಟ್ಟಜೆಗೆಟ್ಟುದು ಪುಂಡರೀಕ ಮು ।
ಱಿದ್ದುದು ಕುಮುದಂ ತಡಂಗೆಡೆದು ದಂಜನ ಮುಕ್ಕುಡಿಗಿತ್ತು ವಾಮನಂ ॥
ಬಿದಿರ್ದುದು ಪುಷ್ಪದಂತ ಮತಿವಿಹ್ವಲ ಮಾದುದು ಸಾರ್ವಭೌಮ ಮಂ ।
ದದಿರ್ದುದು ಸುಪ್ರತೀಕ ಮಿರದಾಲಿಸಿ ತತ್ಪಟಹಪ್ರಣಾದಮಂ ॥ ೮ ॥

ವ॥ ಎನಿಸಿ ಗಗನದಿಗವನೀವ್ಯಾಪ್ತಮಾದ ವಿಜಯಪ್ರಯಾಣದುಂದುಭಿಧ್ವಾನ ಮೆಸೆಯುತೊಡಂ.

ಮ॥ಸ್ರ॥ ಮದಧಾರಾವೃಷ್ಟಿ(ಪಂಕಂ)ಮಸಗಿಸೆ ನೆಲನಂ ಘೋಷಘಂಟಾರವಂ ದಿ ।
ಗ್ರದನೀಶ್ರೋತ್ರಕ್ಕೆ ಸಂಪಾದಿಸೆ ಬಧಿರತೆಯಂ ಪುಷ್ಪಕಾನದ್ಧನಾನಾ ॥
ಕದಳೀಜಾಳಾಂಬರಂ ಚುಂಬಿಸೆ ಘನಪಥಮಂ ಬಂದುದಂದನ್ಯಚಕ್ರ ।
ಕ್ಕಿದು ಕಳ್ಪಾಂತಾಭ್ರ ಮೆಂಬಂತುದಿತರಿಪುಮನೋದೈನ್ಯ ಮುಗ್ರೇಭಸೈನ್ಯಂ ॥ ೯ ॥

ಮ॥ಸ್ರ॥ ಜವದಿಂ ಸೌಪರ್ಣನಂ ಮಾರುತಸುತನ ನನೂನಾನ್ವಯಶ್ರೀಯಿ ನುಚ್ಚೈ ।
ಶ್ಶ್ರವಮಂ ಸೂರ್ಯಾಶ್ವಮಂ ವರ್ಣದಿ ನಮರಥನುದ್ಯೋತಿಯಂ ಪಂಚರತ್ನ ॥
ಚ್ಛವಿಯಿಂ ಕೀೞ್ಮಾಡ್ಪಿ ಸಲ್ಲಕ್ಷಣಗುಣನಿಧಿಗಳ್ ಪಲ್ಲಣಂಗಟ್ಟಿ ಬಂದಿ ।
ರ್ದುವು ಹೇಷಾಘೋಷವಿದ್ರಾವಿತರಿಪುಮಹಿಭೃಚ್ಚಾತುರಂಗಂ ತುರಂಗಂ ॥ ೧೦ ॥

ಮ॥ಸ್ರ॥ ಪರಚಕ್ರಕ್ಕೀಗ ಳೀಪಲ್ಮೊರೆದನೆ ಜವ ನೆಂಬಂತತಿಸ್ಫಾರಚೀತ್ಕಾ ।
ರರವಂ ದಿಕ್ಪಾಲರಂ ಕೇಳಿಸೆ ವಿನಿಹಿತಸೂತಂ ಪ್ರಪೂರ್ಣಾಸ್ತ್ರಜಾತಂ ॥
ಗುರುಚಕ್ರಕ್ಷುಣ್ಣಮಾರ್ಗಂ ಸಮಧಿಕರಥಿಸಂಸರ್ಗ ಮುದ್ಯತ್ಪತಾಕಾಂ ।
ಬರ ಮುಗ್ರಾಡಂಬರಂ ಬಂದುದು ವಿಧೃತಮಹಾವಾಜಿಯೂಥಂ ವರೂಥಂ ॥ ೧೧ ॥

ಚಂ॥ ಮಣಿಯುದೆ ಬಂದು ಗೊಂದಣಿಸಿ ದಡ್ಡಣದೊಡ್ಡಣದುರ್ಬು ಬಿಲ್ಲ ಬ ।
ಲ್ಲಣಿಯ ತೆರಳ್ಕೆ ಭಾರ್ಗವರ ಪೊಗ್ಗರದೊಬ್ಬುಳಿ ಕುಂತದಾಳ ತಿಂ ॥
ತಿಣಿ ನೆಱೆದ ತಮ್ಮತಮ್ಮ ಬಿರುದಂ ಪಱೆಯುಂ ಕಹಳಾರವಂಗಳುಂ ।
ಪ್ರಣಿಹಿತಕೇತುಚಿಹ್ನಮು ಮಿಳಾವಳಯುಕ್ಕಱಪುತ್ತು ಮಿರ್ಪಿನಂ ॥ ೧೨ ॥

ವ॥ ಅಂತತಿಪ್ರಬಳ ಮಾಗಿ ನೆಱೆದು.

ಮ॥ ಗಣನಾತೀತ ಮದೀ ನದೀ ನೆಸೆದುದೋ ಪಾದಾಭಿಘಾತಸ್ಫುರ ।
ತ್ಫಣಿರಾಜಸ್ಫಟಿಗಳ್ ಮದೇಭಘಟೆಗಳ್ ಜೈತ್ರಾಜಿಗಳ್ ವಾಜಿಗಳ್ ॥
ರಣಕೇಳೀರಸರಕ್ತಸೂತರಥಿಯೂಥಂಗಳ್ ವರೂಥಂಗ ಳುಂ ।
ಲ್ಬಣಶಸ್ತ್ರಾಸ್ತ್ರಗಭಸ್ತಿವಿಸ್ತೃತವಿಯದ್ದಿಗ್ಭಿತ್ತಿಗಳ್ ಪತ್ತಿಗಳ್ ॥ ೧೩ ॥

ವ॥ ಆಗಳಾಚತುರಂಗಬಲಜಲಧಿಯೊಳಗೆ ನೆಗೆದ ತೆರೆದುಱುಗಲಂತೆ ಮಿಱುಪ ಬೆಳ್ಗೊಡೆಯ ಬಳಗಮುಂ, ಮಿಳಿರ್ದು ಪೊಳೆವ ಸಪ್ತರ್ಷಿಸಮಾಜದಂತೆ ಸಂಚರಿಸಿ ಮಿಂಚುವಲಗುಗಳ ನೆಸೆವ ಪೆಸರ ಕೆಯ್ದುಗಳುಂ, ಉಜ್ಜ್ವಳಿಪವಿದ್ರುಮಲತಾಂಕುರದಂತೆ ಕೆಂದಳಿರ ತೊಂಗಲಂತೆ ಪಸರಿಸುವ ಪದ್ಮರಾಗ ಮುಕುಟಮುಂ, ಪ್ರಬಲಪವಮಾನಸಮುದೀರ್ಣಘೂರ್ಣನಧ್ವಾನದಂತೆ ನೆಗೞ್ವ ವಿವಿಧವದಿಱ ವಱೆ ಗಳಬ್ಬರಮು ಮಾತ್ಮೀಯರಾಜಲೀಲೆಯಂ ನೆಱೆಯೆ ಮೆಱೆಯೆ ಬಂದು ಬಾಗಿಲ್ವಾಡದೊಳ್ ತಂತಮ್ಮ ವಾಹನಂಗಳ ನಿೞಿದು.

ಕಂ॥ ಯುವರಾಜಂ ಬಿಜಯಂಗೆ ।
ಯ್ವೊ ವಸರಮನೆ ಪಾರ್ದು ಪೊಱಗೆ ಪೊಡವಡೆ ವಳಿಪಿಂ ॥
ತವತವಗೆ ಮುಂಚಲಿರ್ದರ್ ।
ವಿವಿಧನೃಪೋತ್ತುಂಗ ರುಚಿತಕವಚಭೃತಾಂಗರ್ ॥ ೧೪ ॥

ವ॥ ಅನ್ನೆಗ ಮಿತ್ತಲರ್ಚಿತಜಿನೇಂದ್ರಚರಣಾರವಿಂದದ್ವಂದ್ವನುಂ, ವಂದಿತಾರ್ಯಜನಸಮಾಜನುಂ, ಪ್ರವರ್ತಿತಪಾತ್ರದಾನವಿಧಾನನುಂ, ನಿರ್ವರ್ತಿತಗಜವಾಜಿನೀರಾಜನನುಂ, ಅಂಗೀಕೃತಶೃಂಗಾರ ಮಾಂಗಲ್ಯವೇಷನು ಮಾಗಿ ಗಣಕಗಣಗಣಿತಪ್ರಶಸ್ತಲಗ್ನದೊಳ್ ನಿಜೋತ್ತುಂಗಸಿಂಹಾಸನದೊಳಿರ್ದು ಪರಸುವರಸುಗುಲದಾರ್ಯಕುಲದ ಜಯ ಜೀವ ನಂದ ರಭಸಂಗಳುಂ, ಪಠಿಯಿಸುವ ಚಾರಣಮುಂ ಗಳೋಚ್ಚಾರಣಂಗಳುಂ, ಸೇಸೆಯಿಕ್ಕುವುನ್ಮದವಿಳಾಸಿನೀಜನದ ಮಣಿಕಂಕಣಕ್ವಣಿತಂಗಳುಂ, ನೆಲನ ನುಗ್ಗುಡಿಪ ಪಡಿಯಱರ ಸಡಗರಂಗಳುಂ, ಪೂರಯಿಸುವ ಧವಳಶಂಖಭಾಂಕಾರರುತಿಗಳುಂ, ಬಾಜಿಸುವ ವಿವಿಧಪ್ರಯಾಣಪಟಹಂಗಳುತ್ಸವಧ್ವನಿಗಳುಂ, ಮೊತ್ತುವ ಪೊನ್ನ ಸನ್ನೆಗಾಳೆಗಳ ಕೋಳಾಹಳಂಗಳು ಮಳುಂಬ ಮಾಗೆ ಚಿತ್ರಭಾನುದತ್ತಹಸ್ತಾವಳಂಬ ನಾಗಿ ಕತಿಪಯಪದಂಗಳಂ ತಳರ್ದು ನಿಜಪ್ರಾಸಾದಪುರೋಭಾಗದೊಳ್.

ಮ॥ ವಿಲಸತ್ಪುಷ್ಕರಶೀಕರಪ್ರಸರದಿಂ ನೇಸಿಕ್ಕುತಿರ್ಪಂತೆ ಮುಂ ।
ಜುಳಘುಂಟಾರವದಿಂದ ಮೊಲ್ದು ಪರಸುತ್ತಿರ್ಪಂತೆ ದಾನಭ್ರಮ ॥
ತ್ಕಳಭೃಂಗೀರವದಿಂದೆ ಗಾವರಿಸುತಿರ್ಪಂತುದ್ಘಮಾಂಗಲ್ಯಮಂ ।
ತಳೆದೊಪ್ಪಿರ್ದುದ ನೇಱಿದಂ ದ್ವಿರದಮಂ ವ್ಯಾಳೀಭವಜ್ರಾಂಕುಶಂ ॥ ೧೫ ॥

ವ॥ ಆಗಳ್.

ಚಂ॥ ಅಮಳಮುಖೇಂದುಗಱಿಕ್ಕಿ ನಭಮಂ ಪುಗೆ ಕೀರ್ತಿಯ ನಟ್ಟ ಮುತ್ತಮಾ ।
ಕ್ರಮಿಸುವ ನೀತ ನಲ್ಲಿ ಪಗೆ ಪೊಲ್ಲದು ಕಾಣ್ಬುದು ಕಜ್ಜಮೆಂದು ಬಂ ॥
ದಮೃತಮರೀಚಿ ಕಂಡು ನಡೆದರ್ಪನೆನಲ್ ಮನುಜೇಂದ್ರಮಂದರಂ ।
ಗಮರ್ದೆಸೆದಿರ್ದುದಾದಲೆಯೊಳೆತ್ತಿದ [ಮುತ್ತಿನ] ಮೇಘಡಂಬರಂ ॥ ೧೬ ॥

ಕಂ॥ ನವರಾಜ್ಯನಳಿನವನದೊಳ ।
ಗವಯವದಿಂ ನಲಿದು ನರ್ತಿಪಂಚೆಗಳೆನೆ ಬೀ ॥
ಸುವ ಧವಳಚಾಮರಂಗಳ್ ।
ಯುವರಾಜನ ಕೆಲದೊಳೆಸೆದು ವತಿಲಲಿತಂಗಳ್ ॥ ೧೭ ॥

ವ॥ ತದನಂತರ ಮಖಂಡನಾಯೋಗಮಂಡಿತಂಗಳುಂ, ಮಾರೂಢಮಹಾಮಾತ್ರವಿಚಿತ್ರಾಂಕುಶ ಪ್ರಚಾರಣಮುಮಪ್ಪ ವಲ್ಲಭಗಜವ್ರಜಂಗಳುಂ; ಖಣಖಣಾಯಿತಖಲೀನಕಷಣಗಳಿತಲಪನಲಾಲಾಂಬು ಫೇನಪಲ್ಲವಸ್ತಬಕಿತಮುಖಂಗಳುಂ, ನಿಬದ್ಧಮಣಿಮಯಾಭರಣಕಿರಣಕಿರ್ಮ್ಮೀರಕಾಯಕಮನೀಯಾ ಕಾರಮುಮಪ್ಪ ಪಟ್ಟಸಾಹಣಹಯಚಯಂಗಳುಂ; ಬಳಸಿ ಗೊಂದಣಿಸೆ ರಾಜಗೇಹಮಂ ಪೊಱ ಮಟ್ಟು ಪೊಱಗೆ ತಮತಮಗೆ ವಿನಯವಿನಮಿತೋತ್ತಮಾಂಗರಾದ ರಸುಮಕ್ಕಳಂ ಸದಯಾವಳೋ ಕನದಿಂ ಪರಸಿ ನಿಜನಿಜವಾಹನಂಗಳ ಮೇಱಿ ಮೆಂದು ಬೆಸಸಿ,

ಮ॥ ವಿಲಸದ್ಭೂಭುಜಕೋಟಿ ಮುಂದೆ ವರೆ ವಾರಸ್ತ್ರೀಜನಂ ಪಿಂದೆ ದೋ ।
ರ್ವಳದೃಪ್ತಂ ತಳತಂತ್ರ ಮಿರ್ಕೆಲಮೊಳಿಂಬಾಗಿರ್ಪಿನಂ ಲೀಲೆಯಿಂ ॥
ತಳರ್ದಂ ಕೆಮ್ಮುಗಿಲಂ ಮುಸುಂಕು ಮೆಳಮಿಂಚೆಂಬಂತೆ ಸುತ್ತುತ್ತಿರಲ್ ।
ಪೊಳಯಿಪ್ಪಂಕುಶಕಾಂತಿದಾನಗಜಮಂ ವ್ಯಾಳೀಭವಜ್ರಾಂಕುಶಂ ॥ ೧೮ ॥

ಮ॥ ಪಿಡಿ ಪೇರಾನೆ ಸುಖಾಸನಂ ಸಿವಿಗೆ ಲೀಲಾವಾಜಿ ರಾರಾಜಿಸಲ್ ।
ಕೊಡೆ ಕುಂಚಂ ತಟಿತಿ ಚಾಮರಂ ಕುರುಳಕೊಂತಂ ತಳ್ತಿರಲ್ ತಂಡದಿಂ ॥
ದೊಡನೆಟ್ಟಿಂದುದು ಪೆಂಡವಾಸದಬಲಾನೀಕಂ ಜನಾಲೋಕಮಂ ।
ಕಡುಚೆಲ್ವಿಂ ತಣಿವುತ್ತುಮಂಗಜನ ಬಲ್ದಂದೆತ್ತಿ ಬರ್ಪಂದದಿಂ ॥ ೧೯ ॥

ವ|| ಮತ್ತಂ.

ಕಂ|| ಬಾಸಣಿಸಿದ ಮದನನ ಬಾ ।
ಣಾಸನದವೊಲೆಸೆವ ಚಾರುರುಘುಂಪಾಣದೊಳು ||
ದ್ಭಾಸಿನಿಯರ್ ನೃಪಸುತನ ವಿ ।
ಳಾಸಿನಿಯರ್ ಬಂದರೇಱಿ ಪೊನ್ನಂದಣಮಂ || ೨೦ ||

ಚಂ|| ಪ್ರಕಟಿಸಿದತ್ತು ಪದ್ಮಜನ ಪಕ್ಕದೊಳೆಲ್ಟಿರ ಹಾತ್ಮಲೀಲೆಯಿಂ ।
ಸುಕವಿಕದಂಬಕಂ ಕಥಕಸಂಹತಿ ವಾಚಕಕೋಟಿ ಪುಣ್ಯಪಾ ||
ಠಕತತಿ ಗಾಯಕಪ್ರತತಿ ವಾದಕಮಂಡಳಿ ನರ್ತಕಾಳಿ ವಾಂ ।
ಶಿಕಕುಳ ಮಿಂದ್ರಜಾಲಿಕಗಣಂ ಗಣಕಾವಳಿ ಚಿತ್ರಕವ್ರಜಂ || ೨೧ ||

ವ|| ತದನಂತರಂ ನೂತ್ನರತ್ನಾಕರಪ್ರದೇಶದೊಳೆ ನಡೆವ ವರುಣನಂತೆ ಧರಣೀಶನಂದನಂ ಚಂಚತ್ಪಂಚರತ್ನತೋರಣವಿರಾಜಮಾನ ಮಪ್ಪ ರಾಜಮಾರ್ಗದೊಳೆ ಬರ್ಪ ಸಮಯದೊಳ್.

ಕಂ|| ತೊಡುವುಡುವ ತುಡುವ ಪೂಮುಡಿ ।
ವಡಿವೊಡುವ ನೆತ್ತಮಾಡು ವೋಪರೊಳೊಲವಿಂ ||
ದೊಡಗೂಡುವ ದಂಪುಗ ಮಿರೆ ।
ನಡೆತಂದರ್ ನೋಟ್ಪ ತವಕದಿಂ ದೊಳ್ವೆಂಡಿರ್ || ೨೨ ||

ವ|| ಅಂತು ನಿಜವ್ಯಾಪಾರಪರಂಪರೆಯು ನುೞಿದು ಕೆಲರ್ ಬಣ್ಣವಿಟ್ಟ ಲೆಪ್ಪದ ತಿಣ್ಣ ರೂಪುಗಳಂತೆ ಸೌಧಶಿಖರಂಗಳ ನಲಂಕರಿಸಿಯುಂ, ಕೆಲಬರ್ ತೆತ್ತಿಸಿದ ಪುತ್ತಳಿಗಳಂತೆ ಪೊನ್ನಮಾಡದ ನೆಲೆಗಳೊಳ್ ನೆಲಸಿಯುಂ, ಕೆಲರ್ ಜಿನಶಾಸನದೇವತೆಯರಂತೆ ಚೈತ್ಯಕೂಟಂಗಳೊಳ್ ಮನಂಗೊಳಿಸಿಯುಂ, ಕೆಲರ್ ವಸಂತಕಾಂತೆಯರಂತೆ ಭವನವನತರುಸ್ಕಂಧದೊಳ್ ನಿಂದುಂ, ಕೆಲರ್ ಗಗನಚರಿಯರಂತೆ ಮುಗಿಲಟ್ಟಳೆಗಳೊಳ್ ಸೊಗಯಿಸಿರ್ದುಂ, ಕೆಲಬರ್ ಪುರಮುಖಶ್ರೀಕಳೆಗಳಂತೆ ಗೋಪುರಾಗ್ರಂಗಳೊಳ್ ಸಂಗತೆಯರಾಗಿಯುಂ, ಮನದೆ ಗೊಂಡು ಸಂದಣಿಸಿ ನೋಡುವಲ್ಲಿ.

ಕಂ|| ಎಳಮಿಂಚಿನ ನನೆ ಯಂಬಿನ ।
ಜಳಜದ ಕರ್ನೆಯ್ದಿಲೆಸಳ ಬೆಳ್ದಿಂಗಳ ಮಿಾಂ ||
ಗಳ ಚೆಲ್ವ ನುಗುಳ್ದ ವಾಕೋ ।
ಮಳೆಯರ ತಳತಳಿಸಿ ಪೊಳೆವ ತುಱುಗೆಮೊಗಣ್ಗಳ್ || ೨೩ ||

ಚಂ|| ಬೆಳತಿಗೆಗಣ್ಣ ಬೆಳ್ಪು ನಗೆಗಣ್ಣ ಮುಗುಳ್ನಗೆ ಚೆಲ್ಲಗಣ್ಣ ಚಾ ।
ಪಳ ಮಲರ್ಗಣ್ಣ ಬಳ್ವಳಿಕೆ ಮಿಾಂಬೊಣರ್ಗಣ್ಣ ನಿಮಿರ್ಕೆ ಸೊಕ್ಕುಗ ||
ಣ್ಣಳಸತೆ ಪುಲ್ಲೆಗಣ್ಣೆಳತೆ ತಳ್ತೆಮೊಗಣ್ಣ ತೆಗುಳ್ಪು ತೋಱಿಗ ।
ಣ್ಬೆಳಸಿನ ಸುಗ್ಗಿಗಾಣ ಲಣಹಾಯ್ತು ಪುರಪ್ರಮದಾಜನಂಗಳೊಳ್ || ೨೪ ||

ಚಂ॥ ತಿಳಿಗೊಳದಂತೆ ರಮ್ಯವನದಂತೆ ರವಿದ್ಯುತಿಯಂತೆ ಜೊನ್ನದಂ ।
ತೆಳಸಿರಿಸಿತ್ತವಳ್ದಿರ ಲಸಜ್ಝಷನೇತ್ರಮ ನೇಣನೇತ್ರಮಂ ॥
ಜಲರುಹನೇತ್ರಮಂ ಕುಮುದನೇತ್ರಮ ನಾಯುವರಾಜಯಮ್ವನೋ ।
ಜ್ಜ್ವಳತನು ವೆಳ್ಗಿ ಸಾಧಿಸಿದುದೋ ಬಹುರೂಪಿಣಿ ಯೆಂಬ ವಿದ್ಯೆಯಂ ॥ ೨೪ ॥

ವ॥ ಆಗಳೊರ್ವಳ್.

ಮ॥ ವಿಸರನ್ಮೌಕ್ತಿಕಮಂಡನಪ್ರಭೆ ನಿಜಾಂಗಕ್ಕೀಯೆ ಬೆಳ್ಪಂ ಮುದಾ ।
ಲಸಕಾಂತಾಜನಲೋಚನಂ ತನುಲತಾಲಾವಣ್ಯದೊಳ್ ತೀವಿ ಬಿಂ ॥
ಬಿಸೆ ತತ್ಪದ್ಮನರೇಂದ್ರನಂದನನ ನಂದ್ಯೈರಾವತಾರೂಢ ನಾ ।
ದ ಸಹಸ್ರಾಕ್ಷನೆಗೆತ್ತು ಮಾನಿನಿ ಮನೋವಿಭ್ರಾಂತಿಯಿಂ ನೋಡಿದಳ್ ॥ ೨೬ ॥

ವ॥ ಮತ್ತಮೊರ್ವ ಳಭಿನವಮದೋನ್ಮತ್ತೆ ಯೆನಿಸಿ.

ಮ॥ ಉಗಿಯಲ್ಕಂಕುಶದಿಂ ತೊಡಂಕಿ ಪಱಿದತ್ತಂ ಸೋರ್ವ ನಕ್ಷತ್ರಮಾ ।
ಲೆಗಡರ್ಪಾದ ಮನೋಜಸಾಮಜಲಸತ್ಕುಂಭಂಗಳೆಂಬಂತೆ ಹಾ ॥
ರಗಳನ್ಮೌಕ್ತಿಕದಿಂ ನಖಕ್ಷತಯುತಂ ವಕ್ಷೋಜಯುಗ್ಮಂ ಮನಂ ।
ಬುಗೆ ರಾಗಂ ಮಿಗೆ ಮೇಲುದಂ ಮುಱಿದು ನೋಟ್ಪಿಬ್ಜಾಕ್ಷಿ ಕಣ್ಗೊಪ್ಪಿದಳ್ ॥ ೨೭ ॥

ವ॥ ಮತ್ತಮೊಂದು ರಮ್ಯಹರ್ಮ್ಯತಳದೊಳಗಣಿಂ ದೆಱಗಿ ನೋಡಲ್ ಪೊಱಮಟ್ಟು.

ಮ॥ಸ್ರ॥ ಕೃತಸದ್ಯಃಕಾಮುಕೇಳೀಭರವಿರಮಣಮಂ ಮಂದನಿಶ್ವಾಸ ಮಾಕಂ ।
ಪಿತಗಾತ್ರಂ ರಕ್ತನೇತ್ರಂ ನವನಖಲಿಖಿತಕ್ಷುಣ್ಣವಕ್ಷಸ್ಥಳಂ ವಿ ॥
ಸ್ರೃತಕೇಶಂ ಕೀರ್ಣನೀಲಾಳಕ ಮುದಿತಮುಖಸ್ವೇದ ಮುತ್ಸಿಪ್ತಕಾಂಚೀ ।
ಲತೆ ಸಂದಷ್ಟಾಧರಂ ಸೂಚಿಸೆ ನೃಪಸುತನಂ ನೋಡಲೆಯ್ತಂದಳೊರ್ವಳ್ ॥ ೨೮ ॥

ವ॥ ಮತ್ತಮೊರ್ವಳಾಕುಮಾರಕನ ಗಾಡಿಯಂ ನಡೆ ನೋಡಿ ತಣಿಯದೆ ಬೆಂಬಿಡಿದು ಪರಿವ ಮುಗ್ಧನಿತಂಬಿನಿಯ ಕೆಯ್ಯಂ ಪಿಡಿದು.

ಉ॥ ಸಾಲದೆ ನೋಟದಿಂ ಪರಿದು ನೊಟ್ಟಿಲ್ಪೊಡೆ ನಿನ್ನ ನಿತಂಬಭೂರಿಭಾ ।
ರಾಲಸಯಾನ ಮೆಯ್ದಿಸದದಲ್ಲದೆಯುಂ ಮಗುಟ್ದೀಸಡಿಲ್ವ ಕಾಂ ॥
ಚೀಲತೆ ಬೀೞಿ ತಳ್ತು ತೊಡೆಸಂಕಲೆಯಾದಪು ದಂತು ಪೋಪೆ ನಿಲ್ ।
ಬಾಲಿಕೆ ಪದ್ಮಜಂ ಮಗುಟ್ಟಿ ಬಂದಪ ನಿಕ್ಕಯೆ ನಿಂದು ನೋಡುವಂ ॥ ೨೯ ॥

ಕಂ॥ ಗಾಡಿ ಕಡೆಗಣ್ಮೆ ಪೊಸಪೊಂ ।
ಮಾಡದ ಮೇಗಿರ್ದು ನೋಟ್ಪ ಸತಿಯ ಮೊಗಂ ಕೀ ॥
ಱ್ಮಾಡಿದುದು ಮಂದರಾಚಲ ।
ಚೂಡಾಸನ್ನಿಧಿಯೊಳಿರ್ದ ಶಶಿಮಂಡಲಮಂ ॥ ೩೦ ॥

ವ॥ ಮತ್ತಮೊಂದೆಡೆಯೊಳ್.

ಕಂ॥ ಮುಡಿ ಬಿಟ್ಟು ಪಿಂದೆ ಸಸಿನಂ ।
ಮಡೆಗಾಲ್ಗಿೞಿದಿರೆ ಮೃಗಾಕ್ಷಿ ನಿಂದೀಕ್ಷಿಸುತಿ ॥
ರ್ಪೆಡೆಯೊಳ್ ಪೋಲ್ತಳ್ ನೀಲದ ।
ನಿಡುಗಂಬದೊ ಳಮರ್ದ ಪೊನ್ನ ಪೊಸಪುತ್ಥಳಿಯಂ ॥ ೩೧ ॥

ವ॥ ಆಕರ್ಣಿಕಾರವರ್ಣಿಯ ಪಕ್ಕದೊಳ್.

ಮ॥ ಕಳಶಂ ಪೆರ್ಮೊಲೆ ರನ್ನಗನ್ನಡಿ ಲಲಾಟಂ ಲಾಜೆ ದಂತಾಂಶು ಕೆಂ ।
ದಳಿರ್ಗಳ್ ಕೆಂದಳ ಮಂಚಳಂ ಗುಡಿ ಕಟಾಕ್ಷಶ್ರೇಣಿ ಪೂಮಾಲೆ ನಿ ॥
ರ್ಮಲಹಾರಂ ಮಣಿತೋರಣಂ ಸುಲಲಿತಭ್ರೂ ದೂರ್ವೆ ಯಾಗಲ್ಕೆ ಕೋ ।
ಮಳೆ ಯೊರ್ವಳ್ ನೃಪನಂದನಂಗೆ ಮೆಱೆದಳ್ ಮೆಯ್ವೆತ್ತ ಮಾಂಗಲ್ಯಮಂ ॥ ೩೨ ॥

ವ॥ ಮತ್ತಮೊರ್ವಳ್ ವಿನಯಪ್ರಾಕಾರ ನಾಕಾರಮಂ ಕಂಡು ಕಣ್ಸೋಲ್ತು ಕಾಮಪರವಶತೆಯಿಂ ಸಂಕಲ್ಪಸಂಭೋಗಕ್ರೀಡೆಗೆ ಮೆಯ್ದುಂದು ಬಹಳಜನನಿರ್ದಯಪ್ರಮರ್ದದೊಳ್ ನಿಷ್ಫಲಾರಂಭಸುಭಗೆ ಯಾಗುತ್ತಿರ್ದೊಡವಳ ಕೆಳದಿ ಯಿಂತೆಂದಳ್.

ಚಂ॥ ನನೆಗಣೆ ನಾಂಟೆ ನಾಣೞಿದು ನೋಟದ ದಂದುಗಮಂ ಬಿಸುಟ್ಟು ನೀಂ ।
ನೆನಪದೊಳೀ ಕುಮಾರನೊಡಗೂಡಲಪೇಕ್ಷಿಸಿ ಮುಚ್ಚಿ ಕಣ್ಗಳಂ ॥
ಮನದೊಳಿದೇಕೆ ಜಾನಿಸುವೆ ಮಂದಿಯೊಳಾಗದು ಚಿತ್ತಶುದ್ಧಿ ಮು ।
ನ್ನನುಭವಿಸಕ್ಕ ಕಣ್ದೆಱೆದು ದರ್ಶನಸೌಖ್ಯಮ ನೀಗಳನ್ನೆಗಂ ॥ ೩೩ ॥

ವ॥ ಎಂದು ಬಾರಿಸಿದ ಳತ್ತ ಮಂದಿಯೊಳಿರ್ದ್ದ ನೋೞ್ಪ ಕುಲವಧೂಕದಂಬದೊಳ್.

ಚಂ॥ ಚಕಿತಮೃಗಾಕ್ಷಿ ನೀನೆಳಸಿ ಕೆಮ್ಮನೆ ಜೊಮ್ಮೆನೆವೋಗಿ ಭಾವದಿಂ ।
ಪ್ರಕಟಿಸಲೇಕೆ ಪಾಱುತನಮಂ ನಿನಗೀಗುಣತುಂಗನಲ್ಲಿ ಮ ॥
ರ್ತಕ ಮಿದು ಸಲ್ಲದೆಲ್ಲೆಡೆಯೊಳಂ ಸಲುತಿರ್ಪವೊ ಲೀಗಳೆಂದು ಭಾ ।
ವಕಸಖಿ ಸೋಲ್ತು ಕಣ್ಣಱಿದು ಪುಂಶ್ಚಲಿಯಂ ಜಡಿದಳ್ ರಹಸ್ಯದೊಳ್ ॥ ೩೪ ॥

ವ॥ ಅಂತು ಸಂಭ್ರಮಸಲೀಲಸಪ್ರೇಮಸವಿಸ್ಮಯಸಹರ್ಷಪ್ರಕರ್ಷದರ್ಶನಭ್ರಾಂತ ಮಾದ ನಗರನಾರೀಕದಂಬದ ಸೋರ್ಮುಡಿಯ ಸೊಂಪು ಕಾರ್ಮುಗಿಲ ತಗುಳ್ಪಮಂ ನೆಗೞ್ಚಿಯುಂ, ಕಡೆಗಣ್ಣ ಕುಡುಮಿಂಚು ಸಂಚಳಿಸಿ ಮಿಳಿರೆಯುಂ, ಕಳಕಾಂಚಿಯಿಂಚರದ ಸಡಗರಂ ಮೊೞಗನಳವಡಿಸೆಯುಂ, ನಗೆಮೊಗದ ಮಂದಹಾಸರಸವೃಷ್ಟಿ ಬಿಸಿಲ ಬಿಸುಪ ನುಡುಗಿಸೆಯುಂ, ಆಭರಣಕಿರಣಮಮರಚಾಪಮಂ ನಿಮಿರ್ಚೆಯುಂ, ಲಾವಣ್ಯರಸದ ಪೊನಲ್ ಜನಲೋಚನಪಾಠೀನಮಂ ತೇಂಕಿಸೆಯುಂ, ಉಜ್ಜ್ವಳಿಪ ಪೊಚ್ಚಪೊಸಮುತ್ತಿನಚ್ಚಸೇಸೆ ಸೂಸುವಾಲಿವರಲ ನಭಿನಯಿಸೆಯುಂ, ಮನಂಗೊಳಿಸುತ್ತಿರ್ದ ಪುರದ ಪರಿಶೋಭೆಯೆಂಬ ಪೊಸಗಾರ ಪಸರಮಂ ಪೆೞಗುಮಾಡಿ ಪೊಱಮಟ್ಟು ಮನುಜೇಂದ್ರಮಂದರಂ ಪುರಂದರದಿಶಾಭಿಮುಖ ನಾಗಿ ನಡೆಯೆ.

ಮ।ಸ್ರ॥ ಧರೆಯೆಲ್ಲಂ ಸ್ಯಂದನಾಶ್ವದ್ವಿಪಭಟಬಳದಿಂ ವ್ಯೋಮಮೆಲ್ಲಂ ಚಳಚ್ಚಾ ।
ಮರಕೇತುಚ್ಛತ್ರಶಸ್ತ್ರಪ್ರಕರದಿ ನಖಿಲಾಶಾಂತಮೆಲ್ಲಂ ಹಯೇಭೋ ॥
ತ್ಕರಹೇಷಾಬೃಂಹಿತೋನ್ಮಿಶ್ರಿತಬಹುಕಹಳಾಶಂಖಭೇರೀಮೃದಂಗ ।
ಸ್ವರದಿಂ ದೋರಂತೆ ತೀವಲ್ ನಡೆದುದು ಕಟಕಂ ಕಂಪಿತಕ್ಷೋಣಿಭಾಗಂ ॥ ೩೫ ॥

ವ॥ ಆಗಳ್.

ಚಂ॥ ಬಲಭರದಿಂ ನೆಲಂ ಕುಸಿಯೆ ಶೇಷನ ಪೆರ್ವಡೆ ತಗ್ಗೆ ಕಂಠಕಂ[1] ।
ಧರದೊಳಗೆಟ್ಟಿಡಂಗಿದುದು ಕೂರ್ಮನ ಖರ್ಪರ ದೆಲ್ವು ನುಗ್ಗೆ ಬೆಂ ॥
ನೊಳೆ ಗುಂಟಿದತ್ತು ಬೆಟ್ಟುಗಳ ಮೂಲಶಿಳಾತಳಸಂಧಿ ಬಿಟ್ಟು ವಾ ।
ಕುಳತೆಯ ನಾಳ್ದು ಕಿಟ್ಟಿಲೆಕಿಟಿಂದಲೆ ಯಾದುದು ತಗ್ಗೆ ದಿಗ್ಗಜಂ ॥ ೩೬ ॥

ಚಂ॥ ಭರದಿಂ ಭೋಂಕನೆ ತಗ್ಗೆ ಭೂಮಿ ಫಣರತ್ನಂ ನೆತ್ತಿಯೊಳ್ ಬೆಟ್ಟದಂ ।
ತಿರೆ ನಟ್ಟದ್ದೊಡೆ ಮುಚ್ಚಿಪೋಗಿ ಫಣಿಪಂ ಪಾತಾಳದೊಳ್ ಕೂರ್ಮಖ ॥
ರ್ಪರಮಂ ನೆಮ್ಮಿ ತದೀಯನಿಶ್ವಸಿತದಿಂ ಮೂರ್ಛಾಭರಂ ಪಿಂಗೆ ಮ ।
ತ್ತಿರದೆಟ್ಟಿಂತ ನುದಾತ್ತನೇಂ ಬಿಡುವನೇ ಕೆನ್ನಂ ಮಹಾಸತ್ವಮಂ ॥ ೩೭ ॥

ಕಂ॥ ಪಡೆ ನಡೆವಲ್ಲಿಯ ಪಲವುಂ ।
ಪಡೆಗಳ ನಾನುತ್ತಿ ಕಮಠ ನನುಮತದಿಂದಂ ॥
ನಡೆದ ನೊಡನೊಡನೆ ನೆಲನೋ ।
ರ್ಗುಡಿಸುಗು ಮೆಂದುರಗಪತಿ ರಸಾತಳತಟದೊಳ್ ॥ ೩೮ ॥

ವ॥ ಆಗಳಲ್ಲಿಯುಂ.

ಮ॥ ಭರದಿಂ ಶೇಷನ ನೆತ್ತಿ ಪೊತ್ತಿ ಪೊಗೆಯಲ್ಕುಚ್ಛ್ವಾಸದಿಂ ದುಣ್ಮುವು ।
ದ್ಧುರಧೂಮೌಘಮೊ ಮೇಣ್ ನಿಜಪ್ರಿಯತಮಂ ಸೌಂದರ್ಯಕಂದರ್ಪ ನೆ ॥
ಟ್ಟಿರೆ ಭೂವಲ್ಲಭೆ ಬೆನ್ನೊಳೆಟ್ಟಿ ಪದೆಪಿಂ ಬರ್ಪ್ಪಂದಮೋ ಪೇಟಿ ಮೆಂ ।
ಬರ ಮಾತೊಪ್ಪೆ ಪೊದಟ್ಟಿ ದಂದು ಬಲಪಾದೋತ್ಥಂ ರಜೋಮಂಡಳಂ ॥ ೩೯ ॥

ಕಂ॥ ಪಸರಿಸುವ ಪಾಂಸುಪಟಲಂ ।
ಮಸುಳಿಸೆ ಮುಸಮುಸನೆ ತೋಱುವ ವಸರದೊಳ್ ಪೋ ॥
ಲ್ತೆಸೆದುದು ಧರಿತ್ರಿ ಪೊಗೆ ಪುಗೆ ॥
ನಸುಮಾಸಿದ ಪೊಗೆಯ ಚಿತ್ರಭಿತ್ತಿಯ ತೆಱದಿಂ ॥ ೪೦ ॥

[1] ಕಂಧರ ವೆಂಬ ಶಬ್ದವನ್ನು ಕಂದಳ ಎಂಬ ಶಬ್ದದ ರೂಪಾಂತರವಾಗಿ ಕವಿಯು ಪ್ರಯೋಗಿಸಿರುವಂತೆ ಕಾಣುವುದು. (ಲ. ರಪ್ರಾಸು).

ವ॥ ಮತ್ತಂ.

ಕಂ॥ ಲೋಕೈಕಮಿತ್ರ ನಿರೆ ಪೆರ ।
ರ್ಗಾಕೆಯೊ ಪೃಥುತೇಜ ಮೆಂದು ಸೈರಿಸದಘೋಲ ॥
ತ್ಯಾಕೀರ್ಣಂ ಮುಸುಳಿಸಿತು ದಿ ।
ವಾಕರಕಿರಣಮ ನುದಗ್ರಧೂಳೀಪಟಲಂ ॥ ೪೦ ॥

ಮ॥ ಪಿರಿದುಂ ಮುನ್ನ ಮನೇಕಪಾಪಹಿತ ಮುಪ್ಪದ್ಯನ್ಮದೋದ್ರೇಕದೊಳ್ ।
ಪೊರೆಯುತ್ತಿರ್ದ ಮಳೀಮಸಾಕೃತಿ ಕುಜಾತಂ ಧೂಳಿಜಾಳಂ ದಿಗಂ ॥
ಬರಸಾಂಗತ್ಯಮ ನಪ್ಪುಗೆಯ್ದು ಬಱಿಕಂ ಸದ್ವರ್ತನಂಬೆತ್ತುದೆ ।
ನ್ನರುಮಂ ಪೊರ್ದಿಸದೇ ದಿಗಂಬರಸಮಾಯೋಗಂ ಸದಾಚಾರಮಂ ॥ ೪೧ ॥

ವ॥ ಅಂತು ಮಲ್ಲದೆಯುಂ.

ಕಂ॥ ಎಡೆ ನೆಱೆಯದೀಬಲಕ್ಕಾ ।
ನೆಡೆಮಾಡುವೆ ನೆಂದು ನೆಲನ ನೊದವಿವ ತೆಱದಿಂ ॥
ಕಡಲಂ ಪೀರ್ದುದು ರಜ ಮೇಂ ।
ಪಡೆದುದೊ ಯುವರಾಜನಲ್ಲಿ ಪಡೆವಳವೆಸರಂ ॥ ೪೩ ॥

ವ॥ ತದನಂತರಂ.

ಕಂ॥ ಕರಗಿಸಿದುದು ರಜಮಂ ಚಾ ।
ಮರಪವನಂ ವಾಜಿವದನವಾಯು ಪತಾಕಾಂ ॥
ಬರಮಾತರಿಶ್ವ ನನುಗತ ।
ಮರುತಂ ಮತ್ತೇಭಕರ್ಣತಾಳಸಮೀರಂ ॥ ೪೪ ॥

ವ॥ ಮತ್ತಂ.

ಮ॥ ಹಯಲಾಳಾಜಳಮುಂ ಮದೇಭಮದಮೂತ್ರಾಸಾರಮುಂ ರೇಣುಸಂ ।
ಚಯಮಂ ಮೊಱಿಸಿ [1] ಮುಂದುಗಾಣಿಸಿತ ನಧ್ವಾಲೋಕ ಮಾಗಿರ್ದ ಸೇ ॥
ನೆಯ ನಧ್ವಾನದೊಳಂ ತದೇನನಿತಱಿಂ ಮಾಣ್ದಿರ್ದುದೇ ಯಾನಲೀ ।
ಲೆಯುಮಂ ನೋಟ್ಪ ವಿಯಚ್ಚರರ್ಗೆ ತೆಱಪಂ ಮಾಡಿತ್ತು ಕಣ್ಣಾರ್ವಿನಂ ॥ ೪೫ ॥

ವ॥ ತದನಂತರಂ.

ಚಂ॥ ಬಳೆದುದೊ ಭೂತಳಂ ಸುರಿದುದೋ ನಭ ಮಿಾಂದುದೊ ದಿಕ್ತಟಂ ಬಳಂ ।
ಗಳ ನೆನೆ ಪರ್ವಿದಾಪಡೆಯ ತೊಱಿತ್ತಱಿಯಿಂ ಗಿಡುಬಳ್ಳಿ ಭೂರುಹಾ ॥
ವಳಿ ಪೊದಱುಳ್ಳ ಬಲ್ಲಡವಿ ಪರ್ವಯಲಾಯ್ತು ನದೀನದೌಘ ಮಾ ।
ಗಳೆ ಬಱುಗಂಪಲಾಯ್ತು ಕುಱಿಯುಂ ತೆವರುಂ ಸಮನಾಯ್ತುದೆತ್ತಲುಂ ॥ ೪೬ ॥

[1] ತಗ್ಗಿಸಿ.

ವ|| ಎನಿಸಿ ನಡೆವಲ್ಲಿ.

ಉ|| ಆಗುಣತುಂಗದೇವನ ಮಹಾಕಟಕಂ ನಡೆವುತ್ಸವಕ್ಕೆ ಪ ।
ಕ್ಕಾಗಿ ಜಗಕ್ಕೆ ಬೀಱುದುವು ಪೆಂಪ ನನೇಕನಗೋಪಕಂಠಭೂ ॥
ಭಾಗ ಮನೇಕರಮ್ಯತರುಷಂಡ ಮನೇಕನದೀನದಾಂತಿಕಾ ।
ಭೋಗ ಮನೇಕದಿವ್ಯಜನತೀರ್ಥನಿವಾಸ ಮನೇಕನಂದನಂ || ೪೭ ||

ವ|| ಅಂತುವಿವಿಧರಮ್ಯಪ್ರದೇಶವಿಶ್ರಾಂತಶಿಬಿರನಾಗುತ್ತ ಲೆತ್ತಿಬರ್ಪ ವಿಕ್ರಮವಿನೋದನೆಱ್ತಿರವ ನಾಪ್ತಗುಪ್ತಚರರಿಂದ ಮಱಿದು ಕೆಲದ ನೆಲದ ಮಂಡಳಿಕವರ್ಗಮೆಲ್ಲಂ ತಲ್ಲಣಿಸಿ ಸುವಿಟಜನದಂತೆ ವಿದಿತಭೀರುಭಾವಮುಂ, ವಾದಕನಿಕಾಯದಂತೆ ಘನಕಂಪಮುಂ, ಕ್ಷೀಣಶಶಿಯಂತೆ ವಿಕಳಾತ್ಮಮುಂ, ನಿದಾಘದಂತೆ ಶೋಷಿತಜಲಾಶಯಮುಂ, ಸ್ನಪನಜಲದಂತೆ ಗಳಿತಾವಲೇಪಮುಂ, ಶುಷ್ಕಕುಸುಮದಂತಪರಾಗರಸಮುಂ, ಅರ್ಕರಿಪುವಿನಂತೆ ನಿರ್ಮುಕ್ತಭೋಗಮುಂ, ಮೃಗಯಾವಿನೋದದಂತೆ ಧೃತರಾತ್ರಿಜಾಗರಮುಂ, ಉತ್ಖಾಖಟ್ಗದಂತೆ ಶೂನ್ಯೀಕೃತಕೋಶಮುಂ, ಯೋಗಿಗಣದಂತೆ ವಿಷಯತ್ಯಾಗನಿರತಮುಂ, ಖೇಡದಂತೆ ಗೋತ್ರವಾಹಿನೀವಳಯಿತಮುಂ, ಅಸಿತಕಂಠಚರಿತ್ರದಂತೆ ದುರ್ಗೋಪಗತಮುಂ, ಇಂದ್ರತನುವಿನಂತೆ ಧೃತಮಹಾಲೋಚನಸಹಸ್ರಮು ಮಾಗುತ್ತು ಮಿರಲ್ಲಿ ಕೆಲಬರ್ ಮುನ್ನ ಪದ್ಮರಾಜದಿಗ್ವಿಜಯದೊಳ್ ತಾಗಿ ಬಾಗಿದನುಭೂತ [1]ಪರಿಪ್ಲವರ್.

ಚಂ|| ಬಗೆಯದಿದಿರ್ಚೆ ಸಾವುದು ಮರುಳ್ತನ ಮುಳ್ಳುದ ನಿತ್ತು ತೆತ್ತು ಕೆ ।
ಯ್ಮುಗಿದು ಬರ್ದುಂಕುವಂ "ಹರಣಮುಳ್ಳೊಡೆ ಹಾಡಿ ಯುಣಲ್ಕೆ ಬರ್ಪುದೊ ॥
ವ್ಮೆರ್ಗೆ" "ತಲೆಸುತ್ತುವೋಗಿ ತಲೆ ಯಿರ್ದೊಡೆ ಸಾಲ್ವುದು" ಕಾದಿ ಸತ್ತೊಡೆ ।
ತ್ತುಗುಮೆ ಸಮಸ್ತವಸ್ತುತತಿ ಸಾವುದಱಿಂ ಸಿರಿವೋಗಲಾಗದೇ || ೪೮ ||

ಚಂ|| ನಯಮಿದು ನಮ್ಮ ನಾಡ ಗಡಿಯಂ ಪುಗದಲ್ಲಿಯೆ ಬಂದು ಮುತ್ತದ ।
ಲ್ಲಿಯೆ ಬೆದಱಿಟ್ಟ ಸಂಹರಿಸದಲ್ಲಿಯೆ ರಾಜ್ಯಮ ನೀಱ್ದಿಕೊಳ್ಳದ ॥
ಲ್ಲಿಯೆ ಬೆಸಕೆಯ್ವೆ ಮೆಂದು ನಿಜಸಾರಧನಂಗಳ ನಟ್ಟ ಮುಂದೆ ಭೀ ।
ತಿಯೆ ನಿದಿರ್ಪಂದು ಕಂಡ ರಸುವಿಟ್ಟವರೇ ನುಚಿತಪ್ರವೀಣರೋ || ೪೯ ||

ವ|| ಅಂತು ಕಂಡ ಪರಪುರಾಧಿಪರ ವಿವಿಧವಸ್ತುಸಧ್ಬಾವಮಂ ಕೆಯ್ಕೊಂಡು ತದೀಯಮಂಡಳಂಗಳ ನುಱಿದುಱಿದ ರಿಪುಮಂಡಳಕ್ಕೆ ನಡೆದು.

ಮ|| ಅನತಕ್ಷತ್ರಿಯರೊತ್ತುಗೊಂಡ ಗಿರಿದುರ್ಗ ಕ್ಕುಗ್ರವಜ್ರಾಗ್ನಿ ಕಾ ।
ನನದುರ್ಗಕ್ಕೆ ಮಹಾದವಾಗ್ನಿ ಜಲದುರ್ಗಕ್ಕುರ್ವಿದೌರ್ವಾಗ್ನಿ ಧಾ ॥
ನ್ವನದುರ್ಗಕ್ಕೆ ಬೃಹಲ್ಲಯಾಗ್ನಿ ಯೆನೆ ತನ್ನುದ್ಯತ್ಪ್ರತಾಪಾಗ್ನಿ ನೀ ।
ಱ್ದಿನಸುಂ ಪರ್ವಿ ವಿಗುರ್ವಿಸಲ್ ನೃಪಸುತಂ ವಿಕ್ರಾಂತಮಂ ತೋಱಿದಂ || ೫೦ ||

---

[1] ಪರಿಪಟಿಷ್ಠರ್.

ಮ॥ ಉಱಿದುದ್ವೃತ್ತರ ಪೊತ್ತಮಂ ತಱಿದು ಗೆಲ್ಲಂಗೊಂಡು ವೃಂದಂಗಳಂ ।
ನೆಱೆ ಕೊಂಡುಬ್ಬಿದ ನೀಟ್ಟು ಕೊಂಡು ಬಳಮಂ ಬೆಂಗೊಂಡು ದುರ್ಗಂಗಳಂ ॥
ಕುಱಿಪಿಂದಂ ಪರಿಮುತ್ತುಗೊಂಡು ಪುರಮಂ ಕೆಯ್ಕೊಂಡು ನಾನಾರ್ಥಮಂ ।
ನೆಱೆ ಕೊಂಡಾಯ್ಕುಳಿಗೊಂಡ ನುದ್ಧಯಶಮಂ ವಿಶ್ರಾಂತಕಾಳಾನಳಂ ॥ ೫೧ ॥

ವ॥ ಮತ್ತಮಾಳ್ವಲದ ತೋಳ್ವಲದ ಬಾಳ್ವಲದ ಗರ್ವದಿಂದುರ್ವಿ ಮಲೆದ ಗರ್ವಿತೋರ್ವೀಶ ಬಳಮು ನೆಟ್ಟಿಬ್ಬಿ.

ಮ॥ ಅನಲಂ ಕಾನನಮಂ ಕಱುತ್ತಡಗಿಡೆಲ್ ಸುಟ್ಟುಂ ಬೞಿಕ್ಕಲ್ಲಿ ನೂ ।
ತನಬೀಜಾಂಕುರವೃದ್ಧಿಯಂ ನೆಗೞಿಪಂ ತುದ್ವೃತ್ತ ಭೂಪಾಲರಂ ॥
ಮುನಿಸಿಂ ಕೊಂದು ಬೞಿಕ್ಕೆ ತತ್ಪದವಿಯೊಳ್ ತದ್ವಂಶಮಂ ಧಾತ್ರಿ ಜೀ ।
ಯೆನೆ ಸಂಸ್ಥಾಪಿಸಿ ಪದ್ಮಸೂನು ಮೆಱೆದಂ ಕೋಪಪ್ರಸಾದಂಗಳಂ ॥ ೫೨ ॥

ಉ॥ ಆನತರಾಗಿ ಜೀವಿಸದೆ ದುಷ್ಟನೃಪರ್ ಕೆಲರೋಡಿ ಪೋಗೆ ಪಾ ।
ಥೋನಿಧಿಯಲ್ಲಿ ಪೊಕ್ಕೊಡವರಂ ತವಿಸಲ್ ಬೞಿಸಂದು ಸಿಂದುವಂ ॥
ದಾನೃಪಸೂನುವಿಕ್ರಮಕೃಶಾನು ವದಲ್ಲದೊಡೆಲ್ಲಿ ಬೇಱೆ ನೀ ।
ರ್ವಾನಿಸರೆಂಬ ರಾರೊ ಬಡವಾನಳ ನೆಂಬುದದೇನೊ ತೋಱೆರೇ ॥ ೫೩ ॥

ವ॥ ಮತ್ತಮಲ್ಲಿ ಕೆಲರ್ ವಿದೇಶಗಮನಕ್ಕೆ ಸಲ್ಲದೆಯುಂ ಮನುಪ್ರವೇಶಗಮನಕ್ಲೇಶದಿಂ ನೆಗೞ್ದು.

ಕಂ॥ ಅನುನಯದಿಂ ಭೂಮ್ಯುಪನತ ।
ಜನಪರ್ ಕೋಶೋಪನತಮಹೀಶರ್ ದೇಶೋ ॥
ಪನತಕ್ಷಿತಿಪರ್ ಸರ್ವೋ ।
ಪನತನೃಪರ್ ತನ್ಮಹೀಶದಯೆಗೆಡೆಯಾದರ್ ॥ ೫೪ ॥

ಚಂ॥ ಬೆದಱಿದ ರಾಜಧಾನಿ ಬೆಸಕೆಯ್ಯದ ಬಲ್ಲಿದ ರೊಡ್ಡಿ ಕಾದಿ ಸಾ ।
ಯದ ಸಮರೋದ್ಧತರ್ ಕಿಡದ ಕಂಟಕ ರೋಡದ ಬೇಡವಟ್ಟು ಪೋ ॥
ಗದ ಕಲಿಗೋಂಟೆ ಸಿಲ್ಕದ ವಿರೋಧಿಕುಟುಂಬ ಮಿಱಿಂಬುಗೊಂಡಡಂ ।
ಗದ ಖಳರನ್ಯಮಂಡಳದೊಳಿಲ್ಲ ಕುಮಾರ ನೀದೇನುದಗ್ರನೋ ॥ ೫೫ ॥

ಮ॥ ನೆಗೞ್ದಿರ್ದ್ದಂಡತೆ ಕಂಟಕಸ್ಥಿತಿ ಸರೋಜವ್ರಾತದೊಳ್ ರಾಜಲೀ ।
ಲೆ ಗುರುಸ್ಫೂರ್ತಿ ನಭೋಗ್ರದೊಳ್ ಚಪಲತಾಸಂಗಂ ವಿಪತ್ಪಕ್ಷ ಮ ॥
ದ್ರಿಗಳೊಳ್ ಕೋಶವಿಭೂತಿ ವಿಕ್ರಮದ ಸೊಂಪು ದ್ಯಾನದೊಳ್ ಪೀನ ಪೊ ।
ಪ್ಪುಗು ಮುರ್ವೀಶರೊ ಳೊಪ್ಪ ದೆಂದೆನಿಸಿದಂ ತನ್ನೇೞ್ಗೆಯಿಂ ಪದ್ಮಜಂ ॥ ೫೬ ॥

ಮ॥ ಜಗತೀಪಾಲರ ನೊತ್ತಿಕೊಂಡು ಪಿತೃಗಟ್ಟುತ್ತುಂ ಬಹುಶಲ್ಲಾಘ್ಯವ ।
ಸ್ತುಗಳಂ ಬಿಣ್ಣಿದುವಾಗಿ ಬಾವಿಸದೆ ಪುಣ್ಯಕ್ಷೇತ್ರದೊಳ್ ಚೈತ್ಯಕೋ ॥
ಟಿಗಳಂ ಮಾಡಿಸಿ ಸಿದ್ಧಸೇಸೆಗಳ ನಟ್ಟುತ್ತುಂ ತ್ರಿಲೋಕೀವಿಭೂ ।
ತಿಗವಂ ಮೆಯ್ಸಿರಿಯಾಗಿ ಭಾವಿಸಿದ ನೇಂ ಪದ್ಮೋದ್ಭವಂ ಭವ್ಯನೋ ॥ ೫೭ ॥

ವ॥ ಅಂತು ಮೂಡಣಿಂ ಮೊದಲ್ಗೊಂಡು ಪುಷ್ಕಲಾವತೀವಿಷಯದೊಳಗಣರವಿಂದಪುರದ, ಮಾಳಿನೀಪುರದ, ವಸುಮತೀಪುರದ, ಮೇಖಳಾಪುರದ ಪುರಂದರಪುರದ, ಮಣಿಪುರದ, ಸೀಮಂತ ಪುರದ, ಪಾಂಚಾಲಪುರದ, ಮಂದರಾಪುರದ, ಮಳಯಪುರದ, ಸಿಂಹಪುರದ, ಪಾಟಳಾವತೀಪುರದ, ಭದ್ರಾಂಗಪುರದ, ರತ್ನಖೇಟಪುರದ, ಛತ್ರಾಕಪುರದ, ಕನಕಪುರದರಸುಗಳ ನಾಕ್ರಮಿಸುತ್ತುಂ.

ಕಂ॥ ಪಾಳಿಸುತುಂ ಧರ್ಮಮ ನು ।
ನ್ಮೀಳಿಸುತುಂ ದ್ರೋಹರಂ ಯಶೋರಸದಿಂ ಪ್ರ ॥
ಕ್ಷಾಳಿಸುತುಂ ದಿಙ್ಮುಖಮಂ ।
ಮೇಳಿಸುತುಂ ಚಂಡವಿಕ್ರಮಾಡಂಬರಮಂ ॥ ೫೮ ॥

ವಂದಿಸುತುಂ ವಂದ್ಯರ ನಭಿ ।
ವಂದಿಸುತುಂ ಬುಧರ ನಱಿಕೆದಾಣದೊ ಳೆಸೆವಂ ॥
ತೊಂದಿಸುತುಂ ವಿಜಯಧ್ವಜ ।
ವೃಂದಮ ನುತ್ತರದಿಗಂತಮಂ ಸಾರ್ದಂದಂ ॥ ೫೯ ॥

ವ॥ ಅಂತು ವಸಂತಕಾಲಾದಿತ್ಯ ನಂತೆ ಲೋಕೈಕಮಿತ್ರ ನುತ್ತರಾಯಣಪ್ರವೃತ್ತ ನಾಗಿ ತದ್ದಿ ಶಾದೇಶಂಗಳ [ರಸುಗಳನ]ವನತಮಾಡುತ್ತಿಳಾವಿಳಾಸಿನಿಯ ಶಿಖಂಡಮಂಡನದಂತಿರ್ದ ಶಿಖಂಡ ಮೆಂಬ ಮಂಡಳದೊಳಗೆ ಬರೆವರೆ.

ಉ॥ ಭಾಸುರನಾಗಪೂಗ ಮವಳಂಬಿತವಾಜಿಸಮಾಜ ಮಾತ್ತಚಾ ।
ಣಾಸನಖಡ್ಗಧೇನುಬಹುಭಲ್ಲಚಯಂ ವಿಜಯಾಭಿರಾಮ ಮ ॥
ಧ್ಯಾಸಿತವೃದ್ಧಕಂಚುಕಿಕುಳಂ ವಿವಿಧಕ್ಷಿತಿಭೃದ್ವಿಳಾಸಿ ಸಂ ।
ತ್ರಾಸಕ ಮೆಂಬರಣ್ಯ ಮೆಸೆದತ್ತು ಕುಮಾರನ ಸೈನ್ಯದಂದದಿಂ ॥ ೬೦ ॥

ವ॥ ಆಗಳಾವಿಪುಳವಿಪಿನದೊಳ್ ಬಹುವಿಧಶ್ವಾಪದೋಪಪ್ಲವಕ್ಕೆ ಪಕ್ಕಾಗದಂತು ಸುಭಟ ಸಂರಕ್ಷಿತಮಾಗಿ ಕಟಕಮಂ ಸೇನಾನಿ ನಡೆಯಿಸೆ ರಥಾಧಿರೂಢ ನಾಗಿ ಬರ್ಪ ಚಿತ್ರಭಾನುಮಿತ್ರಂಗೆ ಚಿತ್ರಸೇನ ನೆಂಬ ಸಾರಥಿ ಯಿಂತೆಂದಂ.

ಮ॥ ಇದು ಸಂತ್ರಾಸಕ ಮೆಂಬರಣ್ಯ ಮಿದಱಿೊಳ್ ತಾ ನುರ್ವಿ ಕಾರಂಗನೆಂ ।
ಬದಟಂ ಲುಬ್ಧಕರಾಜ ನುಗ್ರಬಲಸಂಪನ್ನಂ ತಗುಳ್ದೀಪ್ರದೇ ॥
ಶದ ನಾಡೆಲ್ಲಮ ನೊತ್ತಿ ಪೀಡಿಸುತು ಮನ್ಯಾಸಾಧ್ಯನಾಗಿರ್ದು ಪೊ ।
ರ್ದಿದ ನುರ್ಕಿಂ ನಿಜತಾತದಿಗ್ವಿಜಯದೊಳ್ ನಿಂದಾಂತು ಕಾಲಾಂತಮಂ ॥ ೬೧ ॥

ವ|| ಅದಱಿಂದೆ.

ಚಂ|| ಅದಟನೊಳೆಂದು ನಿನ್ನ ಪಿತೃಗೊಡ್ಡಿಸಿ ಸತ್ತ್ರ ನೆತ್ತ್ರತ್ತಲುಂ ।
ಪುದಿ ದಭಿವರ್ದಿಸಲ್ ಬೆಳೆಗು ವೆಂಬಿನ ಮಿಳ್ಳಿ ತಳೆರ್ತಶೋಕೆ ಪೂ ॥
ಪೊದವಿದ ದಾಸವರ್ಣ ಮಲರೇಱಿದ ಪಾದರಿ ಪಣ್ತ ತೊಂಡೆ ಕೆೊ ।
ರ್ವಿದ ಕಿಸುಚಂದನಂ ಬೆಳೆದ ಬಂದುಗೆ ಯೆಂಬಿ ವಳಂಬ ವಾಗಳುಂ ॥ ೬೦ ॥

ವ|| ಅದಲ್ಲದೆಯುಂ.

ಕಂ|| ಪುದಿದೆಸೆದುವು ನಿಜಪಿತೃ ವಂ ।
ಕದ ಕರಿಗಳ ಮದದ ಸೊವಡು ಮುನ್ನಿನ ಸಪ್ತ ॥
ಚ್ಛದಗಂಧದಿ ನೇಳಾಗಂ ।
ಧದಿ ನೆಸೆವುದು ದೇವ ಭಾವಿಸೀಕಾನನಮುಂ ॥ ೬೩ ॥

ವ|| ಎಂದು ತದ್ಗಹನಮಹಿಮಾಭಿವರ್ಣನವ್ಯಾಜದಿಂ ಪದ್ಮರಾಜದಿಗ್ವಿಜಯವಿಜಯವೃತ್ತಾಂತ ಮಂ ನೂತನವಚನದಿಂ ನಿಜಗುರುಪರಾಕ್ರಮಾಕೀರ್ಣನೋದೀರ್ಣಪುಳಕಾವತಂಸಕರ್ಣ ನಾದ ಲೋಕೈಕಮಿತ್ರಂಗೆ ಚಿತ್ರಭಾನು ವಭಿಮುಖ ನಾಗಿ.

ಕಂ|| ತಾಳಪ್ರಪಂಚದಿಂದೆ ಮ ।
ದೇಳಾಜಾತಿಗಳಿ ನೆಸೆದು ಸರಸನಟಶ್ರೀ ॥
ಗಾಳೆಂಬವಾಗಿ ಭರತದ ।
ಲೀಲೆಯು ನಾಳ್ದಪುದರಣ್ಯಸಂತತಿ ವಿಪಿನಂ ॥ ೬೪ ॥

ಅಮೃತಾಶ್ರಯ ಮಿಂದ್ರಾಣೀ ।
ಸಮೇತ ಮಮರೀವಿಳಾಸಿ ರಂಭಾರಮ್ಯಂ ॥
ಸುಮನೋನಿಳಯಂ ವಜ್ರ ।
ಪ್ರಮುಖ ಮಿದಿಳೆಗಿೞಿದ ಸಗ್ಗ ಮೆನಿಪುದು ದುರ್ಗಂ ॥ ೬೫ ॥

ವ|| ಮತ್ತಂ.

ಕಂ|| ಕಮಳಾಶ್ರಯ ಮಿದು ನಿನ್ನಂ ।
ದ್ಯುಮಣಿಯ ನತಿಲಲಿತತಿಳಕ ಮಿದು ನಿನ್ನಂ ದ್ವಿಜೋ ॥
ತ್ತಮನಂ ಭುವನಾದ್ಭುತ ವಿ ।
ಭ್ರಮ ಮಿದು ನಿನ್ನಂ ಪಯೋಧಿಯಂ ಪೋಲ್ತಿರ್ಕುಂ ॥ ೬೬ ॥

ಪುನ್ನಾಗವಿರಾಜಿತ ಮಿದು ।
ಪನ್ನಗವಧುವಂ ಕರೇಣುವಂ ಕೇಸರಸಂ ॥
ಪನ್ನಮಿದು ಹರಿಯ ನಂಬುಜ ।
ಮ ನ್ನೆನೆಯಿಪುದಖಿಳಮೃಗಶರಣ್ಯಮರಣ್ಯಂ ॥ ೬೭ ॥

ಮ|| ಇದು [1]ದೀಹಾರದ ಗೇಹದಂತೆ ಹರಿಣೀರಮ್ಯಂ ಗ್ರಹಗ್ರಾಮದಂ ।
ತುದಿತಕ್ರೋಡವಿಭಾಸಿ ಕೋಶಗೃಹದಂತಷ್ಟಾಪದಾಧಿಷ್ಠಿತಂ ॥
ಕದನೋರ್ವೀತಳದಂತೆ ದಾರುಣಚಮೂರಾವಸ್ಥಿತಕ್ಷೋಭಿತಂ ।
ಮದವತ್ಕುಂಜರಗಾತ್ರದಂತೆ ವಿಳಸದ್ಭಭ್ರೂಪ್ರಭಾವಿಭ್ರಮಂ　　|| ೬೮ ||

ವ|| ಅದಲ್ಲದೆಯುಂ ಮಾತಂಗಸಂಗಿಯಾಗಿಯುಂ ಸದ್ವಂಶವಿರಹಿತಮಲ್ತು, ಬಂಧುಜೀವಹಾರಿಯಾಗಿಯು, ವಶೀಕೃತಗೋತ್ರಮಲ್ತು, ಮದನವಿಜಯಾಭಿವೃದ್ಧಿಕರವಾಗಿಯುಂ ವಿರಾಗದೂರಮಲ್ತು, ವಿವಿಧಶಬ್ದರಚಿತವಾಗಿಯುಂ ಶಬ್ದಾವಕಾಶಮಲ್ತೆನಿಪ ವಿರುದ್ಧಗುಣಮಂ ನವಲಂಬಿಸಿತ್ತು ಮತ್ತಂ. :

ಮ||ಸ್ರ|| ಮರಿಚವ್ಯಾಕೀರ್ಣಪರ್ಣಂ ಕುರರತನುವ(ನಾ)ಗ್ರಂಥಿಪರ್ಣಚ್ಛದಂ ಕ ।
ಸ್ತೂರಿವೆಕ್ಕಂ ಸಲ್ಲಕೀಪಲ್ಲವ ಮಿಭಶಿಶುವಂ ಶ್ರೀಫಳೋದ್ಯತ್ಫಳಂ ಬಂ ॥
ಧುರಗೋಲಾಂಗೂಲಮಂ ಕೊರ್ವಿಸೆ ಸೊಗಯಿಪುದೀಕಾನನೋದ್ದೇಶ ಮೋರಂ ।
ತಿರೆ ನಾನಾಭಿಲ್ಲಪಲ್ಲೀಖಗಮೃಗಲತಿಕಾವೃಕ್ಷಗುಲ್ಮಾವಕಾಶಂ　　|| ೬೯ ||

ವ|| ಎಂದಿಂತು ವಿವಿಧವಚನಮಂ ಮೆಚ್ಚಿದು ಮಚ್ಚಿಸುತ್ತುಂ ಬರ್ಪಲ್ಲಿ.

ಶಾ|| ರಂಗತ್ಪಿಂಗಳಲೋಚನಂ ಘುಳುಘುಳುಪ್ರಧ್ವಾನರೌದ್ರಾನನಂ ।
ಲಾಂಗೂಲಾಹತಭೂತಳಂ ರುಚಿರದಂಷ್ಟ್ರಾಯುಗ್ಮತಿಗ್ಮಂ ಕುರಂ ॥
ಗಾಂಗೋಜ್ಜೃಂಭಿತರಕ್ತಸಿಕ್ತನಖರಂ ವ್ಯಾಕೀರ್ಣಕರ್ಣಂ ಕುಮಾ ।
ರಂಗಾಶ್ಚರ್ಯಮು ಮಾರ್ಗ ಮಾದುದು ಭಯಂ ಶಾರ್ದೂಲವಿಕ್ರೀಡಿತಂ　　|| ೭೦ ||

ವ|| ಅದಲ್ಲದೆಯುಂ.

ಮ|| ವದನೋಗ್ರಸ್ವನದಿಂದ ಮೊಂದೆರಡು ಮಾಳೋದ್ಘಾತದಿಂ ಮೂಱುನಾ ।
ಲ್ಕುದಿತಕ್ರೂರನಖಪ್ರಹಾರಭರದಿಂ ದೈದಾಱು ದಂಷ್ಟ್ರೋಗ್ರಪಾ ॥
ತದಿ ನೇೞೆಂಟು ಸುರುಳ್ದುರುಳ್ವನೆಗ ವೇಣಶ್ರೇಣಿಯಂ ಪಾಯ್ದು ಕೊಂ ।
ದುದ ನೇವೇೞ್ವುದೊ ಶತ್ರುಸಂಹರಣಕೇಳೀಶಿಕ್ಷಮಂ ವ್ಯಾಘ್ರಮಂ　　|| ೭೧ ||

ಉ|| ಆಳಿ ನಿಜಾಸ್ಯದಿಂ ನಿಮಿರೆ ಪುತ್ತಿನ ಬಾಯ್ದುಲೆಯೊಳ್ ಪಿಪೀಲಿಕಾ ।
ಮಾಳೆಗೆ ಪಾಸಿ ನಾಲಗೆಯ ನೊಂದು ಭಯಂಕರಭಲ್ಲ ಮುಲ್ಲಸ ॥
ದ್ವ್ಯಾಳತಮಾಳಗುಲ್ಮದೊಳಗಿರ್ಪುದು ಮಾಸೊವಡಿಂಗೆ ಕಾಯ್ಪಿನಿಂ ।
ಕಾಳಿಗನಾಗ ನಿರ್ಪುದಿದೊಂದು ತಮಾಳದ ಬಳ್ಳಿ ಯೆಂಬಿನಂ　　|| ೭೨ ||

ವ|| ಮತ್ತೊಂದುಪೆರ್ಮೞೆಯ ಸುತ್ತುಮುತ್ತಿನೊಳ್.

[1] ದೇಹಾರ (ದೇವಾರ ಎಂದಿರಬಹುದು).

ಚಂ॥ ಮುನಿದಿಸೆ ಪಂದಿ ನೊಂದೊಳಱಿ ಕಾಯ್ಪಿನೊಳಳ್ಕಱಿ ದಾಡೆಗುಟ್ಟಿ ತೊ ।
ಟ್ಟನೆ ಪಂತಂದು ಮುಟ್ಟಿದೊಡಿಸಲ್ ತಱಿಪಿಲ್ಲದೆ ಬಿಲ್ಲ ನಿಕ್ಕಿ ಡೊ ॥
ಕ್ಕನೆ ನಡೆ ಪಾಯ್ದು ಮೆಯ್ವೊಣರ್ದು ಕಣ್ಪೊಱಪಾಯ್ವಿನ ಮೊತ್ತ ಗಂಟಲಂ ।
ವನಚರ ನಾರ್ದು ಕೊಂದು ಮೆಱೆದಂ ಭುಜವೀರ್ಯಮ ನುಗ್ರಶೌರ್ಯಮಂ ॥ ೨೩ ॥

ಮ॥ ಭರದಿಂದುರ್ವಿದ ನಾಯ್ಗಳವ್ವಳಿಸೆ ಭಿಲ್ಲಂ ಬಿಲ್ಲ ನಾಕೃಷ್ಟಿಗೆ ।
ಯ್ದಿರೆ ಕಂಡೞ್ಕಿ ಕುನುಂಗಿ ಪೊಂಗಿ ಮುಳಿಸಿಯಂ ಸಂರಂಭದಿಂ ಱಿಜಾಪ್ಪುಗೊಂ ॥
ಡಿರುತಂ ಗರ್ಜಿಸಿ ದಾಡೆಗುಟ್ಟಿದುದು ಧಾತ್ರೀಭೀಕರಂ ವಿಕ್ರಮಾ ।
ಕರ ಮವ್ಯಾಕುಳಕೇಕರಂ ಪೃಥುಕಲಾಲಾಶೀಕರಂ ಸೂಕರಂ ॥ ೨೪ ॥

ವ॥ ಅದಂ ನೋಡುತ್ತುಂ ಬರೆ ಮುಂದೊಂದೆಡೆಯೊಳ್.

ಮ॥ಸ್ರ॥ ಅಮಿತೋದ್ಯದ್ಗುಲ್ಮವಲ್ಮೀಕಮ ನುಡಿದಿಱಿಯುತ್ತಂ ಜರತ್ಕಂಟಕೋಗ್ರ ।
ದ್ರುಮದಿಂದಂ ತನ್ನ ತೀನೆರ್ದೆಡೆಯ ನೊರಸುತಂ ಪ್ರೋದ್ವಿಷಾಣಂ ಸ್ಫುರದಕ್ಷ್ಣ ॥
ಣ ಮತುಚ್ಚಂ ಲೋಲಪುಚ್ಛಂ ಭ್ರುಕುಟಿಕುಟಿಲಭಾಳಂ ಸರಕ್ತಾಕ್ಷಿಲೀಳಂ ।
ಯಮವೇಷಂ ಘೋರಘೋಷಂ ನಡೆದುದು ಬಳವತ್ಕಾಳಕಾಯಂ ಲುಲಾಯಂ ॥ ೨೫ ॥

ವ॥ ಮತ್ತೊಂದು ಜಲಾರ್ದ್ರಕರ್ದಮೋದ್ದೇಶದೊಳ್.

ಕಂ॥ ಕಱಿಕೊರ್ವಿ ಪಂದಿಗಡ್ಡಿಯ ।
ಮಱಿಗೊಂಡಿರದೆತ್ತಿರ್ದ ಸೂಕರನಂ ಕೆ ॥
ಯ್ಪಱಿದ ಕರಿಕಳಭ ಮೆಂದ ।
ಳ್ಕಱಿ ಪಾಯಲ್ ಬಗೆದುದೊಂದು ಸಿಂಹಕಿಶೋರಂ ॥ ೨೬ ॥

ವ॥ ಅದಕ್ಕನತಿದೂರದೊಳ್.

ಉ॥ ಪಾಯ್ದೊಡೆ ಕೋಡ ನೂಱಿ ನಡೆ ಬಿಟ್ಟ ಮದೇಭದ ದಂತದಿಂ ಭರಂ ।
ಗೆಯ್ದಡೆಯುಳ್ಳ ಕಾಡ ನರುಣಾಂಬುಗಳಿಂ ಬೆದೆಗೂಡಿ ತಾಯ್ನೆಲ ॥
ಕ್ಕೆಯ್ದಿರಲೆಂದು ಬಿತ್ತಿದುದದೊಂದು ಮೃಗಾರಿ ತದುತ್ತಮಾಂಗದಿಂ ।
ಸಯ್ದನೆ ಸೋರ್ವ ಮುತ್ತುಗಳೆ ಬಿತ್ತುಗಳಾಗಿರೆ ತನ್ನ ಬೀರಮಂ ॥ ೨೭ ॥

ವ॥ ಆ ವಿಕ್ರಮಾರಂಭನಿಪುಣಕಂಠೀರವ ಮಲ್ಲದೆಯುಂ.

ಚಂ॥ ಶರಭ ಮಿದಿರ್ಚೆ ಸಾರ್ಚೆ ಗೆಲಲುಂ ಕೊಲಲುಂ ನೆರ ವಿಲ್ಲದಿರ್ದೊಡಂ ।
ಹರಿ ಮೃಗರಾಜನಾಮ ಮೞಿಗುಂ ಪೞಿಗುಂ ಜಗ ಮೋಡಿ ಬಿೞಿಸ್ದೊಡಂ ॥
ದಿರದಿದಿರಾಗಿ ಸತ್ತು ಜಸಮಂ ಗೆಡೆಗೊಂಡು ದದಂತೆ ಲೋಕದೊಳ್ ।
ಧರೆ ಪೊಗೞ್ವಂತು ಸತ್ತ ಕಲಿಯುನ್ನತಿ ಗೆಲ್ಲದಿ ನಗ್ಗವಲ್ಲವೇ ॥ ೨೮ ॥

ವ|| ಮತ್ತಮೊಂದು ಸರಳಸಲ್ಲಕೀತಮಾಳಲವಂಗಸಂಗತಪ್ರದೇಶದೊಳ್.

ಮ|| ಪರಿವಚ್ಛಾಂಬುವ ನೂಡಿ ಪೂಗವನಮಂ ಕಿೞ್ತಿಕ್ಕಿ ಕರ್ಪೂರಭೂ ।
ಜರಜೋರಾಜಿತಮಾಗಿ ಕೋಡ ಹೊಗೆ ಕಾಡಂ ಸುತ್ತಿ ಮಾಱಾನೆಯೊಳ್ ||
ಭರದಿಂದಂ ಮೊಗಮಿಕ್ಕಿ ಪೋದುರ್ ಶಬರೀಗೇಯಂಗಳಂ ಸೋಲದಿಂ ।
ಮರವಟ್ಟಾಲಿಸಿ ಲೀಲೆಯಂ ಮಱೆದು ದುರ್ವಾರಬಂಧುರಂ ಸಿಂಧುರಂ || ೭೯ ||

ವ|| ಅದಲ್ಲದೆಯುಂ.

ಚಂ|| ವನಮೃಗಕೋಟಿ ನೋೞ್ಪ ಜನ ಮಾಗೆ ಮದಂ ತಿಮಿರಾಗೆ ಕೋಪಮ ಕೂ ।
ರ್ಮೊನೆಯಲಗಾಗೆ ಕಾಡಮ ಕಳ ನಾಗೆ ಮದಭ್ರಮರಾಳಿ ರಕ್ಕೆಗಂ ||
ಟೆನ ಮಣಿಯಾಗೆ ತಕ್ಕಱಿಯದೆಕ್ಕತುಳಂ ಪೊಣರ್ದಂಕದಂತೆ ಬ ।
ಲ್ಮನಿಸಿನೊಳೊಂದನೊಂದಿಱಿಯಲಿರ್ದುವು ತಳ್ತಿರಡುಗ್ರದಂತಿಗಳ್ || ೮೦ ||

ವ|| ಮತ್ತಮೊಂದೆಡೆಯೊಳ್.

ಚಂ|| ಉಡಿದರೆಮೆಲ್ದು ಮೆಲ್ಲಲಿರ ನಿಕ್ಕುವ ಬಲ್ಲಳಿಗೊಂಬ ನಿಂಬಿನಿಂ ।
ಕೊಡೆವಿಡಿ ವಗ್ರಹಸ್ತಜಳಮಂ ನಸುವಿಂಡುವ ಕೋಡ ನಿಟ್ಟು ತೀಂ ||
ಗಿಡಿವುವ ಕರ್ಣತಾಳದೆಲರಿಂ ಬೆಮರಾಱಿಪ ಕೆಯ್ತ ಮೊಪ್ಪೆ ಬ ।
ಲ್ಪಿಡಿಪಿಡಿದಿರ್ದುದಂಗಜನ ಕಯ್ಪಿಡಿಯಂ ಪಿಡಿಯಂ ಮತಂಗಜಂ || ೮೧ ||

ವ|| ಮತ್ತಮೊಂದೆಡೆಯೊಳ್

ಉ|| ಬೇನೆಯಿ ನಕ್ಷಿಗಳ್ ನಸು ಮುಗುಲ್ತಿರೆ ಪಿಂತುಮ ಕುನುಂಗಿ ಜೋಲೆ ಪೇ ।
ರಾನೆಯ ಕರ್ಣವಾಯು ಬೆಮರಾಱಿಸೆ ತಾಯ್ಪಿಡಿ ನೀಡೆ ಹಸ್ತದಿಂ ||
ತಾ ನವಳಂಬಿಸಿರ್ದು ತಟಭೂಜದೊಳೊಂದು ಕರೇಣು ಸೂಲಿಸು ।
ತ್ತೇನಣ ವಳ್ಳಿ ಮಾಡಿದುದೊ ಬೇಡರೊಳಂ ಕರುಣಾನುಭಾವಮಂ || ೮೨ ||

ವ|| ಅದಲ್ಲದೆಯುಂ.

ಕ|| ಪರಿಕಲಿತಗಂಡಶೈಲೋ ।
ತ್ಕರಮಧ್ಯದೊಳಮರ್ದು ರಂಜಿಪಂಜನಗಿರಿಯಂ ||
ಕರಿ ಪೋಲ್ತಿರಲೆಸೆದುದು ಬಳ ।
ಸಿರಿ ಪೋತಕಲಾಪ ವಲ್ಲಿ ಯೂಥಸನಾಥಂ || ೮೩ ||

ವ|| ಮತ್ತೊಂದು ಸಪ್ತಶಾಲ್ಮಲೀಷಂಡದೊಳ್.

ಕಂ|| ಎಲೆವೆಱಸು ಗಾಳಿಯಿಂ ಪಱಿ ।
ದೆಲವದ ಪಸುಗಾರ್ಯ್ಗೆ ಳುರುಳೆ ಮೂಗೂಱಿ ಶುಕಾ ||
ವಳಿ ಬಿೞ್ದ ವೆಂದು ಬಿಡೆ ನುಂ ।
ಗಲೊಡರ್ಚುವುವದಱ ಪೊದಱ ಬಾಳಬಿಡಾಳಂ || ೮೪ ||

ಕಂ॥ ತುಱುಗಿದ ತೂಱಿಲ್ಗೊಂಬಿನ ।
ತೆಱಿವುಗಳೊಳ್ ಕೂಡಿ ನುಸುಳಲಾಱದೆ ಸಿಲ್ಕಿಂ ॥
ಪಱಿದಿರ್ದ ಬೆಳ್ಮುಗಿಲ್ಗಳ ।
ಮುಱಿಗಳಿವೆನಿಸಿದುವು ಶಾಲ್ಮಲೀಫಳತೂಳಂ ॥ ೮೫ ॥

ವ॥ ಮತ್ತಮೊಂದಡೆಯೊಳ್.

ಕಂ॥ ಮರಗೊಂಬಿಂದಂ ನೇಲ್ದಿರೆ ।
ಯುರಗನ ಪಜ್ಜಳಿಪ ಪೆಡೆಯ ಮಾಣಿಕವೆಳಗೇಂ ॥
ಕರ ಮೆಸೆದುದೊ ವನದೇವತೆ ।
ಯರಮನೆಯೊಳ್ ನೇಲಿದೆಲೆಯ ಸೊಡರೆಂಬಿನಗಂ ॥ ೮೬ ॥

ವ॥ ಅದಲ್ಲದೆಯುಂ.

ಚಂ॥ ಬಿರಿಕಿನೊ ಳೊಯ್ಯನೊಯ್ಯ ನರೆದೋಱುವ ಬಿತ್ತುಗಳಿಂ ವಿಳಾಸ ಮಾ ।
ವರಿಸಿದ ದಾಡಿಮೀಫಳಮ ನೊಯ್ಯನೆ ಚುಂಬಿಸಿ ಬರ್ಪ ಕಾಂತನಂ ॥
ತರುಚರಕಾಂತೆ ಕಂಡು ಪುರುಡಿಂ ಬಡಿಯಲ್ ಪಡಿಗೊಂಡುದೀಟಿದ್ದ ಬ ।
ಲ್ಪರಿದು ಬಲೀಮುಖೀಮುಖಮ ನಿಂಬೆನೆ ಚುಂಬಿಸೆ ತೇಂಕಿ ಕೋಪಮಂ ॥ ೮೭ ॥

ವ॥ ಮತ್ತಮನೇಕಪನಸಜಂಬೀರನಾರಿಕೇಳಸಹಕಾರಕದಳೀಪ್ರಮುಖಫಲಿತಭೂಜರಾಜಿಗಳ್.

ಕಂ॥ ಅನುಭವಿಸುವ ಜನಮಂ ನೆ ।
ಟ್ಟನೆ ಪಡೆಯದೆ ಬಱಿದೆ ಕಿಡುವ ವಿವಿಧಫಲಂಗಳ್ ॥
ನೆನೆಯಿಸಿದು ವಲ್ಲಿ ದುರ್ಭಗ ।
ವನಿತೆಯ ರಮಣೀಯರೂಪಯೌವನದೊದವಂ ॥ ೮೮ ॥

ವ॥ ಅಂತವಂ ನೋಡುತ್ತುಂ ಬರೆವರೆ ಮುಂದೊಂದುಶಬರಶಿಬಿರದೊಳ್.

ಚಂ॥ ಬಿದಿರಿದ ಮುತ್ತುವಲ್ಲ ಮುಱಿಮೂಗಿನ ಬೊಂದಿಗೆವಾಯ ಪೊಂಗುಗ ।
ಗಲ್ಲದ ಪಸುರ್ಗಣ್ಣ ಕೆಂದಲೆಯ ಕಾಳಿಗವರ್ಣದ ಬೀಡೆಗಾಲ ಜೋ ॥
[ಲ್ದುದರದ ಕಂ]ಬಿಗೆಯ್ಯ ಸಿರೆಮೆಯ್ಯ ಱಿಗಡ್ಡದ ಕೂನಬೆನ್ನ ನು ।
ಗ್ಗಿದ ಕೊರಲಟ್ಟಿ ಪೇರುರದ ಲುಬ್ಧಕ ರಿರ್ದರಲಬ್ಧಮಾರ್ದವರ್ ॥ ೮೯ ॥

ವ॥ ಅವರೊಳಗೆ.

ಚಂ॥ ಸುಡುರ್ದಲೆ ಸಣ್ಣವುರ್ವೊಳುಮೊಗಂ ಬೆಳವಾರ್ಯ್ ಮಿಳಿರ್ಪೊಳ್ಗುರುಳ್ ತೊದ ।
ಳ್ನುಡಿ ನಿಡುಗಣ್ ತೊಳಪ್ಪ ಕದಪುದ್ದನೊಸಲ್ ಸುಲಿಪಲ್ ಘನಸ್ತನಂ ॥
ಬಡನಡು ನೀಟ್ದ ತೋಳ್ ಪೊಳೆವ ನುಣ್ದೊಡೆ ಮೆಲ್ಲಡಿ ಕೊಲ್ಲಿನೋಟ ಮು ।
ಗ್ಗಡೆದ ಸುವರ್ಣ ಮೆಂಬಿವಱಿ ನೊಪ್ಪಿದುದಿರ್ದ ವನೇಚರೀಜನಂ ॥ ೯೦ ॥

ವ॥ ಆಗಳಾಕಿರಾತರ ದುರ್ದರ್ಶನೀಯತೆಯುಮನಾಕಿರಾತೆಯರ ಸಹಜಾಮಳಾಂಗರಮಣೀಯತೆಯುಮಮಂ ಚಾತುರ್ಯಚತುರಾನನಂ ಕಂಡು ಚಿತ್ರಭಾನುಗಿಂತೆಂದಂ.

ಕಂ॥ ಈಚಾರುರೂಪಲಲಿತವ ।
ನೇಚರಿಯರ ನೀಕುರೂಪರೊಳ್ ಕೂಡಿ ನಿರಾ ॥
ಲೋಚಕ ನಾಬಿದಿ ವೇದಜ ।
ಡೋಚಿತವೃತ್ತಿಯ ನದಿಂತು ಕನ್ನಡಿಸುವನೇ　　॥ ೯೧ ॥

ವ॥ ಎಂದು ನುಡಿಯುತ್ತುಂ ಬರ್ಪನ್ನೆಗ ಮೊಂದುಮಕ್ಕಣಪರ್ಯಂತದೊಳ್ ಮಿಸುಪ ಕಿಸುಚಂದನದೊರಲ್ ಸ್ವರ್ಣವರ್ಣದಿಂದ ಮುಜ್ಜಳಿಸೆ.

ಚಂ॥ ಮದಗಜದಂತಕಾಂತಮುಸಳಂಬಿಡಿದೆತ್ತುವ ತೋಳ ನುಣ್ಪುಗರ್ ।
ಮದನನ ಬಾಳ ನುಣ್ಪುಗರ ನೇಲಿಸೆ ಗಾವರದಿಂಪು ವಲ್ಲಕೀ ॥
ಮೃದುರವ ದಿಂಪ ನೀಯೆ ಬಿದಿರಕ್ಕಿಗಳಂ ಚಳಿಸುತ್ತೆ ಪಾಡಿದರ್ ।
ಮದವತಿಯರ್ ಕಿರಾತಸತಿಯರ್ ಪ್ರಭುವೋರುವ ಲೀಲೆಯೇಳಿಗೆಯಂ　　॥ ೯೨ ॥

ವ॥ ಮತ್ತಮೊರ್ವಳ್.

ಚಂ॥ ಬನಕೆ ಕೊನರ್ತು ವಲ್ಲವಿಸಿದಪ್ಪು ದೊರಲ್ ನಸುದೇಂಕಿದಪ್ಪು ದಂ ।
ಬನಿತುವರಂ ಪೊದಳ್ದ ಕಳಗೀತರಸಂ ಕವಿತಂದಡರ್ದ್ದಪೋಲ್ ॥
ವನಮೃಗಮೊತ್ತಲುಂ ತಳರಲಾಱದೆಯಿರ್ದ್ದಿರೆ ವೇಣುಬೀಜಮಂ ।
ವನಚರಿ ಕುಟ್ಟುತುಂ ಪದೆದು ಪಾಡಿದಳಾಪ್ರಭುವಂಶಮೋರುವಂ　　॥ ೯೩ ॥

ವ॥ ಅದಲ್ಲದೆಯುಂ.

ಚಂ॥ ಮೃದುತಳತಾಳಕೀಪ್ರಹತಿ ಕಂಕಣಝುಂಕೃತಿ ಯುಕ್ಕುತಪ್ಪದೀ ।
ವದನವಿಳಾಸಮಂ ಶಬರಿ ತೋರ್ಪೆಡೆಯೊಳ್ ಮುಱಿದೇಱಿನೋಟ್ಟಿದುಂ ॥
ಪುದಿದ ಕಟಾಕ್ಷಕಾಂತಿಗಳಿ ನೇನಮರ್ದಿರ್ದನೊ ಚಂದ್ರಕಾಂತಿಗೋ ।
ಡದೆ ಮಲೆದಿರ್ದ ಕಟ್ಟಿಲೆಯ ಮೊತ್ತ ಮಿದೆಂಬಿನ ಮೊರ್ವಲುಬ್ಧಕಂ　　॥ ೯೪ ॥

ವ॥ ಮತ್ತಮೊಂದೆಡೆಯೊಳ್ ಅನೇಕಮಂಡನಮಂಡಿತೆಯರ್ ನೆರೆದಿರ್ದಲ್ಲಿ.

ಚಂ॥ ವನಚರರೆಚ್ಚು ಕೊಂದಿಭದ ಮುತ್ತಿನ ಹಾರಮ ನಾಳ್ದ ತತ್ಪ್ರಿಯಾಂ ।
ಗನೆಯರ ಯೌವನೋನ್ಮದವ ನೊರ್ವಳೆ ಯವ್ವನಗರ್ವಮುಂದು ತ ॥
ನ್ನನುಭವದಿಂದೆ ಹೀನಬಳನಾದ ವನೇಚರ ನಾಯ್ದು ತಂದು ಕೊ ।
ಟ್ಟನುಪಮಮೌಕ್ತಿಕಾಭರಣಕಾಂತಿ ಯುದೇಂ ನಗುವಂತುಟಾದುದೋ　　॥ ೯೫ ॥

ವ॥ ಅದಲ್ಲದೆಯುಂ.

ಕಂ॥ ಪಗೆಯ ನುೞಿದಪ್ಪಿದುದು ಕಾ।
ಳಿಗನಾಗನ ನೊಂದು ನೋಗೆನವಿಲೆನೆ ಕಣ್ಬೀ॥
ಲಿಗಳ ಪಸದನದೆ ಕೋಮಳೆ।
ನೊಗಯಿಸಿದಳ್ ಶಬರಿ ಕಬರಿ ಬೆಂಬಿಡದೆನೆಯಲ್ ॥ ೯೬ ॥

ಚಂ॥ ನಿಯಮದಿ ನಾಗಳುಂ ವನದೊಳಿರ್ಪ್ಪವಳೀಕ್ಷಿಸಿ ಕಲ್ತುಳಕ್ಕಿ ವಿಾ।
ಕ್ರಿಯೆಗಳ ನೆಂಬಿನಂ ಶಬರಿ ತಾಳ್ದಿದ ಪುಲ್ಲೆಯ ಕೊಲ್ಲನೋಬ ಪಂ॥
ಚೆಯ ನಿಮಿರ್ದಿಂಚರಂ ಗಿಳಿಯ ಚುಂಬನ ಪಾನೆಯ ನೋಂಕು ವಾನರ।
ಕ್ರಿಯೆ ಯುಮರ್ದಪ್ಪು ನೋಟದೊಳೊಱಲ್ಕಿತು ಕೂಬದೊಳೊರ್ವ ಭಿಲ್ಲನಂ ॥ ೯೭ ॥

ವ॥ ಬೇಱೊಂದುಮಧುಪಾನಗೋಷ್ಠಿಯೊಳನೇಕಶಬರೀಜನಂಗಳಿರ್ದಲ್ಲಿ.

ಕಂ॥ ಓರಂತೆ ತಾಳೆ [1]ತೆಂಗಿನ।
ಸೀರೆಯ ಕಳ್ಗಳ್ ಕಳರ್ಚಿ ನಿತ್ಯಗ್ರಹಮಂ॥
ಪಾರಯ್ಸೆ ಕುಣಿದರರೆಬರ್।
ಭೋರೆನೆ ಕೆಯ್ಪೞಿಯ ರಂಜಿಪೞಿ ಯೆನೆ ವನದೊಳ್ ॥ ೯೮ ॥

ವ॥ ಅದಲ್ಲದೆಯುಂ.

ಉ॥ ಕಾಸಿನ ಕಂಬಿ ಜಾಳವಲೆ ಗಾಳದ ಕಟ್ಟಗೆ ಸೊರ್ಕುಬೆಂಡು ಬಿಲ್।
ಹಾಸದ ಕುನ್ನಿ ದೀವದ ಮೃಗಂ ಬಲೆ ಪೆರ್ವಡಿ [2]ಗೋರಿ ಗಾಣ ಮೆಂ॥
ಬೀಸಮುಕಟ್ಟು ಪಾಪದೆಱೆವೆಟ್ಟು ಜಳಸ್ಥಳಪಾಱದಿಂ ಕ್ರಿಯೋ।
ಲ್ಲಾಸಮು ನುಂಟುಮಾಡಿ ಪೊಱಮಟ್ಟುದು ಬೇಂಟೆಗೆ ಲುಬ್ಧಕವ್ರಜಂ ॥ ೯೯ ॥

ವ॥ ಮತ್ತಮೊಂದುಪುಳಿಂದಮಂದಿರದ ಮುಂದೆ ಚಮೂರಚರ್ಮ ಚಮರವಾಳ ಗಜದಂತಾಳಿಗಳ ನೊಟ್ಟಿದ ದುಷ್ಕೃತಕದ ಬೆಟ್ಟ ಮೆನಿಪಟ್ಟದಿಂದಂ.

ಉ॥ ತೊಟ್ಟನೆ ಬೀೞೆ ಮೇಲೆ ಪುಲಿದೋಲ್ ನಿಜದೀವದ ಪುಲ್ಲೆ ಬೆರ್ಚಿ ಧಿಂ।
ಕಿಟ್ಟು ಚಮೂರ ಮೆಂದು ಬಿಱುತೋಡೆ ಬಹಿರ್ಮೃಗಿ ಯೆಂದದಂ ತಗು॥
ಳ್ದಟ್ಟುವ ವಿಶ್ವಕದ್ರುವ ನಭೀಕ್ಷಿಸಿ ಸಿಂಹಕಿಶೋರ ಮೆಂದು ಬೆಂ।
ಗೊಟ್ಟು ವಿಭಂಗಳೇನದು ನಿಮಿರ್ಚಿತೊ ಬೆರ್ಚಿನ ಬಳ್ಳವಳ್ಳಿಯಂ ॥ ೧೦೦ ॥

ವ॥ ಅಂತವಂ ನೋಡುತ್ತು ಮೆಯ್ದೆಬರ್ಪುದುಂ ತತ್ಸಮಯದೊಳ್ ಸೇನಾಪತಿಪ್ರೇಷಿತ ಪ್ರೇಷ್ಯ ಜನದೆ ಬೞಿಸಂದು.

[1] ತೇಂಕಿನ. [2] ಗೋಲಿ.

ಮ।ಸ್ರ॥ ಪಣೆಕಟ್ಟೊಳ್ವಿಲಿಯಿಂ ದುಟ್ಟುದು ಪೊಸದಳಿರಿಂ ಹಾರ ಮುಗ್ರೀಭಮುಕ್ತಾ ।
ಗಣದಿಂ ಕರ್ಣಾವತಂಸಂ ಫಣಿಫಣಮಣಿಯಿಂ ಸ್ಥಾಸಕಂ ದಂತಿದಾನೋ ॥
ಕ್ಷಣದಿಂ ಮೆಯ್ವೆತ್ತಿರಲ್ ಬಂದೆಱಗಿದ ನಧಿಕಪ್ರೀತಿಭೀತಾಂತರಂಗಂ ।
ಗುಣತುಂಗಶ್ರೀಪದಕ್ಕಾಗಹನದ ಶಬರಾಧೀಶ್ವರಂ ಶಂಬ ನೆಂಬಂ ॥ ೧೦೧ ॥

ವ॥ ಎಱಗಿ.

ಮ॥ ಕರಿದಂತಂ ಚಮರೀರುಹಂ ಪುಲಿದೊವಲ್ ಹಂಸಚ್ಛದಂ ಪೀಲಿ ಕ ।
ಸ್ತುರಿ ಕಾಲಾಗುರು ಚಂದನಂ ಹಿಮಕರಂ ಜಾತೀಫಳಂ ಪೂತಿ ಸೂ ॥
ಕರಮುಕ್ತಾಮಣಿ ಯುಚ್ಚಪತ್ರಮಣಿ ಚೂಡಾರತ್ನ ಮೆಂಬೀವನಾಂ ।
ತರಸಂಜಾತಮ ನಾತ ನೋಲಗಿಸಿದಂ ಸದ್ವಸ್ತುಸಂಘಾತಮಂ ॥ ೧೦೨ ॥

ವ॥ ಅಂತೋಲಗಿಸಿ ನಿಟಿಲತಟಘಟಿತಕರಯುಗಳ ನಾಗಿ.

ಕಂ॥ ಕಾಡ ಮೃಗದೊಡನೆ ಮೃಗದವೊ ।
ಲಾಡುವ ಜಡಮತಿಯೊ ಳೆನ್ನೊ ಳಾವುದ [1]ಮಾಣಂ ॥
ನೋಡದಿನಿನೊಸೆದು ದೇವರ್ ।
ನೋಡುಗೆ ಭಯಭಕ್ತಿಗಿರದೆ ನಡೆವಾಳ್ವೆಸನಂ ॥ ೧೦೩ ॥

ವ॥ ಎಂದು ಬಿನ್ನಪಂಗೆಯ್ಯಲ್ ಕೇವಳಭೃತ್ಯಭಾವಾವಳಂಬನಂ ಶಂಬನಂ ಸಮುಚಿತಪ್ರಸಾದದಿಂ ಮನ್ನಿಸಿ ನಡೆವ ಯುವರಾಜಂಗೆ ಮುಂದೊಂದೆಡೆಯೊಳ್.

ಮ।ಸ್ರ॥ ಅಧಟಂ ಲೋಕೈಕಮಿತ್ರಂ ಬರೆ ಪುಗಲೆಡೆಯಂ ಕಾಣದುಳ್ಳಿಕ್ಕಿ ಬಂದ ।
ಪ್ಪುದು ಕಾಣ್ಬುದ್ಯೋಗದಿಂದೀಗಹನದ ಬಹಳಧ್ವಾಂತ ಮೆಂಬಂತೆ ತಾತ್ಪ ॥
ರ್ಯದಿ ನಾದಾಶ್ಚರ್ಯಗಂಧಕ್ಕೆಳಸೆ ಯಳಿಕುಳಂ ಕೂಡೆ ಮುಂದೈಸಿ ತನ್ನೊಳ್ ।
ಪುದಿದೆತ್ತಂ ಬರ್ಪಿನಂ ಬಂದುದು ವನದಿ ನದೊಂದದ್ಭುತಂ ಮಾತರಿಶ್ವಂ ॥ ೧೦೪ ॥

ವ॥ ಆಗಳಾಸಮೀರಸೌರಭಂ ತನಗನಾಘ್ರಾತಪೂರ್ವಮು ಮತಿಮನೋಹರಮು ಮಪ್ಪುದಱಿಂ ತದ್ಗತಚಿತ್ತನುಂ, ನಿಮೀಲಿತಲೋಚನನು ಮಾಗಿ ಕಿಱಿದುಬೇಗ ಮಾಗಾಳಿವೆಱಗಿನೊಳೆ ರಥಮಂ ನಿಲಿಸಿ ವಿಸ್ಮಯಂಬಡುತ್ತೆ ನಿಂದಿರ್ದ ಯುವರಾಜನಾದೇಶದಿಂ ವಾಸ್ತವ್ಯನಪ್ಪ ಪುಳಿಂದಂ ಮಿಳಿಂದನಂತೆ (ಪ)ವನಾನೀತಕುಸುಮಗಂಧಮ ನಾರಯ್ದು ಎಡೆಮಾಡಿ ಬಂದು ಬಿನ್ನವಿಸಿ ಕುತೂಹಳಂಬೆರಸು ತತ್ಪ್ರದೇಶಕ್ಕೊಡಗೊಂಡೊಯ್ದು ತೋರ್ಪುದುಂ.

ಕ॥ ಸ್ವೀಕೃತಶುಭಲಕ್ಷಣ ನಂ ।
ಗೀಕೃತರಮಣೀಯರೂಪಯವ್ವನಮತ್ತಂ ॥
ಸ್ವೀಕೃತನಮೇರುಚಾರುಲ ।
ತಾಕುಸುಮಮಂ ಖಚರನೊರ್ವ ನಪಗತಗರ್ವಂ ॥ ೧೦೫ ॥

[1] ಳಾವುದು ಮನನಂ.

ಚಂ|| ಪೊಸಸಿರಿಖಂಡದಿಂದ ಮೆಸೆವಣ್ಪಿನ ಕಂಪಿನಲಂಪೊಳೆಕ್ಕೆಯಿಂ ।
ಮುಸುಱಿದು ವೀತನಂ ಫಣಿಗಳೆಂಬಿನ ಮೊಂದಿದ ನಾಗಪಾಶದಿಂ ||
ಮಿಸುಕದೆ ಕಟ್ಟುಪಟ್ಟು ಮಣಿಭೂಷಣಕಾಂತಿ ಕುಜಾತಕುಂಜತಾ ।
ಮಸಮ ನಗಲ್ಕೆ ದೀನಮುಖ ನಿರ್ದ ನದೊಂದು ಮಹಾಕ್ಷವೃಕ್ಷದೊಳ್ || ೧೦೬ ||

ವ|| ಅಂತಿರ್ದ ವಿಯಚ್ಚರನ ನಚ್ಚರಿವಟ್ಟು ನೋಡುವಲ್ಲಿ.

ಚಂ|| ಇದು ವಿಪರೀತ ಮಾದೊರೆತ ನಾಳ್ದುದು ಬಂಧುರಗಂಧಮಂ ತಮಾ ।
ಳದ ತಳಿಗೊರ್ಂಚಲೆಂಬ ಮತಿಮೋಹಮ ನೀಕ್ಷಿಪ ಪದ್ಮಸೂನುಗಿ ||
ತ್ತುದು ತನಿಗರ್ಪುವೋಲ್ ಮುಸುಱಿ ನಿಂದೆಳದುಂಬಿಯ ಬಂಬಲಿಂ ಕಱಂ ।
ಗಿದ ನವಪಾರಿಜಾತದಲದೊರ್ಂಗಲ ಕರ್ಣಿಕೆ ತತ್ಕಪೋಲದೊಳ್ || ೧೦೭ ||

ವ|| ಆಗಳ್.

ಮಾಲಿನೀ|| ಬಱಿಯ ಸುೞಿಯ ದುನ್ಮತ್ತಾಳಿ ತಣ್ಗಾಳಿಯೊಳ್ ಸೈ ।
[1]ತಱಿಪಿ ಬರೆ ತೆರಳ್ದೆಯ್ಪ[ಯ್ದ]ಸೌಗಂಧ್ಯ [2]ಮಾಚೆ ||
ಲ್ವಱಿಯದೆಸೆವ ಕರ್ಣೋತ್ತಂಸದಿಂ ಬಂದುದೆಂ[ದಂ] ।
ದುಱಿದ ನಿರದೆ ಚಿತ್ತಭ್ರಾಂತಿಯಂ ರಾಜಪುತ್ರಂ || ೧೦೮ ||

ವ|| ತದನಂತರಂ ದೃಢಪ್ರಣದ್ಧನಾಗಪಾಶಮ ನಿವಂಗಿದು ವಿರೋಧಿಕೃತ ಮಂದಿಂಗಿತದಿ ನಱಿದು ಚಾತುರ್ಯಚತುರಾನನಂ ತನ್ನ ಮನ ವಾತನ ಶರೀರಸಹಜಸೌಕುಮಾರ್ಯಮಂ ತತ್ಪುರುಷೋಪಲಕ್ಷಿತಾಕಾರಮುಮ ನಱಿದು ಆಗ್ರಹಂಗೆಯ್ಯೆ.

ಚಂ|| ತನಗೆ ಭವಾಂತರಪ್ರಿಯತೆಯಿಂದೆ ಬಳಾಹಕನೆಂಬ ಖೇಚರಂ ।
ಮನಮೊಸೆದೀಯೆ ಮುಂ ಪಡೆದು ಬಂದ ವಿಮೋಚನಿ ಯೆಂಬ ವಿದ್ಯೆಯಂ ||
ನೆನೆದು ಪಿನದ್ಧನಂ ಬಿಡಿಸಿದಂ ಖಗವಂಶನ ನಪ್ಪುದತ್ತೆ ಭೂ ।
ವಿನುತಪರೋಪಕಾರಗುಣ ರೆಂತು ಮುಪೇಕ್ಷಿಪರೇ ವಿಷಣ್ಣರಂ || ೧೦೯ ||

ವ|| ಆಗಳ್ ಮುಕ್ತನಾಗಪಾಶನು ಮುದ್ಗತಾಕ್ಷವೃಕ್ಷನು ಮಾಗಿ.

ಕಂ|| ಸ್ಫುರಿತಮುಖಾಲೋಕಂ ಸ್ನೇ ।
ಹರಸಾರ್ದ್ರತೆ ಪಾತ್ರವೃತ್ತಿ ಯೆಂಬಿವು ತನಗೊ ||
ಪ್ಪಿರೆ ದೀಪವರ್ತಿಯಂತಿರೆ ।
ಪರಹಿತನಿಧಿಗೆಱಗಿ ನುಡಿದ ನಾಖಚರೇಂದ್ರಂ || ೧೧೦ ||

[1] ತೆಳಸಿ. [2] ಮಾಸಲ್ವಱಿಯಲೆ, ಮಿರ್ಚಲ್ವ.

ಉ॥ ಆರೊಳರೀಮಹಾಟವಿಯೊಳಿಲ್ಲಿಗೆ ಮತ್ಕೃತಪುಣ್ಯದೇವತಾ ।
ಕಾರದೆ ಬಂದು ಬಂಧಮು ನಗಲ್ಚಿದೆ ನಿನ್ನ ಹಸಾದದಿಂದ ಮಾ ॥
ವೈರಿಯ ನಿಂದೆ ಪೋಗಿ ಮಡಿಪಲ್ ಪಡೆದೆಂ ಪಡೆಮಾತದೇನೊ ನಿ ।
ಷ್ಕಾರಣ(ದಿಂದೆ) ನೀನೆನಗೆ ಗೆಯ್ದುಪಕಾರಮು ನೆಂತು ನೀಗುವೆಂ ॥ ೧೧೧ ॥

ವ॥ ಎಂದು ನುಡಿದತಿವಿನತನ ನಾತನಂ ನೋಡಿ ಹರುಷದಿಂ.

ಕಂ॥ ನೀನಾರ್ಗೆ ನಿನ್ನ ನಾಮ ವ ।
ದೇ ನಿಲ್ಲಿಗದೇಕೆ ಬಂದೆ ನಿನಗಿಂತೆಂತಾ ॥
ಯಿತ್ತು ನಾಗಪಾಶಬಂಧವಿ ।
ಧಾನದ ಬಲುಸಿಲ್ಕು ವೈರಿ ಯೆಂಬವ ನಾವಂ ॥ ೧೧೨ ॥

ವ॥ ಎಂದು ಬೆಸಗೊಳ್ವುದುಂ.

ಮ॥ ಅಮೃತಸ್ಯಂದಮು ನಬ್ಜಕಂದಮು ನುದಂಚತ್ಕುಂಚಮುಂ ಸಂದ ಕುಂ ।
ದಮು ನಿಂದುದ್ಯುತಿವೃಂದಮುಂ ನಿಜಯಶಃಶ್ರೀಕಾಂತಿಸಂತಾನ ಮಾ ॥
ಕ್ರಮಿಸಲ್ ಸದ್ಗುಣಧಾಮ ನಾದ ವಿನಯಾಲಂಕಾರನಂ ಸತ್ಯಸಂ ।
ಯಮನಂ ಸಾರಪರೋಪಕಾರಧನನಂ ಸೌಂದರ್ಯಕಂದರ್ಪನಂ ॥ ೧೧೩ ॥

ಉ॥ ಭೂಪಶಿಖಂಡಖೇಚರನ ನಾಹವದೋಹಳನಂ ಜಿನೇಶ್ವರ ।
ಶ್ರೀಪದಹೇಮತಾಮರಸಮಂಡಿತಮಾನಸನಂ ವಿವೇಕವಿ ॥
ದ್ಯಾಪತಿಯುಂ ಖಗಾಧಿಪತಿ ಕೇಳಿಸಲುದ್ಯತನಾದ ನಿಂತು ಸಂ ।
ಕ್ಷೇಪದಿ ನಾತ್ಮವೃತ್ತಕಮು ನಂದೊಲವಿಂ ಪ್ರಭುವಂಶಮೇರುವಂ ॥ ೧೧೪ ॥

(ಇದು ಯುಗ್ಮಂ)

ಗದ್ಯ

ಇದು ಸಕಳಭುವನಸಂಸ್ತುತಜಿನಾಗಮಕುಮುದ್ವತೀಚಾರುಚಂದ್ರಾಯಮಾಣಮಾನಿತ
ಶ್ರೀಮದುಭಯಕವಿಕಮಳಗರ್ಭ **ಮುನಿಚಂದ್ರ** ಪಂಡಿತದೇವಸುವ್ಯಕ್ತ ಸೂಕ್ತಿ
ಚಂದ್ರಿಕಾಪಾನಪರಿಪುಷ್ಟಮಾನಸಮರಾಳ
ಗುಣವರ್ಮನಿರ್ಮಿತಮಪ್ಪ
**ಪುಷ್ಪದಂತ ಪುರಾಣದೊಳ್**
ಯುವರಾಜದಿಗ್ವಿಜಯವರ್ಣನಂ
ಪಂಚಮಾಶ್ವಾಸಂ

# ಪುಷ್ಪದಂತಪುರಾಣಂ

## ಷಷ್ಠಾಶ್ವಾಸಂ

### ಶ್ರೀಮತ್ಪಂಚಗುರುಭ್ಯೋನಮಃ

ಕಂ|| ಶ್ರೀವಿದ್ಯಾಧರಪತಿಯ ಕ ।
ಥಾವಿತತಕ್ಷೀರಮಂ ನಿಜಶ್ರುತಿಮುಖದಿಂ ॥
ಸೇವಿಸಿದಂ ಲುಪ್ತರಿಪು ।
ಶ್ರೀವನಜಂ ಪ್ರಭುಗುಣಾಬ್ಜಿನೀಕಳಹಂಸಂ ॥ ೧ ॥

ವ|| ಅದೆಂತೆಂದೊಡೆ.

ಮ|| ಇದ ನೇಮೇೞ್ವೆನೊ ದೇವ ಭಾವಿಸೆ ಕರಂ ಲಜ್ಜಾವಹಂ ಹೇಮಕೂ ।
ಟದ ವಿದ್ಯಾಧರರಾಜನೆಂ ಪೆಸರೊಳಂ ಚಿತ್ರಾಂಗ ನೆಂಬೆಂ ಮನೋ ॥
ಮುದದಿಂ ಮಂದರಕಂದರಕ್ಕೆ ಪುರದಿಂ ಬಂದಾನು ಮೆನ್ನೋವಳುಂ ।
ಪದುಳಂ ಕ್ರೀಡಿಸುತಿರ್ದೆ ಮಂದು ವಿಲಸತ್ಕಲ್ಪದ್ರುಮೋದ್ಯಾನದೊಳ್ ॥ ೨ ॥

ವ|| ಅಂತು ಯೌವನೋಚಿತಕ್ರೀಡಾವಿನೋದದಿಂದ ಮಿರ್ದು ಪರಿಶ್ರಾಂತನಂ ಬಾಳುಂಬೇಳು ಮಾಡಿ.

ಮ||ಸ್ರ|| ತೆಱಪಂ ಪಾಱುತ್ತು ಮಿರ್ದೆನ್ನಯ ರಿಪುವ ನುಪಾಯಜ್ಞನಂ ಸ್ತ್ರೈಣದಿಂ ।
ಮುನ್ನುಱಿ ಬನ್ನಂಬೆತ್ತನಂ ಪುಷ್ಕಲಪುರದ ಹಯಗ್ರೀವನಂ ಕರ್ಮದಿಂದಂ ॥
ಮಱಿದಾಂ ಮೆಯ್ಯ್ವಟ್ಟು ನಿದ್ರಾಸುಖದಿ ನಱಲೆ ಬಂದೆನ್ನ ನೀವಿದ್ಯೆಯಿಂದ ।
ಳ್ಕುಱಿ ಕಟ್ಟಿಟ್ಟಲ್ಲಿಗೀಡಾಡಿಸಿ ಖಳನವ ನೆನ್ನೋಪಳಂ ಕೊಂಡು ಪೋದಂ ॥ ೩ ॥

ಕಂ|| ಕುತ್ತದ ಬಿತ್ತು ವಿಮೋಹದ ।
ಪುತ್ತು ವಿವೇಕದ ವಿನಾಶ ಮೆನಿಸುವ ನಿದ್ರಾ ॥
ವೃತ್ತಿಯಿ ನೀಪರಿಭವ ಮಾ ।
ದತ್ತಲ್ಲದೊಡೆವನ ದೊರೆಯ ರೆನಗಣ್ಮುವರೇ ॥ ೪ ॥

ವ|| ಆದೊಡಂ.

ಕಂ|| ಅವನೆನಗಪಕಾರಂಗೆ ।
ಯ್ದುವ ನಲ್ತುಪಕಾರಿಯಾದ ನೆಂತೆನೆ ಗುಣಗೌ ॥
ರವನಿಧಿಯ ನಿನ್ನ ದರ್ಶನ ।
ಮವನಯ ಕಾರಣದಿ ನೆನಗೆ ದೊರೆಕೊಂಡುದಱಿಂ ॥ ೫ ॥

ವ|| ಅಂತು ನಿಜಪ್ರಪಂಚಮಂ ಪೇೞೆ ಶೌರ್ಯಸನ್ನಾಹ ನಾದಂ ಹಯಗ್ರೀವನ ದುರಾತ್ಮವೃತ್ತಿಗೆ ಕುಪಿತಹೃದಯನಾಗಿ ತನಗೆ ಚಕ್ರವಾಲಪುರದ ವಿದ್ಯಾಧರಾಧಿಪತಿಯಪ್ಪ ಬಳಾಹಕಂ ಪರಮಪ್ರೀತನಪ್ಪುದಱಿಂ ಚಿತ್ರಾಂಗಂಗಿಂತೆಂದಂ.

ಕಂ॥ ನಿನಗೊರ್ವ ಖಚರಪತಿಯುಂ ।
ಮೊನೆಗೆ ನೆರಂಬೇಡಿಱ್ವಿ ನೆಯ್ದಿ ತತ್ಫಳನಂ ನೀಂ ॥
ಮುನಿಸಾಱಿತಿ ಕೊಂದು ವಿಜಯಾಂ ।
ಗನೆಯುಂ ನಿಜವಧುಗೆ ಸವತಿಯಾಗಿಸು ರಣದೊಳ್ ॥ ೬ ॥

ಉ॥ ದೇವ ನಿಜಪ್ರಸಾದವೆ ನೆರಂ ನೆರವೆಂಬುದ ನೊಲ್ಲೆ ನಿಲ್ಲಿಗಾ ।
ನಾವುದುವಂ ಮದುದ್ಧತಬಳಂ ಬೆರಸೀಗಳೆ ಪೋಗಿ ಬೇಗ ಮಾರ್ ॥
ಕಾವೊಡೆ ಮಿಕ್ಕಿ ಪುಷ್ಕರಪುರಾಧಿಪನಂ ಮಗುಱ್ದಾನು ಮೆನ್ನ ಮಾ ।
ದೇವಿಯುಂ ಮೆಯ್ದಿ ನೀಂ ಕಳಿಪಿದಿಂ ಬಱಿಕೆನ್ನ ಪೊಱಲ್ಗೆ ಪೋದಪೆಂ ॥ ೭ ॥

ವ॥ ಎಂದು ಮತ್ತಮನೇಕವಿದ್ಯಾಬಲದೊಳಂ ಭುಜಬಲದೊಳಂ ಸುಭಟಬಲದೊಳಂ ಗೆಲಲಾರ್ಪ ನಂಬುಗೆನುಡಿದು ಬೀಱ್ಕೊಂಡು ಚಿತ್ರಾಂಗ ನತ್ತ ಪೋವುದು ಮಿತ್ತ ಲಾಕಾಂತಾರಮಂ ದಾಂಟಿ ಬರ್ಪಲ್ಲಿ.

ಉ॥ ಸಾಮಜಸಂಕುಲಂ ಪೆಡೆ ಚಮೂಪತಿ ನೆತ್ತಿಯ ಮಾಣಿಕಂ ಹಯ ।
ಸ್ತೋಮ ಮುದಗ್ರಜಿಹ್ವೆ ಸುಭಟಾವಳಿ ನಂಜಿನ ದಾಡೆ ಯೆಂಬಿನಂ ॥
ಭೀಮಪುರಕ್ಕೆ ಕೋಟ್ಮಸಗಿ ನೀಱ್ದಿರೆಗೊಂಡುದು ಪದ್ಮಪುತ್ರಸೇ ।
ನಾಮುಖ ಮೆಂಬ ಭೀಮಭುಜಗಂ ಮಲೆದಿರ್ದ ಮತಂಗರಾಜನಂ ॥ ೮ ॥

ವ॥ ಅಂತು ಮಂಗಳನಾಯಕವ್ರಜಮೇ ನಿಜಭುಜಕ್ಕೆ ಮತಂಗನನಾಪತಂಗಮಂ ಮಾಡಿ ತತ್ಪುರಮಂ ಕೈಕೊಂಡಿರ್ಪುದು ಮಲ್ಲಿಗೆಯ್ದುವಂದು ಸೌಂದರ್ಯಕಂದರ್ಪಂಗಾಸನ್ನಮಾಗಿ.

ಚಂ॥ ತರುಣತಮಾಳಕಾಳಿಮವರಚ್ಛವಿವೆತ್ತುವಕಂಠದೊತ್ತ ನಾ ।
ವರಿಸಿ ಶಿಖಂಡಿಮಂಡಲದೊಳೊಂದಿ ಲಸದ್ಘನಪುಷ್ಪದಿಂ ದಲಂ ॥
ಕರಿಸಿ ಸಲೀಲಭಂಗಮ ನುಪಾರ್ಜಿಸಿ ಭಂಗುರವೇಣಿ ಯೆಂಬ ಬಂ ।
ಧುರನದಿ ರಂಜಿಸಿತ್ತು ಮಹಿಕಾಂತೆಯ ಭಂಗುರವೇಣಿ ಯೆಂಬಿನಂ ॥ ೯ ॥

ಮ॥ ಕಳಹಂಸೀರವದಿಂದ ಮಾದರಿಸಿ ವೀಚೀಬಾಹುವಿಂ ಕಾಲ್ಗಳಂ ।
ತೊಳೆದಂಭಃಕಣಸೇಸೆಯಿಂ ಸರಸಿಜಶ್ರೀಗಂಧದಿಂ ಫೇನನಿ ॥
ರ್ಮಳವಸ್ತ್ರಂಗಳಿ ನರ್ಘ್ಯಮಂಗಳಮ ನಿಂಬಿಂ ಮಾಡಲುತ್ಕಂಠೆ ಯಾ ।
ದಳಿಳಾನಾಥಸುತಂಗೆ ಸಿಂಧುನದಿ ಯಂತಭ್ಯಾಗತಪ್ರೀತಿಯೊಳ್ ॥ ೧೦ ॥

ಕಂ॥ ಎನಸುಂ ನೀರ್ಪೀರಲ್ಬಂ ।
ದ ನವಾಭ್ರದಿ ನೆಸೆವ ವನಧಿವೇಳೆಯ ತೆಱನಂ ॥
ನೆನೆಯಿಸಿದತ್ತಾನದಿ ಮ ।
ಜ್ಜನಕೇಳಿಯೊಳಿರ್ದ ಕಟಕದಾನೆಗಳಿಂದಂ ॥ ೧೧ ॥

ಕಂ|| ಕರಿಗಳವಗಾಹಮಿರೆ ಸಿಂ ।
ಧುರದ ರಜಂಬೊರೆದು ರಂಜಿಸಿತ್ತು ಕರಂ ಸೌಂ ॥
ದರಿಯು ತನು ಸತ್ಯಾಕರ ನೆ ।
ಱ್ತುರುತಿರೆ ತಾಂ ಕೂಡೆ ರಾಗವೇಱಿದ ತೆಱದಿಂ || ೧೨ ||

ಅಱಿಪಿಂದ ವರುಣವಸ್ತ್ರದ ।
ಪಱಿಯಿಗೆಗಳ ನೆಱಿಲ ನೆರೆಗ ಳೆಂದೆಳಮೀಂಗಳ್ ॥
ಘುಳಿಲನೆ ಪಾಯ್ದುಡಿಗಡಿಗಳ ।
ಪಱಿಯೆ ಬಱಿಲ್ದುಱಿಲುತಿರ್ದುವೋರೊಂದೆಡೆಯೊಳ್ || ೧೩ ||

ಚಂ|| ಅಮರೆ ಮಡಲ್ತು ಪರ್ವಿದ ತಮಾಳವನಂ ಜಳಬುದ್ಬುದಪ್ರಘೋ ।
ಷಮ ನೊಳಕೊಂಡು ಕಱ್ತುಲಿಸೆ ಕಂಡು ಘನಾಗಮ ಮಾದುದೆಂದು ಸಂ ॥
ಭ್ರಮಿಸಿ ಪಿಕಾಳಿ ಮೂಗುವಡೆ ಚಾದಗೆ ರಾಗಿಸೆ ಕೇಕಿತಾಂಡವಂ ।
ನಿಮಿರೆ ಮರಾಳ ಮುಕ್ಕೆ ತಟನೀತಟ ರಂಜಿಸಿದತ್ತು ಸುತ್ತಲುಂ || ೧೪ ||

ವ|| ಮತ್ತಂ.

ಚಂ|| ಒದವಿಸಲಾರ್ತುದಲ್ಲಿ ಜಳಕೇಳಿಯೊಳಿರ್ದ ನಿತಂಬಿನೀಕದಂ ।
ಬದ ಮುಖ ವಬ್ಜಮಂ ನಯನ ಮುತ್ಪಲಮಂ ಮೊಲೆ ಚಕ್ರವಾಕಮಂ ॥
ಸದಮಲಹಾರಯಷ್ಟಿ ಜಳಶೀಕರಮಂ ನಳಿತೋಳ್ ತರಂಗಮಂ ।
ಮೃದುನಿನದಂ ವಿಹಂಗರವಮಂ ದಶನಾವಳಿ ಫೇನಪಿಂಡಮಂ || ೧೫ ||

ವ|| ಅಗಳಾತರಂಗಿಣೀತಟದೊಳವನೀಶನಂದನಂಗೆ ವೃಷಸೇನನೆಂಬ ವೃದ್ಧಪುರೋಹಿತಂ.

ಮ|| ನಿರುತಂ ತ್ವತ್ಪಿತೃ ಮುನ್ನ ಮಿಲ್ಲವರ ಮಾಜ್ಞಾನಮ್ರರಂ ಮಾಡಿ ಭೂ ।
ಪರ ನೀಸಿಂಧುವ ತೀರದೊಳ್ ನಿಱಿಸಿ ಕೀರ್ತಿಸ್ತಂಭಮಂ ಲೀಲೆಯಿಂ ॥
ಚರಿತಾರ್ಥಂ ಮಗುೞ್ದಂ ಪುರಕ್ಕೆ ವಿಜಯಶ್ರೀಕಾಂತ ನೀಮುಂ ಮನೋ ।
ಹರ ಮಪ್ಪಿಲ್ಲಿಯೆ ಬೀಡುವಿಟ್ಟು ನಿಱಿಸಲ್ವೇೞ್ಕುಂ ಯಶಸ್ತಂಭಮಂ || ೧೬ ||

ಕಂ|| ಅಟವೀಸಮೀಪ ಮತ್ಯು ।
ತ್ಕಟತೃಣಜಳಬಹಳ ಮೀಪ್ರದೇಶಂ ದಿಕ್ಪ ॥
ರ್ಯಟನಶ್ರಮ ಮಾಱುವಿನಂ ।
ಕಟಕಂ ವಿಶ್ರಮಿಸುಗಿಲ್ಲಿ ಕತಿಪಯದಿವಸಂ || ೧೭ ||

ವ|| ಅದಲ್ಲದೆಯುಂ ಬೇಱೊಂದು ಸಕಲಸೌಖ್ಯಹೇತು ವಪ್ಪ ಮುಖ್ಯಪ್ರಯೋಜನ ಮುಂಟದಾವುದೆಂದೊಡೆ ಮಹಾಪುಣ್ಯಸಿಂಧುಗಾತ್ಮಗಂಭೀರನಾಭಿಮಂಡಳಮುಂ, ಜನ್ಮಸ್ಥಾನಮು ಮಾಗೆ ರಂಜಿಪ ಸುಪಾರ್ಶ್ವಪರಮೇಶ್ವರರಿಂ ದಲಂಕರಿಸಿ ನೆಟ್ಟನಿಲ್ಲಿಗೇಕಗವ್ಯೂತಿಪ್ರಮಾಣಾಂತರದೊಳ್.

ಮ॥ ಸುರವಿದ್ಯಾಧರಮಾನವೋರಗಜನಾರಾಧ್ಯಂ ವಿನಿರ್ಧೂತದು ।
ರ್ಧರಪಾಪಪ್ರಸರಂ ಜಗತ್ರಯಮಹಾತಾಪತ್ರಯೋದ್ರೇಕಸಂ ॥
ಹರ ಮಿಾತೋಱುವ ಚಿತ್ರಕೂಟಗಿರಿಯೊಳ್ ಚೈರಂತನಂ ಸಿದ್ಧಶೇ ।
ಖರ ಮೆಂಬುನ್ನತತೀರ್ಥ ಮೊಂದೆಸೆಯುಂ ತಿಕರ್ಕ್ಕಂ ತ್ರೈಜಗತ್ಪಾವನಂ ॥ ೧೮ ॥

ವ॥ ಅಲ್ಲಿ.

ಕಂ॥ ಬರಿಸಕ್ಕಂ ಭವ್ಯೋತ್ಸವ ।
ಕರ ಮೆನಿಸಲ್ ಬರ್ಪ ಸರ್ವಫಾಲ್ಗುಣನಂದೀ ॥
ಶ್ವರಪೂಜೆಗ ಖೇಚರಭೂ ।
ಚರರ ಮಹಾಯಾತ್ರೆ ನೆರೆವುದ ಷ್ಟಾಹ್ನಿಕದೊಳ್ ॥ ೧೯ ॥

ಆದಿವಸಕ್ಕಲ್ಲಿಗೆ ಪು ।
ಣ್ಯೋದಯ ನೀಂ ಪೋಗಿ ಜಿನಮಹಾಮಹಿಮೆಯ ನಾ ॥
ಹ್ಲಾದದೆ ಮಾಡಿಸಿ ಬರೆ ನಿ ।
ನ್ನೀದಿಗ್ವಿಜಯಾಗಮಕ್ಕೆ ಸಫಲತೆ ಸಾರ್ಗುಂ ॥ ೨೦ ॥

ವ॥ ಎಂದು ಬಿನ್ನಪಂಗೆಯ್ದ ಪುರೋಹಿತವಚನಮಂ ನೊಡಂಬಟ್ಟು ಗುಣತುಂಗನಾದೇಶದಿಂ ಭಂಗುರವೇಣೀತರಂಗಿಣಿಯ ಬಡಗಣ ತಡಿಯೊಳ್ ಪಡೆವಳರ್ ಬೀಡುವಿಡಿಸೆ.

ಮ॥ ಕರಿಣೀಕುಂಜರವಾಜಿವೇಸರರಥಾಂದೋಳಾದಿಯಾನಂಗಳುಂ ।
ಬ್ಬರಮುಂ ರಾಸಭಸೈರಿಭೋಕ್ಷಕರಭವ್ರಾತಂಗಳೊತ್ತೊತ್ತೆಯುಂ ॥
ನರನಾರೀಜನದೊಂದುಗೊಂದಣಮುಂ ಮುಂದತ್ತಂ ಚತುರ್ಯೋಜನಾಂ ।
ತರದೊಳ್ ತೀವಿರೆ ಬಿಟ್ಟುದಲ್ಲಿ ಕಟಕಂ ವ್ಯಾಲೋಲಕೋಲಾಹಲಂ ॥ ೨೧ ॥

ಶಾ॥ ಆಗಳ್ ಸೆಜ್ಜೆಗೆ ಮಜ್ಜನಕ್ಕೆ ಪಚನಕ್ಕೊಡ್ಡೋಲಗಕ್ಕಾಯುಧಾ ।
ಭೋಗಕ್ಕಶ್ವಗಣಕ್ಕಿಭಾವಳಿಗೆ ಭಂಡಾರಕ್ಕೆ ಮಂತ್ರಕ್ಕೆ ಕೋ ।
ಟ್ಯಾಗಾರಕ್ಕನುಮಂಡನಕ್ರಿಯೆಗೆ ಕೇಲಾರಕ್ಕೆ ದೇವಾರ್ಚನೋ ।
ದ್ಯೋಗಕ್ಕೆಂದಳವಟ್ಟ ಮಂಡವಿಗೆ ಗೂಡಾರಂ ಕುಟೀಮಂಡಳಂ ॥ ೨೨ ॥

ಕಂ॥ ವರವೇಲಿ ತಟ್ಟ ತಳೆ ಗೋ ।
ಪುರ ಮಾಳ್ವೆಱಿಪಡಿ ತವಂಗ ವಂಕದ ಕಳ ನೋ ॥
ವರಿ ಸೀಯಬಾರ ವಂತಃ ।
ಪುರ ಮುಯ್ಯಲ್ ಕೃತಕಶಿಖರಿ ಯುದ್ಯಾನವನಂ ॥ ೨೩ ॥

ಎಂಬಿವು ಮೊದಲಾಗಿರೆ ಮು ।
ತ್ತಂ ಬಹುವಿಧಪರಿಕರಂಗಳೊಮ್ಮೆಯೆ ನೆರೆದಾ ॥
ಡಂಬರದಿಂ ತುಱುಗಿರೆ ಬಿಂ ।
ದಿಂಬಿಂ ದರಮನೆಯೊಳವನಿಪತಿ ನೆಲಸಿರ್ದಂ ॥ ೨೪ ॥

ವ॥ ಅನ್ನೆಗಮಿತ್ತಲ್.

ಮ॥ ವನದೊಳ್ ನೆಟ್ಟನೆ ಕಟ್ಟುಪಟ್ಟ ಸೆಱೆಯುಂ ಕೋೞಿಳ್ವಿತ್ತ ತನ್ನೇವ ಮಿಂ ।
ಧನಮುಂ ಗಾಳಿಯು ಮಾಗಿ ಪೆರ್ಚಿಸೆ ನಿಜಕ್ರೋಧಾಗ್ನಿಯಂ ತಂತ್ರಮಂ ॥
ಮನದಿಂ ಮುಂ ಬರವೇೞ್ದು ಪುಷ್ಕರಪುರಕ್ಕೊಟ್ಟೈಸಿ ಥಾಳಿಟ್ಟು ಕಾ ।
ಪಿನ ಬಲ್ಲಾಳ್ಗಳ ನಿಕ್ಕಿ ಪೊಕ್ಕಿಱಿದು ಚಿತ್ರಾಂಗಂ ಹಯಗ್ರೀವನಂ ॥ ೨೫ ॥

ಚಂ॥ ತೊಲತೊಲಗೊಪ್ಪಿಸೊಪ್ಪಿಸು ಲತಾಂಗಿಯ ನೊಪ್ಪಿಸದಣ್ಮೆ ನೀಗುವಂ ।
ಲಲನೆಯ ದೂಸಱಿಂ ಪಡೆದ ಮುನ್ನಿನ ಬನ್ನಮ ನೆಂಬೆ ಯುಪ್ಪೊಡಿ ॥
ನ್ನೆಲೆಯೆಲೆ ಯಿತ್ತಲಿತ್ತಲಿದಿರಾಗಿದಿರಾಗೆನಗೆಂದು ಮುಟ್ಟೆ ಮೂ ।
ದಲಿಸುತ ವಾಂತ ನಾಂಪ ತೆಱದಿಂ ಶರಭಂ ಸಮದೇಭವೈರಿಯಂ ॥ ೨೬ ॥

ವ॥ ಅಂತಾಂತು.

ಮ॥ ಬಹುವಿದ್ಯಾಬಲದಿಂದ ಮಿರ್ವರು ಮಗುರ್ವುರ್ವೇೞ್ವನಂ ಕಾದುವ ।
ಲ್ಲಿ ಹಿತಂಗೆಯ್ಯದೆ ಪುಣ್ಯಹಾನಿಯೊಳೆ ವಿದ್ಯಾದೇವತಾಶ್ರೇಣಿ ಪೋ ॥
ಗೆ ಹಯಗ್ರೀವ ನಥಃಪ್ರಭಾವ ನೆರ್ದೆಗೆಟ್ಟೆರ್ದೋಡಿದಂ ವಿಸ್ಮಯಾ ।
ವಹಮ[ಲ್ತು]ನ್ಯಕಳತ್ರಕಾತರಮನಂಗಾರರುಂ ಹಿತಂಗೆಯ್ವರೇ ॥ ೨೭ ॥

ವ॥ ಅನಂತರಮವನ ಕುಲಧನಮಂ ಸೂಱೆಗೊಂಡು ನಿಜಪ್ರಿಯೆಯ ನೊಡಗೊಂಡು ವಿಮಾನಾಧಿರೂಢನಾಗಿ ಪುಷ್ಕರಪುರಪ್ರದೇಶದಿಂ ತಳರ್ದು ಹಿಮಕೂಟಕ್ಕೆ ಪೋಗದೆ ಸಕಲಸಾಮಗ್ರಿವೆರಸು ಯುವರಾಜಸಿಬಿರನಿವೇಶಪ್ರದೇಶಮಂ ಗಗನಗಮನದಿಂ ದೆಯ್ದೆವರ್ಪುದಂ.

ಕಂ॥ ಅಂಬರತಳದರ್ಪಣದೊಳ್ ।
ಬಿಂಬಿಪ ಗುಣತುಂಗನೃಪನ ಪಡೆಯ ನೆೞಲ್ ತಾ ॥
ನೆಂಬಿನ ಮೊರ್ಮೆಯೆ ತೋರ್ಪ ತ ।
ದಂಬರಚರಸೈನ್ಯ ಮಿತ್ತುದತಿವಿಸ್ಮಯಮಂ ॥ ೨೮ ॥

ವ॥ ಆಗಳದಂ ಕಂಡೊಡಾವನಾನು ಮೊರ್ವ ಗರ್ವಿತವಿಯಚ್ಚರೇಂದ್ರಂ ಕಾಳೆಗಕ್ಕೆ ಮೇಲೆತ್ತಿ ಬಂದನಕ್ಕುಮೆಂದು ಪಱಿಯಿಗೆಯ ಪದಿರ ಪಱೆಯ ಕಹಳೆಯ ಕುಱಪ ನಱೆಯಡೆ ಕಟಕದ ಜನಮುದಿಲ್ಲಿ ಯುದ್ಧಸನ್ನದ್ಧ ಮಾಗುತ್ತಿರೆ.

ಚಂ॥ ಪೆಸರ ಗಜಂಗಳಂ ಬಿಸುಗೆವೇೞಿಸವೇೞನೆ ಯುದ್ಧಮುಖ್ಯರಂ ।
ಬೆಸಸನೆ ಸಿಂಹವಿಷ್ಟರದಿ ನೇೞನೆ ಚಾರುಕಳಾಕಳಾಪಮಂ ॥
ಬಿಸುಡನೆ ಹಸ್ತಮಸ್ತ್ರನಿಬಿಡಗ್ರಹಣಕ್ಕನುವಲ್ತು ಮುದ್ರಿಕಾ ।
ಪ್ರಸರಮ ನೊಯ್ಯನುಚ್ಚಿರ್ದ ಕಳೆದಂ ಗುಣತುಂಗ ನದೇನುದಾತ್ತನೋ ॥ ೨೯ ॥

ವ॥ ಆ ಸಮಯದೊಳ್ ತನ್ನ ಬರವ ನರಸಂಗೆ ಮುಂದಱಿಪಲಟ್ಟಿ ಗಗನತಳದಿ ನವನೀತಳಕ್ಕವತರಿಸಿ ಸಮುಚಿತಪರಿಗ್ರಹಂಬೆರಸು ದೌವಾರಿಕನಿವೇದಿತನಾಗಿ.

ಕಂ॥ ಚಿತ್ರಾಂಗಂ ಮಣಿಭೂಷಣ ।
ಚಿತ್ರಾಂಗಂ ಪ್ರಬಳಶಬಳರುಗ್ಮಂಜರಿಗಳ್ ॥
ಚಿತ್ರಿಸೆ ಸಭೆಯಂ ಪೊಕ್ಕು ಧ ।
ರಿತ್ರೀನಾಥಂಗೆ ವಿನತಮಸ್ತಕನಾದಂ ॥ ೨೦ ॥

ಮ॥ ಇದಿರೆೞ್ದಿಟ್ಟಿಕ್ಕಿಱುಕೊಳಪ್ಪಿಕೊಂಡುಚಿತಬಂಧುಪ್ರೀತಿಯಿಂ ದೇಱಲಿ ।
ಕ್ಕಿದ ಸಿಂಹಾಸನದೇಶದೊಳ್ ವಿನಯದಿಂ ಕುಳ್ಳಿರ್ದು ಸಂಭಾಷಿತಂ ॥
ಕದನಕ್ರೀಡೆಯೊಳಾತ್ಮಕಾಂತೆಯ ನಗುರ್ವಿಂ ತಂದ ವೃತ್ತಾಂತಮಂ ।
ಮೊದಲಿಂದೆಯ್ದೆ ನೃಪಂಗೆ ಸೂಚಿಸಿ ಮನಃಸಂತೋಷಮಂ ಮಾಡಿದಂ ॥ ೨೧ ॥

ವ॥ ಮಾಡಿ ತನ್ನ ನಚ್ಚಿನ ಕುಲಧನಂಗಳಪ್ಪುಪಾಯನಂಗಳಂ ತರಿಸಿ ನೃಪನ ಮುಂದೊಟ್ಟೈಸಿ ಮುಕುಳಿತಕರಸರೋಜನಾಗಿ.

ಕಂ॥ ಜಿತಮದನ ಸಕಳಲೋಕ ।
ಸ್ತುತ ನಿರ್ಮಲಬೋಧ ನಿರಘ ನೀನೆನಗರ್ಹ ॥
ತ್ಪತಿಯಂತೆ ಮೋಕ್ಷಮಂ ಮಾ ।
ಡಿತ ನಕ್ಷಯಪದದೊಳಿರ್ದು ಮಾಂ ಮಱಿದಪನೇ ॥ ೨೨ ॥

ವ॥ ಅದಱಿಂದಂ.

ಉ॥ ಪ್ರತ್ಯುಪಕಾರಮಂ ನಿನಗೆ ಮಾಡುವ ಸೈಪೆನಗಿಲ್ಲ ಭಕ್ತಿಗೌ ।
ಚಿತ್ಯಮಿದೊಪ್ಪುಗೊಳ್ವುದು ಮದನ್ವಯಸಂಚಿತಸಾರವಸ್ತು ವೀ ॥
ಸ್ತುತ್ಯಕೃಪಾಣ ಮೀ[1]ಲಸ[ದುರ]ಚ್ಛದ ಮೀನುತಚಾಪ ಮೀಜಯ ।
ಪ್ರತ್ಯಯಬಾಣ ಮೀತರಳಹಾರಕ ಮೀಕಳವೀಣೆ ಭೂಪತೀ ॥ ೨೩ ॥

ಉ॥ ಎಂದು ನೃಪಂಗೆ ಪೇೞ್ದು ಖಚರೋತ್ತಮನಿತ್ತ ನವಂಧ್ಯಕೋಪ ಮೆಂ ।
ಬೊಂದುಕೃಪಾಣಮಂ ಸಮರಸಾಧಕ ಮೆಂಬ ತನುತ್ರಮಂ ಜಯಾ ॥
ನಂದಕ ಮೆಂಬ ಕಾರ್ಮುಕಮ ನಾಹವದೋಹಳ ಮೆಂಬ ಬಾಣಮಂ ।
ನಂದಿನಿ ಯೆಂಬ ಹಾರಲತೆಯಂ ಕಳಭಾಷಿಣಿ ಯೆಂಬ ವೀಣೆಯಂ ॥ ೨೪ ॥

[1] ಲಸತನುಚ್ಛದ.

ವ|| ಇತ್ತು ಮತ್ತಂ ಪರವಿದ್ಯಾಚ್ಛೇದಿನಿಯುಂ, ಮೋಹಿನಿಯುಂ, ಬಹುರೂಪಿಣಿಯ ಮೆಂಬ ಮೂಱುಂವಿದ್ಯೆಗಳುಮಂ ತನ್ನುಮ ನುಚಿತಪ್ರಯೋಜನಕ್ಕೆ ನೆನೆದು ಬರಿಸುವಂತೊಡಂಬಡಿಸಿ ತನಗೆ ಮಾಡಿದಭ್ಯಾಗತ ಪ್ರತಿಪತ್ತಿಯೊಳ ಮನೂನದಾನಸನ್ಮಾನದಿಂ ಹೃಷ್ಟನಾಗಿ ಬೀೞ್ಕೊಂಡು ನಿಜ ಪುರಕ್ಕೆ ಚಿತ್ರಾಂಗದಂ ಪೋಪುದುಂ, ಇತ್ತ ಚಿತ್ರಭಾನುಮಿತ್ರ ನಾತ ನಿತ್ತ ತರವಾರಿ ಸೇವ್ಯತರವಾರಿ ಯಂತೆಯುಂ, ಕವಚಂ ಸತ್ಕವಿಕದಂಬಕವಚನದಂತೆಯುಂ, ಮಾಚಾಪಲತೆ ಕೂರ್ಪ ಕೋಮಳೆಯ ಚಾಪಲತೆಯಂತೆಯುಂ, ಮಾಬಾಣಮುಖ್ಖಲರ್ದಲರ ಬಾಣದಂತೆಯುಂ, ಮಾವೀಣೆ ಸುರತಪ್ರವೀಣೆ ಯಂತೆಯುಂ, ಮನುದಿನಂ ಮನಂಗೊಳಿಸೆ ವಿನೋದಿಸುತ್ತು ಮಿರ್ಪನ್ನೆಗಂ.

ಚಂ|| ಶರದದೊಳಾದ ಖೇದಮ ನಿಳೇಶನ ಸೈನ್ಯಜನಕ್ಕೆ ಮಾಣಿಪಂ ।
ತಿರೆ ಹಿಮ ಮಂದು ಬಂದು ದೆಳನೆಯ್ದಿಲ ಮೆಯ್ದೆಗೆದುರ್ಪಗಲ್ದ ನ ॥
ೞರ ನರಸುಕ್ಕು ಕೋೞ್ಮಗದ ಕೋಟಲೆ ಕಂಜದ ಬಂಜೆವರ್ಮ ಪಾಂ ।
ಥರ ಪಗೆ ಕೋಕಿಳಾಕುಳಕೆ ನೇಸಱ ನಿಗ್ರಹ ಮೈಕಿಲಾಕರಂ || ೩೪ ||

ವ|| ಆಸಮಯದೊಳ್.

ಮ||ಸ್ರ|| ಕರಿಯೂಥಂ ಭೂರಿಭೂಭೃದ್ವಿಕಟನಿಕಟಮಂ ಭಿಲ್ಲಪಲ್ಲೀಗಣಂ ಭೂ ।
ಧರಕುಂಜಾಭ್ಯರ್ಣಮಂ ಶ್ವಾಪದಸಮಿತಿ ದರೀದೇಶಮಂ ಪಕ್ಷಿವೃಂದಂ ॥
ತರುನೀಡಕ್ರೋಡಮಂ ಪನ್ನಗವಿತತಿ ರಸಾರಂಧ್ರಮಂ ಪಾಂಥವರ್ಗಂ ।
ವರಕಾಂತಾಶ್ಲೇಷಮಂ ಕೆಯ್ಕೊಳ ಲಲೆದುದುದೀಚೀಭವಂ ಶೀತವಾತಂ || ೩೬ ||

ಕಂ|| ಮಸುಮಸುಳನಾಯ್ತು ಚಂದ್ರಿಕೆ ।
ಬಿಸುಪೞಿದುದು ಬಿಸಿಲಶೇಷಭುವನದ ಘರ್ಮ ॥
ಪ್ರಸರ ಮುಡುಗಿದುದು ಹಿಮಸಮ ।
ಯಸಮಿೀರಂ ಪಾಱಿ ಬೀಸಿ ತೂಱಿದತೆಱದಿಂ || ೩೭ ||

ಚಂ|| ಇದು ತಳರ್ದೆತ್ತಿ ಬರ್ಪ ಹಿಮಕಾಲನೃಪಾಲನ ಸೈನ್ಯಚಕ್ರಘಾ ।
ತದ ಭರದಿಂ ಹಿಮಾದ್ರಿಪಥದೊಳ್ ನೆಗೆದುರ್ವಿದ ಧೂಳಿಜಾಳ ಮ ॥
ೞ್ಗಿದು ತಗುಳ್ದೈಕಿಲಾಕ್ರಮಿಸೆ ಲೋಕಮ ನೆಯ್ದೆ ಸರೋಜಸಂಭವಂ ।
ಪೊದಿಸಿದ ಪಾಂಡುಕಂಬಳ ಮಿದೆಂಬವೊಲಾದುದು ಮಂಜಿನುರ್ವರಂ || ೩೮ ||

ಚಂ|| ಬಳಸಿದ ಮಂಜು ಚಂದ್ರಿಕೆ ರಥಾಶ್ವದ ಮೆಯ್ಯಸುರೇಣಲಕ್ಷ್ಮ ಮು ।
ರ್ಕಳವಳಿದರ್ಕಬಿಂಬ ಮಮೃತಾಂಶು ಮೆನಲ್ಕಿರುಳೆಂದ ಮಾಗೆ ಪ ॥
ಜ್ಜಳಿಪ ನೆಗೞ್ತೆ ಗೆಟ್ಟು ಪಗಲಬ್ಜಿನಿ ಕಾಮಶಿಳೀಮುಖಕ್ಕೆ ಕೋ ।
ಮಳೆ ಸುಗಿದಿರ್ಪಳೋಪನ ತೆಱಂ ಪೆಱತಾದೊಡೆ ಮುಗ್ಧೆ ನಿಲ್ವಳೇ || ೩೯ ||

ಮ॥ ಪಗೆ ನೆಯ್ದಿಲ್ ನಗುವಂತು ದೀನತೆ ದಿನಕ್ಕಪ್ಪಂತು ಕಂಪರ್ಗಂಬುಜಂ ।
ಸುಗಿವಂತಾಯ್ತು ಸಖಂಗೆ ಕಾಲವಶದಿಂ ತೇಜಃಕ್ಷಯಂ ಭಾನುಗಂ ॥
ದಗಿದಾರ್ತಂಬಡುವಂತೆ ಕೋಡಿ ಹಿಮದಿಂ ಚಕ್ರಾಂಕ ಮಳ್ಕಿರ್ದುವೀ ।
ಜಗದೊಳ್ ಮಿತ್ರವಿಪತ್ತಿ ಗಾರ ಬಗೆಯುಂ ದುಃಖಕ್ಕೆ ಪಕ್ಕಾಗದೇ ॥ ೪೦ ॥

ಕಂ॥ ಪೊಸತಲರ್ದ ಸಿಂಧುವಾರದ ।
ಕುಸುಮಸ್ತಬಕಂಗಳೆಂದು ನೀಲದ ಪರಲಿಂ ॥
ಮಿಸುಗುವ ವನದೇವತೆಯರ ।
ಪೊಸಮುತ್ತಿನ ದಂಡೆ ಯೆನಿಸಿ ರಂಜಿಸಿ ತೋರ್ಕುಂ ॥ ೪೧ ॥

ಕಳಿಕೆ ನನೆ ಮೊಗ್ಗೆ ಬಿರಿಮುಗು ।
ಳಲರೆಂಬಯ್ದುಂ ಮನೋಜನಯ್ದುಂ ಸರಲ್ಗಂ ॥
ತೊಳಗುವಲಗಾಗೆ ವಿರಹಿಯ ।
ನಳಱಿಸಿದುದು ಮುದಿತಮಧುಪವೃಂದಂ ಕುಂದಂ ॥ ೪೨ ॥

ವನದೇವತೆ ಹಿಮಸಮಯ ।
ಕ್ಕನುನಯದಿಂ ಸೇಸೆದಳಿದ ಕಳಮಾಕ್ಷತಮಂ ॥
ನೆನೆಯಿಸಿದುವು ನೀಳ್ಪಿನ ಬೆ ।
ಳ್ಪಿನ ಜಾದಿಯ ನನೆಗಳಳಿಕುಲೋಜ್ಜ್ವಲಿತಂಗಳ್ ॥ ೪೩ ॥

ಹಿಮಸಮಯಪತಿಯ ರೂಪಂ ।
ಕುಮುದಿನಿ ನೋಡಲ್ಕೆ ಪಲವು ಕಣ್ಬಡೆದಂತೇಂ ॥
ರಮಣೀಯಮಾಯ್ತೊ ವಿದಳಿತ ।
ಕುಮುದಂಗಳ ಮಿಸುಗುವೆಸಳ ಮಸಕಂ ಕೊಳದೊಳ್ ॥ ೪೪ ॥

ಚಂ॥ ತರಳಕಟಾಕ್ಷಚಂದ್ರಿಕೆ ಮುಖಾಂಬುರುಹಂ ನಯನೋತ್ಪಳಂ ಪಯೋ ।
ಧರ ಮಮೃತಾಧರಂ ಚರಣಪಲ್ಲವ ಮೆಂಬತಿಶೀತಳಸ್ಥಳಾಂ ॥
ತರದನುಬಂಧದಿಂ ಕುಸುಮಕೋಮಳೆಯರ್ಕಳೊಳೊಂದಿ ತಣ್ಣಗಿ ।
[1]ರ್ದರ ನಿರಿ ಬಿಟ್ಟು ಚೋದ್ಯ ಮೆನೆ ಪೀಡಿಸಿತೈಕಿಲನಂಗ[2]ತಾಪರಂ ॥ ೪೫ ॥

ಕಂ॥ ಹಿಮಮೆಂಬ ಸುರತಸುಖಸಂ ।
ಭ್ರಮದೊಳ್ ಜನಮಪ್ಪುಕೆಯ್ದುದುದ್ಗತರೋಮೋ ॥
ದ್ಗಮಮ ನುಪಜಾತಸೀತ್ಕಾ ।
ರಮ ನುತ್ಕಂಪನಮ [3]ನುದ್ಯದಧರವ್ರಣಮಂ ॥ ೪೬ ॥

1 ರ್ದರೆಬಿರ, 2 ತಪ್ತರಂ. 3 ನುದ್ಯದರತಭ್ರಮಮಂ.

ಉ॥ ಓತೊಡೆನಿರ್ಪ ನಲ್ಲರ ಮುಖಾಂಬುರುಹಂ ಪೊಱಗಾಗಿ ಮಿಕ್ಕ ಕಂ ।
ಜಾತ ಮಿದಾವ ಲೆಕ್ಕ ಮಸುರಾರಿಯ ಪೊಕ್ಕುಱಿ ಪದ್ಮಮುಂ ಖರ ॥
ದ್ಯೋತಿಯ ಕೆಯ್ಯ ಕಂಜಮು ನಿದೆಯ್ದೆ ಸುರುಳ್ದುಗು ಮೆಂಬಿನಂ ಜಗ ।
ತ್ಕೌತುಕ ಮಾಯ್ತುನುಷ್ಣಮುಹಿಮುಂ ಜನಿತೋತ್ಪಲಬಂಹಿಮುಂ ಹಿಮುಂ ॥ ೪೭ ॥

ವ॥ ಎನಿಸಿ.

ಚಂ॥ "ಇರೆಯಿರೆ ಪಾಪೆ ಕಾಲಗತಿಯಿಂ ನೆಲಮುಕ್ಕೆ" ನಿಪಂದದಿಂ ಹಿಮುಂ ।
ಬರೆಬರೆ ಬೆರ್ಚಿನಿಂ ಶಿಶಿರಮಾಗಿ ನಿಮಿರ್ಚಿದುದಾಸೆಯಂಕದಂ ॥
ತಿರೆ ನರಸುರ್ಕ್ಕ ನುತ್ಕಳಿಕೆಯಂತಿರೆ ಮೆಯ್ಗೆ ವಿಪಾಂಡುವೃತ್ತಿಯಂ ।
ಪರಮಸುಖಾಪ್ತಿಯಂತಿರೆ ಜನಕ್ಕೆನಸುಂ ಪುಳಕೋದ್ಗಮಂಗಳಂ ॥ ೪೮ ॥

ಮ॥ ರಥಮಂ ವಾರ್ಧಿಯ ಪಕಂಠದೊಳ್ ತರುತುಮೈಕಿಲ್ಗೋಡೆ ನೇಡಿಂದೆ ಸಾ ।
ರಥಿ ಕಾಲ್ಗೆಟ್ಟರೆ ಕಂಡು ಸುರ್ಕಿಗಿಡೆ ಕಿಚ್ಚಂ ಕಾಸಿ ತಿರ್ದಲ್ [1]ತಮೋ ॥
ರಥಮಂ ಸಾರ್ದಪ ನಾತ್ಮಪಾದಮುಮ ನಾದಂ ನೀಡೆಲಂಜುತ್ತಿನಂ[2] ।
ಪೃಥುನೀಹಾರ[3]ನಿರುದ್ಧಭಾನು ಪೊಗೆಮಂ ಸಾರ್ದಗ್ನಿದಿಗ್ಭಾಗಮಂ ॥ ೪೯ ॥

ಚಂ॥ ಕಡಲೊಳಗಿರ್ಪ ವಿಷ್ಣು ವನಿಶಂ ಬಡಬಾಗ್ನಿಯ ಪೆರ್ಚು ಮಿಲ್ಲದಿ ।
ರ್ದೊಡೆ ಸುರಸಿಂಧುವಂ ತಳೆದ ಶಂಭು ನಿಜಾಕ್ಷಿಯ ಬೆಂಕೆ ನೋಂಕದಿ ॥
ರ್ದೊಡೆ ಪವನಾಧ್ವದೊಳ್ ಸುಱಿವ ಭಾನು ಕೃಶಾನುವಿನಾಶೆಯಂ ಪಗಲ್ ।
ನಡೆಯದೊಡೆಂತು ನಿತ್ತಱಿಪರೆಂಬನಿತಾದುದು ಮಾಘಡಂಬರಂ ॥ ೫೦ ॥

ಕಂ॥ ಬಿತ್ತರಿಪ ಶಿಶಿರದೊಳ್ ಜನ ।
ಚಿತ್ತಮ ನಱಿದೊಡೆ ಪೊಕ್ಕು ನೆಲಸಿರ್ದುದಱಿಂ ॥
ಚಿತ್ತಶಯನಾಮಮುಂ ಪುರು ।
ಷೋತ್ತಮಸುತ ನಾಳ್ದ ನೆನಿಸಿತದ ನೇವೊಗಱ್ವಿಂ ॥ ೫೧ ॥

ಪಸರಿಸೆ ಜಾದಿಯ ಜೊಂಪಂ ।
ಮಿಸುಪಲ್ ಪಱಿಗುಟ್ಟೆ ಕೊರಳ ಸರಮುಂ ಕುಕಿಲೆಂ ॥
ದೆಸಗೆ ಕೊಳರ್ವಕ್ಕಿ ಶಿಶಿರಂ ।
ಪಸದನಮಾಡಿದುದು ಕುಂದದುತ್ಸವ ಮದಱಿಂದೊಳ್[4] ॥ ೫೨ ॥

ನೆಗಳಿಗೆ ಪೆಂಡಿರ ಮೊಲೆ ಕಿ ।
ಚ್ಚಗರುವ ಪೊಗೆ ಕುಂಕುಮಾಂಕ ಮೋವರಿ ನೆಲವಾ ॥
ಳಿಗೆ ದಡ್ಡಿ ಯೆಂಬಿವಮರ್ದರ ।
ನಗಲ್ದುದು ಪೊಲೆಯಾಳತೆಱದೆ ಮುಟ್ಟದೆ ಶಿಶಿರಂ ॥ ೫೩ ॥

---

[1] ತಮೋನ್ಮಥನಂ. [2] ತ್ತಿನಲ್. [3] ನಿರುದ್ಧಶಾಣನೊ [4] ಮಾಗಲ್.

ಚಂ॥ ಕರವೆಸೆದಿರ್ದರಂದು ಸಮಯೋಚಿತದಣ್ಪಿನ ಕುಂಕುಮಾಂಕ ಮೊ ।
ಪ್ಪಿರೆ ನವಸಿಂಧುವಾರದಲದೊರ್ಂಗಲ ಕೋಮಲಕರ್ಣಪೂರ ಮೊ ॥
ಪ್ಪಿರೆ ನವಮಾಳಿಕಾಕುಸುಮಶೇಖರ ಮೊಪ್ಪಿರೆ ಲೋಧ್ರಪುಷ್ಪವಿ ।
ಸ್ಫುರಿತಪರಾಗಚಂದ್ರಕಬಳಚ್ಛವಿ ಯೊಪ್ಪಿರೆ ಪೌರನಾರಿಯರ್ ॥ ೫೪ ॥

ಮ॥ ಪರಿತಾಪಚ್ಯುತಿ ವಾಸರಕ್ಕೆ ಸುಮನಃಶ್ರೀಸಂಪದಂ ಕುಂದವ ।
ಲ್ಲರಿ ಗತ್ಯೂರ್ಜಿತಬೋಧ ಮುತ್ಪಳಿನಿ ಗುದ್ಯದ್ವೀತರಾಗತ್ವ ಮಂ ॥
ಬುರುಹಶ್ರೇಣಿ ಗುದಾತ್ತಮೋಕ್ಷಗತಿ ಪೌಷ್ಯಕ್ಕಾದುದಾದಂ ದಿಗಂ ।
ಬರಸಾಂಗತ್ಯತಪಃಪ್ರಭಾವ ಮೆನಸುಂ ಮೆಯ್ವೆತ್ತೊತ್ತಡೇನಾಗದೋ ॥ ೫೫ ॥

ವ॥ ಅಂತೆನಿಸಿದ ಶಿಶಿರಸಮಯಕ್ಕಲಂಕಾರವಾದ ಫಾಲ್ಗುಣದ ಶುಕ್ಲಾಷ್ಟಮಿಯಂದು ನಂದೀಶ್ವರಪೂಜೆಗೆಂದು ಸಿದ್ಧಶೇಖರಜಿನಾಲಯಕ್ಕೆ ಮನುಜೇಂದ್ರಮಂದರಂ ಪುರಂದರಗಜೇಂದ್ರರುಂದ್ರಲೀಲೆಯಂ ತಳೆದ ನಿಜಗಜೇಂದ್ರಾರೂಢಂ ಸಮಸ್ತಮಂಡಳಿಕದಂಡನಾಥಸಾಮಂತಮಂತ್ರಿಪುರೋಹಿತಾದ್ಯನೇಕಪರಿವಾರಜನಪರೀತನಾಗಿ ಪೋಗಿ.

ಚಂ॥ ನಿಜಗಜರಾಜದಿಂದಿೞಿದು ಭಕ್ತಿಭರಾನತಮಸ್ತಕನಾಗಿ ದಿ ।
ಗ್ವಿಜಯಜಯಾಗ್ರಗಣ್ಯ ನಧಿಕೋತ್ಸವದಿಂ ಬಲಗೊಂಡು ಮೂಱುಸೂೞ್ ॥
ತ್ರಿಜಗದಧೀಶಚೈತ್ಯಗೃಹಮಂ ತ್ರಿಜಗಜ್ಜನತಾರ್ಚಿತಾಂಘ್ರಿಪಂ ।
ಕಜನ ಪದಾಂಬುಜಕ್ಕೆಱಗಿ ಬಂದಿಸಿದಂ ಗುಣರತ್ನಭೂಷಣಂ ॥ ೫೬ ॥

ಗದ್ಯ

ಇದು ಸಮಸ್ತ ಭುವನಜನಸಂಸ್ತುತಜಿನಾಗಮಕುಮುದ್ವತೀಚಾರುಚಂದ್ರಾಯಮಾಣಮಾನಿತ
ಶ್ರೀಮದುಭಯಕವಿ ಕಮಳಗರ್ಭ ಮುನಿಚಂದ್ರ ಪಂಡಿತ ದೇವಸುವ್ಯಕ್ತಸೂಕ್ತಿ ಚಂದ್ರಿಕಾ
ಪಾನಪರಿಪುಷ್ಟಮಾನಸಮರಾಳ

ಗು ಣ ವ ರ್ಮ ನಿ ರ್ಮಿ ತ ಮ ಪ್ಪ

ಪುಷ್ಪದಂತ ಪುರಾಣದೊಳ್

ಶಿಶಿರಸಮಯವರ್ಣನಂ

ಷಷ್ಠಾಶ್ವಾಸಂ

# ಪುಷ್ಪದಂತ ಪುರಾಣಂ

## ಸಪ್ತಮಾಶ್ವಾಸಂ

ಕಂ॥ ಶ್ರೀಜಿನಪತಿಗೆ ನತಾಮರ ।
ಭೂಜನಪತಿಗಾತ್ಮನಿಟಿಲದೊಳ್ ಕರಕಮಳಂ ॥
ರಾಜಿಸಲೆಱಗಿದ ನರ್ಥಿಸ ।
ರೋಜಾರ್ಕಂ ಪ್ರಭುಗುಣಾಬ್ಧಿನೀಕಳಹಂಸಂ ।೧।

ವ॥ ಆಗಳ್.

ಮ॥ಸ್ರ॥ ಘನಘಂಟಾಜಾಳನಾದಪ್ರಸರ ಮೆಸೆಯೆ ನಾನಾಲಸದ್ವಾದ್ಯಶುಂಭ ।
ದ್ಧ್ವನಿ ಯೆತ್ತಂ ಪೊಣ್ಮೆ ಶಂಖಪ್ರಕರವಿರುತಿ ತಳ್ತುಣ್ಮೆ ಗಂಭೀರಭೇರೀ ॥
ನಿನದಂ ಮೆಯ್ವೆರ್ಚೆ ಶಕ್ರಾರ್ಚಿತಜಿನಪತಿಗತ್ಯುತ್ಸವೋದಾತ್ತಚಿತ್ತಂ ।
ವಿನಯಪ್ರಾಕಾರಭೂಮೀಶ್ವರ ನಭಿಷವಮಂ ಮಾಡಲುದ್ಯುಕ್ತ ನಾದಂ ।೨।

ವ॥ ಆಗಿ.

ಮ॥ ಮೊದಲೊಳ್ ತೀರ್ಥಕರಂಗೆ ತೀರ್ಥಜಲದಿಂ ಸ್ನಾನಕ್ರಿಯಾರಂಭಸಂ ।
ಪದಮಂ ಪಾರ್ಥಿವತುಂಗನರ್ಥಿಜನತಾದೇಯಾರ್ಥ ನಾದಂ ಮನೋ ॥
ಮುದದಿಂ ದಷ್ಟವಿಧಾರ್ಚನಾವಿಧಿಗಳಿಂ ದಭ್ಯರ್ಚನಂಮಾಡಿ ನೋ ।
ಡಿದ ನತ್ಯೂರ್ಜಿತ ನತ್ಯನೂನಚರಿತಂ ಶ್ರೀರಾಜವಿದ್ಯಾಧರಂ ॥೩॥

ಮ॥ಸ್ರ॥ ಕಳಧೌತೋದ್ದಾಮಕುಂಭಪ್ರತತಿ ಮಣಿಗಣಾಕೀರ್ಣಸೌವರ್ಣಕುಂಭಾ ।
ವಳಿ ಚಂಚಚ್ಚಾರುಚಂದ್ರೋಪಳವಿಪುಳಘಟತ್ಕುಂಭಸಂದೋಹದೊಳ್ ಭೂ ॥
ತಳನಾಥಂ ರಾಗದಿಂದಂ ಘೃತಮುಮಮೃತದಧಿಸ್ರೋತಮುಮಂ ತೀವಿನಿತ್ಯೋ ॥
ಜ್ವಳತೇಜಂ ದೇವದೇವಂಗಭಿಷವವಿಧಿಯಂ ಮಾಡಿ ಸಂತುಷ್ಟನಾದಂ ।೪।

ಮ॥ ಘನಸಾರದ್ರವಮಿಶ್ರಿತಾರ್ದ್ರಘು[ಸೃಣ]ಪ್ರೋನ್ಮಿಶ್ರಸಂಸೇವ್ಯಚಂ ।
ದನದಿಂ ತ್ರೈಭುವನೋನ್ನತೈಕತಿಲಕಂಗಷ್ಟಾರ್ಧಘಾತಿಕ್ಷಯಂ ॥
ಗನುಲೇಪಕ್ರಿಯೆಯಂ ವಿನಿರ್ಮಿಸಿ ಬಳಿಕ್ಕಚ್ಛಾಂಬುವಿಂ ಮಾಡಿದಂ ।
ಜನನಾಥಂ ನೃಪನೀತಿಶಾಸ್ತ್ರನಿಪುಣಂ ಗಂಧೋದಕಸ್ನಾನಮಂ ।೫।

ಕಂ॥ ಅಷ್ಟವಿಧಕರ್ಮರಿಪುವಿಂ ।
ಗಷ್ಟೋತ್ತರಶತಸಹಸ್ರಲಕ್ಷಣಗಾತ್ರಂ ॥
ಗಷ್ಟವಿಧಾರ್ಚನೆ ನೆಗೞ್ದಿರ ।
ಲಷ್ಟಾಹ್ನಿಕಪೂಜೆಯಂ ನೃಪಂ ನಿರ್ಮಿಸಿದಂ ।೬।

ಕಂ|| ನಿರ್ಮಿಸಿದನಂತರಂ ಘನ |
ಘರ್ಮಚ್ಛೇದಕ ಮಿದೆಂದು ಗಂಧೋದಕಮಂ ||
ಧರ್ಮಪ್ರತಿಪಾದನಪಟು |
ನಿರ್ಮಲಗುಣರತ್ನರಾಶಿ ಕೊಂಡುತ್ಸವದಿಂ || ೭ ||

ಮ|ಸ್ರ|| ಪರಮಶ್ರೀತೀರ್ಥನಾಥಸ್ನಪನಸಲಿಲದಿಂ ದೆನ್ನ ಗಾತ್ರಂ ಪವಿತ್ರೀ |
ಕರ ಮಕ್ಕೆಂದಕ್ಕರಿಂದಂ ಜನಪತಿ ನಯನದ್ವಂದ್ವದೊಳ್ ವಕ್ತ್ರದೊಳ್ ಬಂ ||
ಧುರಚೂಡಾಪಟ್ಟದೊಳ್ ವಕ್ಷದೊಳವಯವದೊಳ್ ಕೂಡೆ ಗಂಧೋದಕಪ್ರೋ |
ತ್ಕರಮಂ ಹರ್ಷಾಶ್ರು ಪೊಣ್ಮುತ್ತಿರೆ ತಳೆದುಕೊಳುತ್ತಿರ್ದ ನಾನಂದದಿಂದಂ || ೮ ||

ವ|| ಅಂತನಂತಸಂತೋಷದಿಂ ಮುಕ್ತಿಕಾಂತಾಕಾಂತನ ಕಾಂತಚೈತ್ಯಾಲಯಮಂ ತ್ರಿಃಪ್ರದಕ್ಷಿಣಂಗೆಯ್ದು ತ್ರಿಲೋಕೈಕನಾಥಾಭಿಮುಖ ನಾಗಿ ಕರಕಮಳಮಂ ಮುಗಿದು.

ಉ|| ಶ್ರೀವಧುಗಿತ್ತು ದಾತ್ತಪದಮಂ ವರಮುಕ್ತಿಗೆ ಕೊಟ್ಟು ವಸ್ತ್ರಭೂ |
ಷಾವಳಿಯಂ ಸರಸ್ವತಿಗೆ ಸಾರ್ಚಿ ಪದಾರ್ಥಮ ನೊಲ್ದು ಕೂಡಿಯುಂ ||
ದೇವ ನಿರಸ್ತರಾಗ ನೆನಿಪ್ಪೈ ಜಿನ ನಿನ್ನ ವಿರುದ್ಧಮಾರ್ಗ ಯಂ |
ದಾವ ಸುಬೋಧರುಂ ಪೊಗೞ್ವರೇಕೆಯೊ ಚಿತ್ರ ಮಿದಿಂದ್ರವಂದಿತಾ || ೯ ||

ಚಂ|| ಜನಿಯಿಸೆ ನೀಂ ಪೊದೞ್ದಸಗೆಗಾಗಳೆ ಮಜ್ಜನಪೀಠ ಮಾಗೆ ಮ |
ಜ್ಜನವಳ ನಾಗೆ ಮಜ್ಜನಪಯೋರಸದಾಯಕ ವಾಗೆ ಪೆಂಪುವೆ ||
ತ್ತನಿಮಿಷಶೈಲದೊಳ್ಪನಿಮಿಷಾಧಿಪನೊಳ್ಪನಿಮೇಷವತ್ಪಯೋ |
ವನನಿಧಿಯೊಳ್ಪು ಪೇೞ್ವೆ ನಿಜೋನ್ನತಿಯಂ ಧರೆಗಿಂದ್ರವಂದಿತಾ || ೧೦ ||

ಚಂ|| ಒದವಿದ ಘೋರಸಂಸೃತಿಯ ಬಾಧೆಗೆ ತಲ್ಲಣ ದಿಂದ ಮನ್ಯತ |
ತ್ವದ ಮಱೆವೊಕ್ಕ ಮೂಢ ಜನದಾಚರಣಂ "ಪುಲಿಗಂಜಿ ಪುತ್ತ ನೇ ||
ಱಿದೊಡೆರವಾವುಕೊಂಡು"ದೆನೆ ಬೇವಸಮಂ ಬಿಡದೀವುದೊಲ್ಲೆ ನಾ |
ನದ ನೆಱಸಲ್ಕೆ ರಕ್ಷಿಸು ಭವಚ್ಚರಣಂ ಶರಣಿಂದ್ರವಂದಿತಾ || ೧೧ ||

ಉ|| ಆರು ಮಸತ್ಯದೊಳ್ ಕಳವಿನೊಳ್ ಕೊಲೆಯೊಳ್ ಧನ[ಲೋಭ] ದೊಳ್ ಪರ |
ಸ್ತ್ರೀರತಿಯೊಳ್ ತೊಡಂಕದಿರವೆಂಬುದು ನಿನ್ನ ಮತಂ ಕುತತ್ವಸಂ ||
ಸ್ಕಾರಜನಕ್ಕೆ ದುಸ್ಸಹ ಮುದಂತುೞಿ ಭಾವಿಸೆ ಪಿತ್ತದೋಷದು |
ರ್ವಾರನ ಬಾಯ್ಗೆ ದುಗ್ಧ ವಿನಿದಪ್ಪುದೆ ಸೇವಿಪೊಡಿಂದ್ರವಂದಿತಾ || ೧೨ ||

ಉ|| ರೋಗಿಗೆ ದೇವ ನಿಮ್ಮ ಚರಣಸ್ಮರಣಂ ಪರಮೌಷಧಂ ವಿಷಾ |
ವೇಗಿಗೆ ದೇವ ನಿಮ್ಮ ಪದದಕ್ಕರಮಾಲೆ ವಿಷಾಪಹಾರ ಮು ||
ದ್ವೇಗಿಗೆ ದೇವ ನಿನ್ನಖಿಳರೂಪಗುಣಸ್ತುತಿ ಹರ್ಷಹೇತು ವೆಂ |
ದಾಗಳು ಮೆನ್ನ ನಂಬುಗೆ ಮನಂಬುಗೆ ಭಾವಿಪೆ ನಿಂದ್ರವಂದಿತಾ || ೧೩ ||

ಚಂ॥ ಮುಳಿಯದೆಯುಂ ಮನೋಭವನ ನಿಕ್ಕಿದೆ ಕೂರದೆಯುಂ ವಿನೇಯಮಂ ।
ಡಳಿಗಭಿವೃದ್ಧಿಯಂ ಕುಡುವೆ ರಾಗದೊಳೊಂದದೆಯುಂ ವಿಮುಕ್ತಿಕೋ ॥
ಮಳೆಗೆಳಸಿರ್ಪೆ ಮೋಹವಶ ಸಲ್ಲದೆಯುಂ ತ್ರಿಜಗತ್ಪತಿತ್ವದ ।
ಗ್ಗಳಿಕೆಯ ನಪ್ಪುಕೆಯ್ದು ಬಿಡೆ ನಿನ್ನೆಸಕಂ ಪೊಸತಿಂದ್ರವಂದಿತಾ ॥ ೧೪ ॥

ಚಂ॥ ಮುಳಿಪೊಸೆವನ್ಯರೋಜೆ ನಿನಗಿಲ್ಲದೆಯುಂ ಹಗೆ ಹಾಱಿ ತೂಱುಗುಂ ।
ಕೆಳೆ ದಳವೇಱುಗುಂ ಬಗೆದು ಭಾವಿಸೆ ಧಾತ್ರಿಗೆ ಚಿತ್ರ ಮತ್ತೆ ತಿಂ ॥
ಗಳ ಬೆಳಗಂತೆ ರಂಜಿಸೆ ರಜೋಧಿಕ ಮಂಬುರುಹಂ ಸುರುಳ್ಗ ಮು ।
ತ್ಪಳಮಲಗರ್ಭಂ ನಿಸರ್ಗ ಮಿದು ನಿನ್ನ ಮಹೋನ್ನತಿಗಿಂದ್ರವಂದಿತಾ ॥ ೧೫ ॥

ಚಂ॥ ಸದಮಳಬೋಧಭಾನುವಿನ ಬಂಧುರಬಂಧು ಸುಧರ್ಮಸೂತ್ರಕಾಂ ।
ಡದ ಕಣಿ ಪುಣ್ಯಲಕ್ಷ್ಮಿಯ ತವರ್ಮನೆ ಭವ್ಯಜನಾಂತರಂಗಭೃಂ ॥
ಗದ ನೆಲೆ ತತ್ತ್ವವಾಸನೆಯ ಗೊತ್ತು ದಯಾರಸದಾಗರಂ ಭವ ।
ತ್ಪದಶತಪತ್ರ ಮಾಱಿಸುಗೆ ಮದ್ಭವತಾಪಮ ನಿಂದ್ರವಂದಿತಾ ॥ ೧೬ ॥

ವ॥ ಎಂದನೇಕಸ್ತುತಿಗಳಿಂ ತ್ರಿಭುವನಸ್ತುತ್ಯನಂ ಸ್ತುತಿಯಿಸಿ ಭಕ್ತಿಯಿಂದೆಱಗಿ ಪೊಡೆವಟ್ಟು ಸಿದ್ಧಶೇಷೆಯಂ ಕೊಂಡು ಬೀೞ್ಕೊಂಡನಂತರಂ.

ಕಂ॥ ಸಕಳಪ್ರಾಣಿದಯಾಪರ ।
ರಕಳಂಕರನಂತಬೋಧರೆನಿಸಿದ ದುರಿತ ॥
ಕ್ರಕಚಮುನಿವರರ್ಗೆ ಬುಧಜನ ।
ನಿಕರಸ್ತುತ ನೆಱಗಿ ಭಕ್ತಿಯಿಂ ವಂದಿಸಿದಂ ॥ ೧೭ ॥

ವ॥ ಅನಂತರಂ.

ಮ॥ಸ್ರ॥ ಪರಮಾಶೀರ್ವಾದನಾದಂ ಜನಿಯಿಸೆ ಪರಮೋತ್ಸಾಹಮಾಂಗಲ್ಯತೂರ್ಯೋ ।
ತ್ಕರನಾದಂ ಪೊಣ್ಮಿ ರಾರಾಜಿಸೆ ಸುರಗಜಮಂ ಲೀಲೆಯಿಂ ಪೋಲ್ವುದೆಂಬಂ ॥
ತಿರೆ ಪೆಂಪಂ ತಾಳ್ದಿ ಮತ್ತದ್ವಿರದಮ ನಧಿಕಪ್ರೀತಿಯಿಂ ದೇಱಿ ಧಾತ್ರೀ ।
ಶ್ವರಮಸ್ತನ್ಯಸ್ತಪಾದಂ ತಳೆರ್ದಪ ನರಸಂ ರಾಜವಿದ್ಯಾಲಲಾಮಂ ॥ ೧೮ ॥

ಮ॥ಸ॥ ಲಲಿತಶ್ವೇತಾತಪತ್ರಂ ಚಮರಸಮಿತಿ ಕೇತುವ್ರಜಂ ತೂರ್ಯಮಾಲಾ ।
ವಳಿ ಹಸ್ತಿಸ್ತೋಮ ಪುಷ್ಯತ್ಪ್ರತತಿ ತುರಗವೃಂದಂ ಪದಾತ್ಯಾಳಿ ಸನ್ಮಂ ॥
ಗಲಭೇರೀಸಂಕುಲಂ ರಾಜಿಸೆ ಚಟುಲರಿಪುವ್ರಾತಜೈತ್ರಧ್ವಜಂ ನಿ ।
ಶ್ಚಳತೇಜಂ ಬಂದು ಪೊಕ್ಕಂ ಕಟಕಮ ನವನೀನಾಥ ನಾನಂದದಿಂದಂ ॥ ೧೯ ॥

ವ|| ಅಂತು ಪೊಕ್ಕು ನಿಜರಾಜಮಂದಿರದ ಬಾಗಿಲ್ವಾಡದೊಳ್ ಬಂದು ಮದಾಂಧಬಂಧುರ ಸಿಂಧುರಸ್ಕಂಧದಿಂ ವಸುಂಧರಾಧಿಪ ನಿೞಿದು.

ಮ|| ಪ್ರಣತಕ್ಷತ್ರಿಯಪುತ್ರರಂ ಸಚಿವರಂ ಸಾಮಂತರಂ ಶೌರ್ಯಭೂ ।
ಷಣರಂ ಸಾಹಸತುಂಗರಂ ಸುಭಟರಂ ತಾಂಬೂಲದಾನಾದಿಯಿಂ ॥
ಗುಣತುಂಗಕ್ಷಿತಿಪಾಳ ನೂರ್ಜಿತಯಶಂ ಸಂತುಷ್ಟರಂ ಮಾಡಿ ಧಾ ।
ರಿಣಿ ಸಂವರ್ಣಿಸೆ ರಾಗದಿಂ ಕಳಿಪಿದಂ ಶ್ರೀರಾಜಕಂಠೀರವಂ || ೨೦ ||

ವ|| ತದನಂತರಂ ಚಿತ್ರಭಾನುದತ್ತಹಸ್ತಾವಳಂಬ ನಾಸ್ಥಾನಮಂಟಪಕ್ಕೆ ಬಿಜಯಂಗೆಯ್ದು ಸಿಂಹಾಸನಾಸೀನನಾಗಿ ಜಿನರಾಜಪೂಜಾಸಮಾಜಸಂಜಾತಹರ್ಷೋತ್ಕರಚಿತ್ತ ನಿರ್ಪುದು ಮಾಸಮ ಯದೊಳ್.

ಮ|| ಘನಬಾಹಾಬಲದಿಂದಿದಿರ್ಚಿದಸುಹೃದ್ಭೂಪಾಳರಂ ಘೂರ್ಣಿಸಿ ಘೂ ।
ರ್ಣಿಸಿ ಕೊಂದಿಕ್ಕಿ ಸಮಸ್ತರಾಜ್ಯಪದಮಂ ವಿಕ್ರಾಂತದಿಂ ತಂದು ನ ॥
ಚ್ಚಿನ ಸೇನಾಪತಿ ಕೀರ್ತಿವರ್ಮ ನಮಲಶ್ರೀಕೀರ್ತಿಗಾಣ್ಮಂ ಜಗ ।
ಜ್ಜನರಕ್ಷಾಮಣಿ ಗಾಗಳೋಲಗಿಸಿದಂ ದಂಡೇಶದಿಕ್ಕುಂಜರಂ || ೨೧ ||

ವ|| ಅಂತೋಲಗಿಸಿ ನಿಜೋಚಿತಾಸನದೊಳ್ ಕುಳ್ಳಿರ್ಪುದುಂ ವಿಜಯಸೇನನೆಂಬ ಹಿತಪುರೋ ಹಿತ ನಿಂತೆಂದಂ.

ಉ|| ದೇವ ಭವತ್ಪ್ರತಾಪನಿಶಿತಾಸ್ತ್ರದಿ ನುದ್ಧತವೀರವೈರಿ ಪೃ ।
ಥ್ವೀವರರಂ ಕಱುತ್ತಿಱಿದು ಪಂದಲೆಯಂ ಗಗನಕ್ಕಡುರ್ತು ಕೊಂ ॥
ಡೋವದೆ ಸೆಂಡನಾಡಿ ಜಯಮಂ ಗೆಡೆಗೊಂಡು ಸಮಸ್ತವಸ್ತುಸ ।
ದ್ಭಾವಮ ನೀಟಿಸ್ಕೊಂಡು ಮೆಱೆದಂ ನಿಜಶೌರ್ಯಮ ನಾಜಿರಂಗದೊಳ್ || ೨೨ ||

ವ|| ಎಂದು ಬಿನ್ನಪಂಗೆಯ್ದ ಪುರೋಹಿತನ ವಚನರಚನಾಪ್ರಪಂಚಮ ನವಧಾರಿಸಿ ಸೇನಾಧಿ ನಾಥ ಕೀರ್ತಿವರ್ಮನಂ ಸಮಸ್ತಸಾರವಸ್ತುಗಳಿಂ ತಣಿಪಿ ಬೀಡಿಂಗೆ ಕಳಿಪಿ.

ಮ|ಸ್ರ|| ಘನಗಂಭೀರಸ್ವನಂ ಮಂಗಳಪಟಹರವಂ ಗಾಯಿನೀಗೇಯಮಂದ್ರ ।
ಧ್ವನಿ ಜೈತ್ರೋತ್ಸಾಹಭೇರೀವಿರುತಿ ವಿವಿಧತೂರ್ಯೋತ್ಕರಧ್ವಾನ ಮುರ್ವೀ ॥
ಜನತಾನಂದ ಪ್ರಘೋಷಂ ನೆಗೞ್ವಿನೆಯೆ ಜಯಶ್ರೀವಧೂವಲ್ಲಭಂ ಭೂ ।
ಜನನೇತ್ರೇಂದೀವರೋನ್ಮೀಳನಕರವಿಳಸಚ್ಚಾರುಚಂದ್ರಂ ನರೇಂದ್ರಂ || ೨೩ ||

ಮ|ಸ್ರ|| ಪ್ರತಿಪಕ್ಷೋರ್ವೀಶವಂಶಕ್ಷಿತಿರುಹತತಿಯಂ ಕಿೞ್ತು ಬೇರಿಂದೆ ಭೀತ್ಯಾ ।
ನತಧಾತ್ರೀನಾಥರಂ ಮನ್ನಿಸಿ ನಿಜನಿಜರಾಜ್ಯಸ್ಥರಂ ಮಾಡಿ ನಿತ್ಯೋ ॥
ರ್ಜಿತತೇಜಂ ಧಾತ್ರಿ ಜೀ ಯೆಂಬಿನ ಮುದಿತಯಶಸ್ತಂಭಮಂ ವಂದಿವೃಂದ ।
ಸ್ತುತ ನತ್ಯಾನಂದದಿಂದಂ ನಿಱಿಸಿದ ನಧಿಕಂ ರಾಜವಿದ್ಯಾಲಲಾಮಂ || ೨೪ ||

ವ|| ಅಂತು ಶುಂಭಜ್ಜಯಸ್ತಂಭಮಂ ನುತ್ತಂಭಿತಂಮಾಡಿ ಮತ್ತಮೊಂದು ದೆವಸಂ.

ಉ|| ಸಂತತಮೋಲಗಿಪ್ಪ ಖಿಳಮಂತ್ರಿಪುರೋಹಿತದಂಡನಾಥಸಾ |
ಮಂತನಿಯೋಗಿವರ್ಗಬುಧಗಾಯಕವಾದಕರೊಪ್ಪೆ ಸುತ್ತಿ ಶು ||
ದ್ಧಾಂತವಿಳಾಸಿನೀಜನಸಮೇತ ನಿಳಾಪತಿ ರಂಜಿಸಿರ್ದ ನ |
ತ್ಯಂತವಿಚಿತ್ರಶೋಭೆವಡೆದೋಲಗಶಾಲೆಯೊಳಿಂದ್ರಲೀಲೆಯಿಂ | ೨೫ ||

ಕಂ|| ವಿಕ್ರಮಮುತ್ಸರದಿಂದುಜಿ |
ದಾಕ್ರಮಿಸಿದೊಡೆಗಿದು ಸುಗಿದು ಬಂದಡಿಮೊದಲೊಳ್ ||
ವಕ್ರತೆಗೆಟ್ಟಿರ್ದಿಭರಿಪು |
ಚಕ್ರ ಮಿದೆನಿಸಿದುದು ನೃಪನ ಕೇಸರಿಪೀಠಂ || ೨೬ ||

ಇಂಗಡೆಲೊಳ(ಗ)ಮರ್ದುವು ನೊರೆ |
ದೊಂಗಲ್ ಮಂದರಮ ನೆನೆ ಮನಂಗೊಂಡುವು ತ ||
ನ್ವಂಗಿಯ ರಿಕ್ಕುವ ಚಮರೀ |
ಜಂಗಳ್ ಮನುಜೇಂದ್ರಮಂದರಂಗೋಲಗದೊಳ್ || ೨೭ ||

ಪಾಣಿತಳಪ್ರಭೆ ಪಸರಿಸೆ |
ಶೋಣಿತಚಮರೀಜ ಮೆನಿಸಿದುವು ಸಿತಚಮರ ||
ಶ್ರೇಣಿಗಳದಂತೆ ಪೊರ್ದಿದೊ |
ಡೇಣಾಕ್ಷಿಯರಂ ಸರಾಗಮಾಗದುದುಂಟೇ || ೨೮ ||

ವ|| ಮತ್ತಂ.

ಮಸ್ರ|| ನಳಿದೋಳ್ಗಳ್ ಶಾಖೆಯಂ ಕೆಂದಳ ಪೆಳದಳಿರಂ ಭ್ರೂಲತಾಭಂಗಿ ಭಂಗಂ |
ಗಳ ನಾಲೋಳಾಕ್ಷಿಗಳ್ ನೀಳ್ದಲರ್ಗಳ ನಳಕಂ ತುಂಬಿವಿಂಡಂ ಕುಚಂಗಳ್ ||
ಫಲಮಂ ಸುಯ್ಗಂಪು ಕಂಪಂ ಮಿಗೆ ಸೊಗಯಿಸಿತಂಗೋದ್ಭವಶ್ರೀಜಗನ್ಮಂ |
ಗಳಶೃಂಗಾರಾಬ್ಧಿವೇಳಾವನಲತೆ ಯೆನೆ ಶುದ್ಧಾಂತಕಾಂತಾಕದಂಬಂ | ೨೯ ||

ಉ|| ತೋಳ ಮೊದಲ್ ಮೊದಲ್ಗಿಡಿಸೆ ನೋಮರ್ಡಿ ಸುತ್ತಿ ಕುಚೋರುಮೂಳ ಮುಂ |
ನ್ಮೀಲಿಸೆ ನಾಭಿ ನಾಣ್ಗಿಡಿಸೆ ಬಾಯ್ದುಱಿ ಬಲ್ಸೆಱಿಗೆಯ್ಯೆ ಚೆಲ್ಲಗಣ್ ||
ಚಾಳಿಸೆ ಭಂಗಿ ಭಂಗಿಸೆ ಜನಂಗಳಚಿತ್ತಮ ನಿರ್ದರೊಪ್ಪೆ ಭೂ |
ಪಾಲನ ಪಕ್ಕದೊಳ್ ಪಲರು ಮೋಲಗಕಾರ್ತಿಯ ರಿಚ್ಚೆಕಾರ್ತಿಯರ್ | ೩೦ |

ಕಂ|| ತರುಣಿಯರ ಮುಡಿಯ ಪುಡಿಗ |
ತ್ತುರಿ ಸೂಡಿದ ಮಾಲೆ ಘುಸೃಣಲೇಪಂ ನಱುಸುಯ್ |
ಪರೆದ ಹಿಮರಜ ಮವಿಂತೈ |
ವೆರಕೆಯ ಕಂಪಿಂ ಮದಾಳಿಗಿತ್ತುವು ಮದಮಂ | ೩೧ |

ಕಂ|| ರಾಣೀವಾಸದ ತುಡುಗೆಯ ।
ಮಾಣಿಕದೆಳವಿಸಿಲು ಮಸೆವ ಧವಳಕಟಾಕ್ಷ ॥
ಶ್ರೇಣಿಯ ಬೆಳ್ದಿಂಗಳು ಮ ।
ಕ್ಷೂಣ ಮಪ್ಪೊಂದೊಂದನೊತ್ತು ಲಾಱಿವೆ ಸಭೆಯೊಳ್ ॥ ೩೦ ॥

ಚಂ॥ ಅಣಕಮಿದೇನೊ ಪೀಲಿದೞೆ ರನ್ನದ ಸತ್ತಿಗೆ ತಳ್ತು ವೀಸಭಾಂ ।
ಗಣದೊಳೆನಲ್ಕೆ ಶೇಖರದ ಮಾಳೆಗೆ ಸಾರ್ವಳಿಮಾಲೆ ಮೇಲೆ ಸಂ ॥
ದಣಿಸಿದ ಲೀಲೆಯಿಂ ಮಕುಟದುನ್ಮುಖರತ್ನಮರೀಚಿಮಾಲೆಗಳ್ ।
ಪೆಣೆದಡರ್ದೇಱೆ ವಿಭ್ರಮಮಮಾಪ್ಪಿತು ಸುತ್ತಿದ ರಾಜಲೋಕದೊಳ್ ॥ ೩೩ ॥

ಮ|| ನೆಱೆ ಕರ್ಣಾಮೃತವೃಷ್ಟಿ ಯಪ್ಪ ರಸರಾಗೋಪೇತಮಂ ಗೀತಮಂ ।
ಮೆಱೆಯಲ್ಕಂಗಜವಾರ್ಧಿಘೋಷ ಮೆನಿಪುರ್ವೀಹೃದ್ಯಮಂ ವಾದ್ಯಮಂ ॥
ಮೆಱೆಯಲ್ಕಾಂಗಿಕವಾಚಿಕಾಭಿನಯಭಾವಸ್ತುತ್ಯಮಂ ನೃತ್ಯಮಂ ।
ಮೆಱೆಯಲ್ಕಿರ್ದುದು ಬಂದು ಭಾರತಿಕವೃಂದಂ ಭೂಪನಾಸ್ಥಾನದೊಳ್ ॥ ೩೪ ॥

ಉ॥ ಬಾರಿಪ ನಿಮ್ಮ ತರ್ಜನದಿ ನೀಜನದೊಂದುಲಿ ಮಾಣ್ಗೆ ಮಾಣೆ ಮಾ ।
ವಾರೆಮಗಿಲ್ಲ ವಾರಕರೆನುತ್ತುಮೆ ಮಾರ್ಜಣಿಮಂದದಿಂ ಪ್ರತೀ ॥
ಹಾರಿಯರಂ ಪೊದಱ್ದೆ ವೆಳವೆಂಡಿರ ನೂಪುರದಿಂಚರಂ ಮುಖಾಂ ।
ಭೋರುಹಭೃಂಗನಾದ ಮುಡಿನೂಲ ಕಳಧ್ವನಿ ಕಂಕಣಸ್ವನಂ ॥ ೩೫ ॥

ವ॥ ಅಂತೋಲಗಂಗೊಟ್ಟು ಸೌಂದರ್ಯಕಂದರ್ಪನಿರ್ಪುದು ಮನಂತಮಹಿಮಾವಲಂಬಿ ಯಾಗಿ.

ಮ|| ಕಮನೀಯಂ ಸಭೆ ಶೋಭಿಸಿತ್ತು ರಮಣೀಲಾವಣ್ಯಲಕ್ಷ್ಮೀಮಯಂ ।
ಸಮದಾಪಾಂಗಮಯಂ ವಿಭೂಷಣಮಯಂ ಜ್ಯೋತಿರ್ಮಯಂ ಚಾರುಗಂ ॥
ಧಮಯಂ ಕಂಕಣಕಿಂಕಿಣೀರವಮಯಂ ಕರ್ಪೂರಧೂಳೀಮಯಂ ।
ಭ್ರಮರೀಗೇಯಮಯಂ ಸ್ಮರೋತ್ಸವಮಯಂ ತೇಜೋಮಯಂ ಶ್ರೀಮಯಂ ॥ ೩೬ ॥

ವ॥ ಆಪ್ರಸ್ತಾವದೊಳ್ ವಿಚಿತ್ರವೇತ್ರಹಸ್ತನು ಮಾರ್ಯವೇಷಪ್ರಶಸ್ತನು ಮಪ್ಪ ಪ್ರತೀಹಾರ ನೊರ್ವ ನುರ್ವೀಶ್ವರಂಗೆ ಪೊಡೆವಟ್ಟು ಕುಟ್ಮಳಿತಕರಸರೋಜನಾಗಿ.

ಮ॥ ಧರಣೀವಲ್ಲಭ ಬಿನ್ನಪಂ ಕುರುಕುಳಪ್ರೋದ್ಭಾಸಿ ಭದ್ರಾವತೀ ।
ಪುರನಾಥಂ ಭವದೀಯತಾತಸಹಜಂ ಶ್ರೀಚಂದ್ರಿಕಾರಾಗಸಾ ॥
ಗರಚಂದ್ರಂ ನೃಪನೀತಿಶಾಲಿ ಜಯವರ್ಮಂ ಸಾರಸದ್ಧರ್ಮ ನಾ ।
ದರದಿಂ ದಟ್ಟಿದ ರಾಯಭಾರಿ ದಮನಂ ಬಂದಿರ್ದಪಂ ಬಾಗಿಲೊಳ್ ॥ ೩೭ ॥

ವ॥ ಎಂದು ಬಿನ್ನಪಂಗೆಯ್ದು ಮಹೀಶಲಬ್ಧಾದೇಶನಾಗಿ ಪೋಗಿ ತಂದು ಕಾಣಿಸುವುದುಂ ದಮನ ನತಿಸುಮನಸ ನಾಸ್ಥಾನಕುಟ್ಟಿಮಪ್ರಘುಟ್ಟಿತೋತ್ತಮಾಂಗನಾಗಿ ಪೊಡೆವಟ್ಟು ನಿಜೋಚಿತಾಸನದೊಳಿರೆ ನರೇಂದ್ರ ನಾನರೇಂದ್ರ ನಟ್ಟಿದ ದೂತನ ನತಿಪ್ರಸಾದದೃಷ್ಟಿಯಿಂ ನೋಡಿ.

ಚಂ॥ ಕುಶಳಮೆ ಮಾತುಳಂಗೆ ಜಯವರ್ಮನೃಪಂಗೆ ಪರಿಗ್ರಹಪ್ರಜಾ ।
ಕುಶಲವಿಧಾಯಿಗೆಂದು ಬೆಸಗೊಂಡೊಡವಂ ಪ್ರಭುಗೆಂದ ನಿನ್ನೆಗಂ ॥
ಕುಶಲಮೆ ದೇವ ನಿಮ್ಮ ಬಲವರ್ಗದಿ ನೀಗಳದೊಂದು ಕಾರ್ಯಕ ।
ರ್ಕಶಭರ ಮಾಗೆ ಬೇಗ ಮಱಪಲ್ ನಿಜಸನ್ನಿಧಿಗೆನ್ನ ನಟ್ಟಿದಂ ॥ ೩೮ ॥

ವ॥ ಅದಾವುದೆನೆ, ದೇವ ಭವದೀಯಜನಕನನುಜಾತೆಯಪ್ಪ ಸೌಂದರ್ಯಶೀಲಗುಣರುಂದ್ರಚಂದ್ರಿಕಾದೇವಿಗಂ ಸಕಲರಾಜಗುಣಭದ್ರ (ನಪ್ಪ) ಭದ್ರಾವತೀಪುರನಾಥ ನಪ್ಪ ಜಯವರ್ಮನೃಪತಿಗಂ ಪುಟ್ಟಿ.

ಕಂ॥ ಅಮಳಕುಳವಾಹಿನೀಸತಿ ।
ಗೆ ಮಹಾಬ್ಧಿಗೆ ಪುಟ್ಟಿದಬ್ಜವಾಸಿನಿಯ ವಿಳಾ ॥
ಸಮ ನಾಳ್ದು ನೆಗಟ್ದಿಳೆತಿವಿ ।
ಭ್ರಮವತಿ ಭಾನುಮತಿ ಯೆಂಬ ಕನ್ಯಾರತ್ನಂ ॥ ೩೯ ॥

ಮ॥ ನಿನಗೇವೇಟಿಪ್ಪ್ಪಿ ನಭೂತಪೂರ್ವಮ ನಿಳಾಲಂಕಾರಮಂ ನೀರಜಾ ।
ಸನನಿಷ್ಪಾದಿತ ವಸ್ತುಸಾರಮ ನನಂಗಪ್ರಾಜ್ಯರಾಜ್ಯಾಭಿವ ॥
ರ್ಧನಮಂ ಮಂಗಳಲಕ್ಷಣೈಕನಿಧಿಯಂ ಸಂಸಾರಸಾಫಲ್ಯಸಾ ।
ಧನಮಂ ಲೋಚನಲೋಚನೀಯರುಚಿಯಂ ತತ್ಕನ್ಯಕಾರೂಪಮಂ ॥ ೪೦ ॥

ಕಂ॥ ಲಪನೇಂದುರುಚಿಗೆ ಮಱಿಗೆ ।
ಯ್ದುಪಕರಿಸಿದ ಘನಪಯೋಧರಂಗಳ ನೊಸೆದೀ ॥
ಕ್ಷಿಪ ಪದಪಯೋಜಲಕ್ಷ್ಮಿಯ ।
ಚಪಳಾಕ್ಷಿಗಳೆನಿವು ಮವಳ ಚರಣನಖಂಗಳ್ ॥ ೪೧ ॥

ಆಕನ್ನಿಕೆಯುಂ ಬೇಡಲ್ ।
ಸಾಕಾಂಕ್ಷಂ ಕನಕಪುರದ ಗಜಕರ್ಣಂ ಮ ॥
ದ್ಭಾಕಾಂತನಲ್ಲಿಗಟ್ಟಿ ವಿ ।
ವೇಕಿ ನಿಸೃಷ್ಟಾರ್ಥ ನೆನಿಪ ದೂತಂ ಖ್ಯಾತಂ ॥ ೪೨ ॥

ಬಂದು ನೃಪದರ್ಶನಂ ತನ ।
ಗಂದಾಗಿರೆ ತಂದ ಪಾಗುಡಂಗಳ ನಿಂಬಿಂ ॥
ಮುಂದಿಟ್ಟು ವಿನಯನತ ನಾ ।
ನಂದಮ ನಾದರದೊಳೆಯ್ದೆ ಬಱಿಕಂ ನುಡಿದಂ ॥ ೪೩ ॥

ಮ॥ಸ್ರ॥ ಹರಿವಂಶೋತ್ತಂಸಹಂಸಂ ಕನಕಪುರವರಾಧೀಶ ನುದ್ದಾಮತೇಜಂ ।
ಪರಭೂಪಶ್ರೀಸಮಾಕರ್ಷಣಪಟು ಗಜಕರ್ಣಂ ನಯಾಕೀರ್ಣ ನೊಲ್ದಿ ॥
ಮ್ಮರಸಂ ತತ್ಕನ್ಯೆಯಂ ಭಾನುಮತಿಯ ನೆರೆದಿಂದಟ್ಟಿದಂ ಕೊಟ್ಟು ಸಯ್ಪಂ ।
ಪರಮಪ್ರೇಮಾನುಬಂಧಕ್ಕೆಡೆಗುಡುವುದು ನೀಂ ದೇವ ಸೌಜನ್ಯಶಾಳೀ ॥ ೪೪ ॥

ಕಂ॥ ಮಾದೇವಿಪಟ್ಟಮಂ ನೃಪ ।
ನಾದರದಿಂ ಕುಡೆ ನಿಜಾತ್ಮಜಾತೆಗೆ ನೆಗಱ್ದಿ ॥
ರ್ದಾದಿವ್ಯಮಾಲೆ ಶೇಖರ ।
ಮಾದಪ್ಪು ದನೇಕನೃಪರ್ಗದೇಂ ಕೇವಳಮೋ ॥ ೪೫ ॥

ಆದೊರೆಯ ವಲ್ಲಭಂ ತನ ।
ಗಾದೊಡೆ ನಿಜಕನ್ನೆಗನ್ನೆಯೆಂಬಿನಿತಲ್ಲೇ ॥
ನಾದೊರೆಯುಳಿಯಂ ನೃಪ ನಿನ ।
ಗಾದೊಡೆ ಭುವನದೊಳಸಾಧ್ಯ ಮಾವುದು ಮುಂಟೇ ॥ ೪೬ ॥

ಎಱಗುಗು ಮೆಮ್ಮರಸಂ ಮನ ।
ದೆಱಕದಿ ನೀಭಾನುಮತಿಗ ಮೆಂಬಿನಿತೆಂ ನಿನ ॥
ಗೆಱಗಿಸುಗು ಮೆಱಗದಹಿತರ ।
ನೆಱಗಿಸದೊಡೆಱಗಿಸುಗು ಮುಮರಿಯರ್ಕಳ ನವರ್ಗಂ ॥ ೪೭ ॥

ಮ॥ ಅನತೋರ್ವೀಶರ ದಂತಿದಂತವಳಯಾಳಂಕಾರದಿಂ ವೀರವೈ ।
ರಿನೃಪಾಲದ್ವಿಪಮೌಕ್ತಿಕಾವಳಿಗಳಿಂ ಕೆಯ್ಗೆಯ್ವುಗುಂ ನಿನ್ನ ನಂ ॥
ದನೆಯಂ ಪೇೞ್ ಪೆಱರಂತೆ ಮಿಕ್ಕ ಬಳೆಯಿಂದಂ ಮಿಕ್ಕ ಮುತ್ತಿಂದ ಮಂ ।
ಗನೆಯರ್ಗಾಹವಧೀರ ನಾನ್ನೃಪವರಂ ನೇಪಥ್ಯಮಂ ಮಾಳ್ಪನೇ ॥ ೪೮ ॥

ವ॥ ಎಂದು ಬಿನ್ನಪಂಗೆಯ್ದ ದೂತನ ನಿಜೇಶವಿಕ್ರಮಪ್ರಕಾಶಕರ ಮಪ್ಪ ಬಂಧುಕೃತ್ಯಸಂಬಂಧ ಬಂಧುರಾಳಾಪಂಗಳಂ ಕೇಳ್ದು ಪರಿತೋಷದರಹಸಿತಲಸಿತವದನಾರವಿಂದನಾಗಿ.

ಕಂ॥ ತನ್ನನ್ನನ ಗುಣವೃದ್ಧನ ।
ಸನ್ನುತನ ಕುಲೀನನೊಂದುಸೌಹೃದ ಮಿೞಿದೆಂ ॥
ಬನ್ನನೆ ಕನ್ನೆಗೆ ಯೋಗ್ಯನೆ ।
ನಿನ್ನೆಂದುದೆ ಯೋಗ್ಯ ಮಲ್ಲದಿದು ಕರಣೀಯಂ ॥ ೪೯ ॥

ವ॥ ಎಂದು ಭಂಗಿಭಾಷಿತದಿ ನಾತನಂ ಪ್ರೀತನಂ ಮಾಡಿ ಬೀಡಿಂಗೆ ಕಳಿಪಿ ವಿಸರ್ಜಿತಾಸ್ಥಾನ [ನಾಸನ] ದಿಂದ ಮೆೞ್ದು.

ಕಂ|| ಕೃತಮತಿಗಳನ್ವಯಾಗತ ।
ರತಿಮೋಹಿತರಖಿಳನೀತಿಶಾಸ್ತ್ರಕಳಾಪಂ ||
ಡಿತರೆನಿಪ ಸಚಿವರೊಡವರೆ ।
ಪತಿ ಮಂತ್ರಾಲಯಕೆ ಬಂದು ಮಂತಣ ವಿರ್ದಂ ॥ ೫೦ ॥

ವ॥ ಇರ್ದು ಶಕ್ರಗುರು ಶುಕ್ರಕಾಮಂದಕಾದಿ ನಯವೃದ್ಧರಿಂ ನಿಬದ್ಧಮಾದ ನೀತಿಶಾಸ್ತ್ರಪಟುಗಳೊಳಾಳೋಚನಂಗೆಯ್ದಲ್ಲಿ.

ಕಂ|| ಕನಕಪುರಸ್ಥನ ಹರಿವಂ ।
ಶನ ಗಜಕರ್ಣನ ನಿಸರ್ಗದುಮರ್ಂತ್ರತೆ[1] ಯಾ ॥
ರ್ಪಿನ ವಿಕೃತಿ ತರಳಭಾವಂ ।
ಮನದೊಳಿರಲ್ಕೇವ ನುಱಿನೆ ಕೊಳುಕೊಡೆಗೆ ನೃಪಂ ॥ ೫೧ ॥

ವ॥ ಅಂತುಱದೆ.

ಚಂ|| ನಿನಗನುರೂಪೆ ಯೆಂಬುದನೆ ಕಂಡೊಡೆಯಂ ವಧುಗೆಂತು ಮೆಂಬುದಂ ।
ನೆನೆದು ಕುಮಾರಿ ಭಾನುಮತಿಯಂ ಕುಡಲೊಲ್ಲದ ನಾದ ನಾಜಡಾ ॥
ತ್ಮ ನುಚಿತಮಲ್ತು ಮನ್ಮಥ ನಿರಲ್ ರತಿ ವಿಷ್ಣುವಿರಲ್ ಸರೋಜವಾ ।
ಸಿನಿ ದಿವಿಜಾಧಿನಾಯಕ ನಿರಲ್[ಶಚಿ]ಪೇೞಿ ಪೆಱಗೊರ್ಲ್ದು ಸಾಗರ್ಮ || ೫೨ ||

ವ॥ ಅಂತು ಮಂತ್ರಿಗಳ್ವೆರಸು ನಿರ್ನಿಕ್ತಕಾರ್ಯನಾಗಿ ಮಱುದಿವಸ ಮವಸರಂಗೊಟ್ಟು ಗಜಕರ್ಣದೂತನ ಮುಖಾವಲೋಕನಂಮಾಡಿ.

ಕಂ|| ಶ್ರೀಪತಿ ಜನಪತಿ ಮದ್ಭಗಿ ।
ನೀಪುತ್ರಂ ಪುಂಡರೀಕಿಣೀಶ್ವರ ನಖಿಲ ॥
ದ್ವೀಪಾಂತವರ್ತಿಕೀರ್ತಿ ಮ ।
ಹಾಪದ್ಮಂ ಭಾನುಮತಿಗೆ ವರ ನೇತೆಱದಿಂ ॥ ೫೩ ॥

ವ॥ ಅದಱಿಂ ದಮಲಭ್ಯಮಾನ ಮಪ್ಪ ಕನ್ಯಕಾವೃತ್ತಕಂ ಮಾಣ್ಗೆ ಮತ್ತಮೊಂದುಪಕ್ಷಮುಂಟದಾವುದೆಂದೊಡೆ.

ಚಂ|| ಬಳೆವನುರಾಗಮಂ ಬಯಸಿ ಕೊಳ್ಕೊಡೆಗಟ್ಟದ ತನ್ನಮಾತ ನಾ ।
ಮಿಳಿಪುದು ಪೆರ್ಮೆಯಲ್ಲದೆರ್ದೆವತ್ತುಗೆತೆತ್ತುಗೆವೆತ್ತಮುಕ್ಕಳೊಳ್ ||
ಗೆಳೆಯಳ ನಾಕೆಯಂ ಕಿಱಿಯಳಂ ಮದಲೇಖೆಯ ನುನ್ಮಯೂಖೆಯಂ ।
ವಿಳಸಿತಕಾಮಕಲ್ಪತರುಶಾಖೆಯ ನಾವಿಭುಗೀವೆ ವಟ್ಕಿಱಿಂ || ೫೪ ||

ವ॥ ಎಂದು ನಿಜಪುತ್ರಿಯಂ ಧಾತ್ರೀತನೂಜೆಯಪ್ಪ ಮದಲೇಖೆಯಂ ತೋಱಿ.

[1] ನಿಸರ್ಗದುನ್ಮತ್ತತೆ.

ಕಂ|| ಈಕೆ ಮದಲೇಖೆ ತಾ ನವ ।
ಶೋಕಿಸೆ ಗಜಕರ್ಣ ನಿದಱಿ ನೀಯನುಬಂಧಂ ||
ಲೋಕದೊಳನುಕ್ತಸಿದ್ಧ ಮ ।
ದೇಕೆಡೆಗಟ್ಟಲ್ತು ತಣಿವುಗಾಪಶ್ತಿಗಳಂ || ೫೫ ||

ವ|| ಎಂಬುದುಂ ದೂತಂ ವೀತಾಕೂತನಾಗಿ ಮನವೊಲ್ದು.

ಕಂ|| ದೇವಭವತ್ಪಟ್ಟಮಹಾ ।
ದೇವಿಯ ಸುತೆ ಭಾನುಮತಿ ಯಧೀಶನ ಹೃದಯೇಂ ||
ದೀವರಮ ನಲರ್ಚುಗು ಮಿವ ।
ಳೇವಳೊ ನೀರಡಸಿದಂಗೆ ತುಪ್ಪಂ ಮರ್ದೇ || ೫೬ ||

ಚಂ|| ಲಳಿತವಿಳಾಸವಿಭ್ರಮಕಳಾವತಿಯರ್ ತನಗಿಲ್ಲದೆಮ್ಮ ಭೂ ।
ತಳಪತಿ ಬೇಡಿ ಯಟ್ಟಿದನೆ ಕೂಸ ನನೇಕನೃಪಾಲರಂ ಭುಜಾ ||
ಬಳದಿ ನದಿರ್ಪಿ ತತ್ಕುಲಧನಂಬೆರಸೀಱ್ಕುಳಿಗೊಂಡ ಕನ್ಯಕಾ ।
ಕುಳದೊಳಗಾರ ಪೋಲ್ವೆಯವಳೀಕೆಯ ನೇಕೆಯೊ ಪಾಟದೋಱುವಿರ್ || ೫೭ ||

ಕಂ|| ಮುತ್ತಿನ ಬಿಱುನುಡಿಗಳ ಹುಸಿ ।
ಸುತ್ತಿನೊಳೇ ನವಳ ನೀವೊಡೀವುದು ಕುಡೆ ವೆಂ ||
ಬುತ್ತಗಮನೆ ಕುಡುವುದು ವೋ ।
ಣುತ್ತರದೊಳ್ ಕಾಣಲಕ್ಕು ಮಳ್ಳಿಯ ಫಳಮಂ || ೫೮ ||

ಎಳಸಿ ಮನವೊಲ್ದ ನಪ್ಪೊಡೆ ।
ಬಳವದ್ಭೂಭುಜರ ವಸ್ತುವಾಹನಕನ್ಯಾ ||
ಕುಳ ಮುಮ್ಮರಸನ ನಡುಮನೆ ।
ಯೊಳಗಿರ್ದಪು ವೆಂದೆ ಬಗೆಯಿ ವೊಲ್ಲದೊಡೆಱಿಯಿಂ || ೫೯ ||

ಮ|| ಇದನಿಂನೊಂದನೆ ನಂಬು ಕನ್ನಿಕೆಯ ನೆನ್ನಾಳ್ದಂಗೆ ನೀನೀಯಲೊ ।
ಲ್ಲದೆ ಪೇೞಿದ್ದಿ ನೃಪ ನೀಂ ಕುಮಂತ್ರಿಗಳ ಮಾತಂ ಕೇಳ್ದು ಬೇಳಾಗಿ ನಾ ||
ಳೆ ದುರಂತಾಂತಕಕೋಪ ನೆತ್ತಿ ಗಜಕರ್ಣಂ ಬಂದೊಡಾಂತಿಳ್ಳಿ ದ ।
ರ್ಪದಿ ನಡ್ಡೈಸುವ ಕೆಯ್ದುಗೆಯ್ವ ಕಡುಕೆಯ್ದೊಟ್ಟಯ್ವ ಕಟ್ಟಾಳ್ಗಳಾರ್ || ೬೦ ||

ಕಂ|| ಇನ್ನೊಲ್ದ ಕನ್ನೆಯೊರ್ವಳೆ ।
ನೆನ್ನಾಳ್ದಂ ಕೊಳ್ವ ನಲ್ತು ನಿನ್ನೀಪೊೞಲಂ ||
ನಿನ್ನೀರಾಜ್ಯದ ಸಿರಿಯಂ ।
ನಿನ್ನೀಕುಲಧನಮ ನೊಡನೆ ಬೞಿವೞಿಗೊಳ್ವಂ || ೬೧ ||

ವ|| ಎಂದತಿಕ್ರಮಿಸಿ ವಿಕ್ರಮದಿ ನಡೆರೆ ನುಡಿದ ದೂತನ ದುರುಕ್ತಿಗೆ ಮಹೀಶನೀಷದುದ್ಗತ ಭೃಕುಟಿಯುಂ ಕಿಂಚಿದಾರಕ್ತಮುಕ್ತನೇತ್ರನುಂ ಸ್ವಲ್ಪನಿಷ್ಪಂದಿತಾಧರನು ಮಾಗಿ ನುಡಿಯಲೊಡೆರಿಸುವುದುಂ ಅದಂ ಕಂಡು ಮನಮಱಿದು ಮಂತ್ರಿಗಳ್ ಮಾರ್ಕೊಂಡು.

ಕಂ|| ಏಂ ಗಳ ಬಾಯ್ಯುಂಟೆಂದು ಕ ।
ರಂ ಗಳಪುವೆ ಬಱಿದೆ ನಿನ್ನ ಪವಣಱಿಯದೆ ವೃ ॥
ದ್ಧಂಗೆ ಖಳಂಗೀವುದೆ ಲಲಿ ।
ತಾಂಗಿಯ ನೀವಂತೆ ರಾಹುವಿಂಗೆಳವೆಱೆಯುಂ ॥ ೬೨ ॥

ತಾವರೆ ಯಲ್ಲದೆ ಸಿರಿಗಂ ।
ತಾವಲೆ[1] ನೆಲೆ ಯಕ್ಕುಮೇ ಮಹಾಪದ್ಮನೆ ಲೀ ॥
ಲಾವತಿಗೆ ಭಾನುಮತಿಗೆ ಮ ।
ನೋವಲ್ಲಭ ನಕ್ಕು ಮಕ್ಕುಮೇ ನಿನ್ನರಸಂ ॥ ೬೩ ॥

ಹೃದ್ಯಗುಣನಿಳಯ ನಾವಿಭು ।
ಸದ್ಯಶ ನಿರೆ ಕನ್ನೆ ನಿನ್ನ ಪತಿಗೆಳಸುವಳೇ ॥
ಪ್ರದ್ಯೋತದ್ಯುತಿ ಗಲ್ಲದೆ ।
ಖದ್ಯೋತದ್ಯುತಿಗೆ ನಳಿನಿ ಮೊಗಮಿತ್ತಪಳೇ ॥ ೬೪ ॥

ವ|| ಮತ್ತಮಾಭಾನುಮತಿಯ ನಾತಮೋಮೂರ್ತಿಯನುವರ್ತನಕ್ಕ, ಮಾ ಹರಿಣಲೋಚನೆಯ ನಾಚಮೂರಾತಿರೌದ್ರಮದನಮದೋತ್ಸವಕ್ಕ, ಮಾಕುಮುದಗಂಧಿನಿಯ ನಾಖರದಂಡಸಖನ ಸುಖಸಂಗಮಕ್ಕ, ಮಾಚಂಪಕವಿಕಾಸನಾಸಿಕೆಯ ನಾಮಧುಪವೃತ್ತಮನೋವೃತ್ತಿಗ, ಮಾಮಯೂರಕಚಭಾರವತಿಯ ನಾದ್ವಿಜಿಹ್ವವಲ್ಲಭನ ನಲ್ಲಳುತನಕ್ಕ, ಮಾಮರಾಳ ಗಾಮಿನಿಯುಮ ನಾಘನವಿಳಾಸನಭಿಲಾಷಾಪೋಷಣಕ್ಕ, ಮಾಮದನಚಾಪಲತೆಯ ನಾವಿರೂಪಾಕ್ಷನೀಕ್ಷಣಕ್ಕ, ಮಾರಾಜಕಂಠೀರವಾರ್ಹಕೇಸರಿಣಿಯ ನಾಗಜಕರ್ಣನಭ್ಯರ್ಣಕೇಳಿಗಂ ಮೇಳಿಸುವದಘಟಮಾನ ಮನ್ಯೋನ್ಯವಿರುದ್ಧ ಮೆಂಬುದ ನಱಿಯದಾಗ್ರಹಿಪ ನಿನ್ನ ನಿರ್ಬುದ್ಧಿತನಮೇ ನಿನ್ನರಸನ ವಿವೇಕವಿಕಳತೆಯ ನಱಿಪಿದಪ್ಪುದೆಂಬಂತೆ.

ಕಂ|| ನಿಜದಿಂ ಮದಮಳಿನಂ ಧೃತ ।
ರಜ ನುರುಮಾತಂಗಧರ್ಮ ನಾಱುಡಿದಾಣಂ ॥
ಸಜಡಾತ್ಮಚರಿತ ನೆನಿಸುವ ।
ಗಜಕರ್ಣಂ ಹಸ್ತಿಮೂರ್ಖ ನೇನೆತ್ತಱಿವಂ ॥ ೬೫ ॥

ವ|| ಅದಲ್ಲದೆಯುಂ.

[1] ತಾವರೆ (ಈ ಪಾಠದಲ್ಲಿ "ರಲ ಯೋರಭೇದಃ" ಎಂಬ ನಿಯಮನವನ್ನಂಗೀಕರಿಸಬೇಕು.)

ಮ॥ ಪಿರಿದುಂ ಬೀರಮನಾಡಿ ಗರ್ಜಿಸುವ ನಿನ್ನೀಗಂಡ[1]ವಾತಿಂಗೆ ಕಾ ।
ತರನುಂ ಬೆರ್ಚುಗು ಬೆರ್ಚ ನಪ್ರತಿಮಶೌರ್ಯಾಟೋಪ ನೀಭೂಪ ನೇಂ ॥
ಭರದಿಂದಂ ಬಿಱುಗಾಳಿ ಬೀಸೆ ಮರನಂ ತಳ್ಳಾಡುಗುಂ ಮೇರುಭೂ ।
ಧರ ಮಳ್ಳಾಡುಗುಮೇ ಮಹಾಪ್ರಳಯವಾತಾಘಾತನಿಷ್ಕಂಪಿತಂ ॥ ೬೬ ॥

ಉ॥ ಬಂದವ ನೆತ್ತಿ ವಿಕ್ರಮದಿ ನೀಱ್ಕಳಿಗೊಂಡವ ನಂತೆ ಕೂಸ ನಿ ।
ನ್ನಿಂದೆಮ ಗೊಳ್ಳೆಯಂ ಬಿಡುವೆ ಪೇೞ್ ತನಗಿಕ್ಕಿದ ಕೋಂಟೆ ತಾಂ ಚಡಂ ॥
ಬಂದು ನಿಜೇಶ ನಾತಕೊಱಿಯಂತಿಱಿವಂ ಗಳಪಲ್ಕೆ ಬೇಡ ಪೋ ।
ಗೆಂದುಱಿದೊತ್ತಿ ಚಪ್ಪರಿಸೆ ಪೋದನವಂ ಪಗೆಸಾರಿ ಕೋಪದಿಂ ॥ ೬೭ ॥

ವ॥ ಅಂತು ಪೋಗಿ ತತ್ಪ್ರಪಂಚಮೆಲ್ಲಮಂ ಗಜಕರ್ಣಂಗೆ ಕರ್ಣಗೋಚರಂಮಾಱ್ಪುದು ಮು ದೀರ್ಣಕೋಪಾಟೋಪನಾಗಿ.

ಉ॥ ಮನ್ನಿಸದೆನ್ನ ಬಾಹುಬಲಮಂ ಕುಲಮಂ ಚಲಮಂ ಸಗರ್ವದಿಂ।
ಕನ್ನೆಯ ನೀಯದಿರ್ದ ನೃಪನಂ ಲಪನಂ ಗ್ನಪನಂ ಕೊಳಲ್ಕೆ ತೂ ।
ಳ್ದೆನ್ನ ತೊಡರ್ಪುದೋರದಿನಿಸಂ ಮುನಿಸಂ ಮುನಿಸಾಂಪದಂತೆ ಬಿ ।
ಟ್ಟನ್ನಿರೆ ಕೀರ್ತಿಲಕ್ಷ್ಮಿ ಬಿಡುಗುಂ ಕಿಡುಗುಂ ಕಡುಪೆಂಪಿನೆಟ್ತಿರಂ ॥ ೬೮ ॥

ವ॥ ಎಂದಾಡಿ ಸಮಗ್ರಸಾಮಗ್ರಿವೆರಸು ತಳರ್ದು.

ಮ॥ ಕರಿವೃಂದಂ ಗಿರಿವೃಂದ ಮಾಗಿರೆ ತುರಂಗಂಗಳ್ ತರಂಗಂಗಳಾ ।
[2]ಗಿರೆ ನಕ್ರಾ[ಳಿ ರಥಾಳಿಯಾ]ಗಿರೆ ಪಯೋಮತ್ಸ್ಯಾಳಿ ಭೃತ್ಯಾಳಿ ಯಾ ॥
ಗಿರೆ ತಾಂ ವಾರಿಧಿ ಮೇರೆದಪ್ಪಿ ಕವಿವಂತೆಟ್ತಿಂದು ಭದ್ರಾವತೀ ।
ಪುರಮಂ ಮುತ್ತಿದ ನತ್ಯುದಗ್ರಚತುರಂಗಾಭೀಳಕೋಳಾಹಳಂ ॥ ೬೯ ॥

ವ॥ ಅನ್ನೆಗಂ ತನ್ನ ಬರವನಱಿದು ಮುನ್ನಮೆ ಜಳಖಾತಿಕಾವಳಯಮ ನಳುಂಬಮಾಗೆ ತಿಂಬಿಸಿಯು, ಮತಿಸ್ಥೂಳತರಜಾಳಂಗಳಿಂ ಮೇಳೆಯಮ ನೋಳಿಗೊಳಿಸಿಯುಂ, ವಿಷಮವಿಷವಿಟಂಕ ದಂಷ್ಟ್ರಾಂಕುರದಂತಗುರ್ವಿಸುವ ವಿಷಲತಾಗುಲ್ಮಕಂಟಕಂಗಳಂ ಗಾಡಿಯಿ ನಳವಡಿಸಿಯುಂ, ಪರಪ ತಾಕಿನೀಸುಭಟಜನಜಾನುಭಂಜನಂಗಳಾಗೆ ದಸಿಗಳಂ ಬಸಿದು ನೆಡಿಸಿಯುಂ, ಚರಣಸಂಚರಣವರ್ಜನೀ ಯಂಗಳಾಗೆ ವಜ್ರಸೂಜಿಗಳ ನುಜ್ಜೃಂಭಿತಂಗಳಾಗಿಸಿಯುಂ, ಮದಮತಂಗಜಾಂಘ್ರಿತಳಮ ನಳಱಿ ಸುವ ಶೃಂಗಾಟಕಂಗಳಂ ಸಂಗಳಿಸಿಯುಂ, ಪ್ರಳಯಶಿಖಿಯ ದಳ್ಳುರಿಯ ಬಳ್ಳಿಯಂತೆ ಮಿಳ್ಳಿಸುವ ಮಸಕ ದುರಿಯೆಣ್ಣೆಯಂ ಪಣ್ಣಿಸಿಯುಂ, ಅರಿಬಳಪ್ರಹರಣನಿವಾರಂಗಳಪ್ಪಾಳ್ವೆಱಿಯ ತುಱುಗಲಂ

[1] ವಾತಿಂದೆ ಕಾತರನಂ ಬೆರ್ಚಿಸು [2] ಗಿರೆ ನಕ್ರಂ ರಥಚಕ್ರಮಾಗಿರೆ.

ತುಱುಂಬುಗೊಳಿಸಿಯುಂ, ಲಗ್ಗೆಯೊಳ್ ಮೊಗ್ಗರದ ಗಿಗ್ಗಿರಿಗೆ ನಡೆವಂದರೆಂಬಿನವನಿರುಂಕೆ ತೆಗೆವಂಕುಶಂಗಳನಳಂಕೆಗೊಳಿಸಿಯುಂ, ಬೆಂಗುಂಡುಗೊಂಡೆ ಗಂಡಗತ್ತರಿಯ ಸಂಸರ್ಗದರ್ಗಳೆಮನಮರೆಸಾರ್ಚಿಯುಂ, ಕುಳಿಸಿವಿಳಸಿತತಾಂಭೋದಮಂ ದುರ್ಗಮಂ ದುರ್ಘಾಟಮಪ್ಪಂತುಗೋಪುರಾವಘಾಟನಮಂ ಮಾಡಿಸಿಯುಂ, ಪರಬಳದ ಪಿರಿಯ ಸಿರಿಯ ನಱುಂದಳವಿಗಳಿಯೆ ಕಟ್ಟನಿಟ್ಟಳಂಮಾಡಿಸಿಯುಂ, ಅಲ್ಲಲ್ಲಿ ಜಾವಮುಕ್ಕಡೆ(ಗ)ರವಟಗೆತಳವ(ಱಿಕೆ)ಯ(ಮೆ)ಕ್ಕೆಕ್ಕೆಯೊಳಂ ಠಾಣಾಂತರಮಂ ನಿರವಿಸೆಯುಂ, ಅಂತು ಕೆಯ್ಗಯ್ದಿಸದಾಗಳ್.

ಕಂ॥ ವಿಳಸಿತವಿಯತ್ತಳಂ ಕೊ ।
ತ್ತಳ ಮಥಟರ ಗಂಡಗುಂಡೆಕಟ್ಟಳೆ ಮುಗಿಲ ॥
ಟ್ಟಳೆ ಪಗೆವರಾಳ್ವರೆ? ಬೀ ।
ಳ್ವಳೆ ಬಗೆದಾಳ್ವಱಿ ಮೆಱಿದುವರಿವಿಟಂಕಂ ವಂಕಂ ॥ ೨೦ ॥

ವ॥ ಅದಲ್ಲದೆಯುಂ.

ಕಂ॥ ಕೂಡೆ ವಿಗುರ್ವಿಸಿದುವು ನಿಮಿ ।
ರ್ದಾಡುವ ಪಟಿಯಿಗೆಗಳಹಿತಬಲಮಂ ನುಂಗ ॥
ಲ್ವೇಡಿ ಪೊಟಿಲೆಂಬ ರಕ್ಕಸಿ ।
ನೀಡುವ ನಾಲಗೆಗಳೆನಿಸಿ ಲೋಹಿತರುಚಿಗಳ್ ॥ ೨೧ ॥

ವ॥ ಅಂತು.

ಸ್ರ॥ ಇದ ನಾಟ್ರಂದಪ ನೇದ್ರುಃಶೀತ್ತಸುವ ಚಿತ್ತಂ ಪೊತ್ತುಗುಂ ಮಾತಿ ನಾ ।
ಡಿದ ಬಾಯ್ ಬತ್ತುಗು ಮೇಱಿ ನೋಡಿದೆಮೆ ಸೀಗುಂ ಸಾರ್ದ ಮೆಯ್ ಬೇಗು ಮೆಂ ॥
ಬುದ ನೆಂಬೂಷ್ಮೆಯ ನಾಳ್ದಗುರ್ವಿಸುವ ಕೋಟಾಚಕ್ರದೊಳ್ ನಿಂದ ನೋ ।
ವದೆ ಕಾದಲ್ ನೃಪ ನಿನ್ನ ಮಚ್ಚಿನ ಮನಃಪ್ರೇಮಾತುಳಂ ಮಾತುಳಂ ॥ ೨೨ ॥

ಕಂ॥ ನಿಂದೊಡೆ ಕರಿಗೊಳ್ಳಂ ರಣ ।
ಮಿಂದೀಗಳೆ ಕೊಳ್ವೆ ಮೆಂದು ಬೊಬ್ಬಿರಿದಾರ್ದ ॥
ಯ್ತಂದು ಬಳಸಿದುದು ಕೋಂಟೆಯ ।
ನಂದರಿಬಳ ಮೊಡನೆ ಮೊಟಿಗೆ ಲಗ್ಗೆಯ ಪಱಿಗಳ್ ॥ ೨೩ ॥

ವ॥ ಆಗಳೊಳಗಣಿಂದಂ.

ಚಂ॥ ಕವಿದಿಸುವಂಬು ಪಾರ್ದಿಸುವ ಕಕ್ಕಡೆ ಕುತ್ತುವ ಕೊಂತ ವಿಕ್ಕುವೊ ।
ಳ್ಗವಣೆಯ ಗುಂಡು ತೂಳ್ದಿಡುವ ಡೆಂಕಣಿ ಪೊಯ್ಯುರಿಯೆಣ್ಣೆ ಕಾಸಿ ಸೂ ।
ಸುವ ಮಟಿಲೆಂಬಿವೆತ್ತಲು ಮಗುರ್ವಿಸೆ ಪೋಗದೆ ಪತ್ತಿ ಲಗ್ಗೆಮಾ ।
ಡುವ ಭಟಕೋಟ ಕೋಟಲೆಯ ನಾಳ್ದರೆ ನೀಳ್ದುದು ಕೋಂಟೆಗಾಳಗಂ ॥ ೨೪ ॥

ಚಂ|| ಪೆಣದ ಬಣಂಬೆ ಕೊತ್ತಳದೊಳತ್ತಳಗಂ ತನಿಗಂಡದಿಂಡೆ ಸು ।
ತ್ತಣ ಪೊಱಕೋಂಟೆ ಯುಟ್ಟುಳೆಯೊಳಿಟ್ಟಳ ಮಾಡುವ ಬೀರರಟ್ಟೆ ಸಂ ॥
ದಣಿಸಿದ ಮಂಕದಾರದೊಳಪಾರ ಮಸೃಗ್ಜಲದುಗ್ರಪೂರಪೂ ।
ರಣ ಮಗಱಿಂತರಾಳದೊಳಗುರ್ವನೆ ಸತ್ತುದು ಶತ್ರುಸಾಧನಂ ॥ ೨೫ ॥

ಕಂ|| ಅವಲವಲೆನೆ ಮುಗ್ಗುವ ತ ।
ಗ್ಗುವ[ನೆಗ್ಗುವ]ನುಗ್ಗುವಾತ್ಮತಂತ್ರದ ಕೇಡಿಂ ॥
ಗವನಳ್ಕದೆ ಕಾದುತಿರೆ ಬ ।
ಲವಱಿಕ್ಕಿದುದು ಹಗಲುಮಿರುಳುಮೆರಡುಂ ತಂತ್ರಂ ॥ ೨೬ ॥

ವ|| ಅಂತು ನಿಚ್ಚಗಾಳೆಗದೊಳುಬ್ಬೆಗಂಬಟ್ಟು ಸುರ್ವಿಯಱಿವ ಪರಿಜನಂಗಳುಂ, ಸರ್ವ ನಿರೋಧದಿಂ ದುಬ್ಬೆಗಂಬಡುವ ಪುರಜನಂಗಳುಂ ತಂನ ಮನಮನನುವಿಸೆ.

ಚಂ|| ಪಶುಶಿಶುಸಾಮಜಾಶ್ವವನಿತಾದಿಗಳುಮ್ಮಳಿಪಂತು ಕೋಂಟೆಯೊಳ್ ।
ಪ್ರಶಮಿತಶೌರ್ಯ ನಾಗಿ ಮಱೆಗೊಂಡುಱದಿರ್ಪುದು ಕಷ್ಟ ಮಾಮಹಾ ॥
ವಿಶಸನಕೇಳಿಯುಂ ಮೆಱೆದು ತೊಳ್ದುವೆ ನೆಂದು ಪೊದೞ್ದು ಪೂಣ್ದು ಕ ।
ರ್ಕಶಭುಜವಿಕ್ರಮಂ ಪೊಱಮಡಲ್ ಬಗೆದಂ ಜಯವರ್ಮಭೂಭುಜಂ ॥ ೨೭ ॥

ವ|| ಆಗಳಾಮಂತ್ರಿಗಳ್ ಕಂಡು ಮಾರ್ಕೊಂಡು.

ಮ|| ಅಸಮಾನೋಗ್ರಸಮಗ್ರಸೈನ್ಯಬಳ ನಪ್ಪೀತಂಗೆ ನಾಮೋಡಿ ಘು ।
ರ್ಜಿಸೆ ಮೇಲ್ವಾಯಲೊಡರ್ಚು[1]ವೀರಶರಭಶೌರ್ಯಾನ್ವಯಶ್ರೀಯ ಮು ॥
ಬ್ಬಸಮಾಯ್ತಿನ್ನವನಂ ಕಳಲ್ಚಿ ನಡೆ ನೀಂ ಪೇೞ್ದಿಟ್ಟು ಬಂದಪ್ಪ ನು ।
ಬ್ಬಸದಿಂ ನಿನ್ನಳಿಯಂ ಪ್ರತಾಪನಿಳಯಂ ಶ್ರೀರಾಜಕಂಠೀರವಂ ॥ ೨೮ ॥

ಮ|| ಮದವತ್ಸಿಂಹದಿ ನಪ್ಪ ತನ್ನ ಕಡುಗೇಡಂ ಕಾಡ ಸೊರ್ಕ್ಕಾನೆ ನೋ ।
ಡದೆ ತದ್ಗೋಚರಮಪ್ಪರಣ್ಯನಳಿನೀಕಾಸಾರಮಂ ಸಾರ್ವವೋಲ್ ॥
ಕದಡಲ್ ಸಾರ್ದವನಿಂತುಟೀತನಳವೀದರ್ಪಕ್ಕೆ ತಕ್ಕಂತುಟಂ ।
ಕದನಕ್ಷೋಣಿಯೊಳೆಯ್ದೆ ಗಾನೃಪಭುಜಪ್ರೋತ್ಖಾತಶಾತಾಸಿಯಿಂ ॥ ೨೯ ॥

ವ|| ಎಂದುಬಗೆಗೆವರೆ ನುಡಿವುದು ಮದನೊಡಂಬಟ್ಟು.

1 ವೀವಿಷಮಶೌರ್ಯಾ.

ಶಿಖರಿಣೀ॥ ಬಲಂಗೊಂಡಂ ತೊಂಡಂ ಬಿಡದೆ ಗಜಕರ್ಣಾವನಿಭುಜಂ ।
ಬಲಂ ಪೋಗಂ ಬೇಗಂ ಬಗೆವೊಡೆಮಗಿನ್ನಾರೊ ಶರಣಂ ॥
ಬಲೋದ್ವೃತ್ತಂ ಪುತ್ರಂಗೆಸಗುಗೆ ಮಹಾಪದ್ಮನೃಪನುಂ ।
ಬಲಕ್ಷಾಮಂ ಮಾಮಂ ನಿಮಗೆ ಮೊಱಿವೇಟ್ಟಿಟ್ಟದ[ನಿದ]ಂ ॥ ೪೦ ॥

ಕಂ॥ ಆಸತಿವಸನಾಧರೆಗೊಸೆ[1] ।
ದೀಸಮಯದೊಳೆಮ್ಮ ನಧಿಪ ಕಾವುದು ಶೌರ್ಯೋ ॥
ದ್ಭಾಸಿಗಳ ನಿಮ್ಮ ದೊರೆಯರ ।
ಮೈಸಿರಿ ಪರಹಿತಚರಿತ್ರಸೂತ್ರಿತ ಮತ್ತೇ ॥ ೪೧ ॥

ಉ॥ ಎಂದು ಸಮಸ್ತಕಾರ್ಯಭರಮಂ ದಮನಂ ಸುಮನಂ ಜಗಜ್ಜನಾ ।
ನಂದಕನಂ ಪ್ರಶಸ್ತಯಶನಂ ರಿಪುವಂಶವಿನಾಶನಂ ದಯಾ ॥
ನಂದಕಶಸ್ತ್ರಭೂಷಿತವಿಶೇಷಕರಾಳಕರಾಗ್ರನಂ ನರೇಂ ।
ದ್ರೇಂದುವ ನೆಯ್ದೆ ಕೇಳಿಸಿದಪಂ ಮಿಗೆ ನಾಟ್ಟಿಭುವಂಶಮೇರುವಂ ॥ ೪೨ ॥

ಗದ್ಯಂ

ಇದು ಸಮಸ್ತಭುವನಜನಸಂಸ್ತುತಜಿನಾಗಮಕುಮುದ್ವತೀ
ಚಾರುಚಂದ್ರಾಯಮಾಣಮಾನಿತ ಶ್ರೀ ಮದುಭಯಕವಿ ಕಮಳಗರ್ಭ
ಮುನಿಚಂದ್ರಪಂಡಿತದೇವ
ಸುವ್ಯಕ್ತಸೂಕ್ತಿ ಚಂದ್ರಿಕಾಪಾನಪರಿಪುಷ್ಟಮಾನಸಮರಾಳಂ
ಗು ಣ ವ ರ್ಮ ನಿ ರ್ಮಿ ತ ಮ ಪ್ಪ
ಪುಷ್ಪದಂತ ಪುರಾಣದೊಳ್
ದೂತವರ್ಣನಂ
ಸಪ್ತಮಾಶ್ವಾಸಂ

---

[1] ಆಸತಿಗರುಣಾಧರೆ ?

## ಪುಷ್ಪದಂತ ಪುರಾಣಂ

### ಅಷ್ಟಮಾಶ್ವಾಸಂ.

ಕಂ॥ ಶ್ರೀಜಯಲಕ್ಷ್ಮೀವದನಸ ।
ರೋಜಾರ್ಕಂ ದೂತವಚನ ಮೆರ್ದೆವುಗೆ ನುಡಿದಂ ॥
ರಾಜಶಿಖಾಮಣಿ ವಿಬುಧಸ ।
ಮಾಜನುತಂ ಪ್ರಭುಗುಣಾಬ್ಜಿನೀಕಳಹಂಸಂ ॥ ೧ ॥

ಅಮರ್ದಿನ ಮಱಿಯುಂ ಸಿಡಿಲುಂ ।
ನಿಮಿರ್ದುದು ಪೆಡೆವರಲ ಬೆಳಗು ಮುರಗನ ವಿಷಮುಂ ॥
ನಿಮಿರ್ದುದೆನೆ ರಾಗಖೇದಮು ।
ನೆಮಗಿತ್ತುದು ನಿನ್ನ ನುಡಿಯ ಮೊದಲುಂ ತುದಿಯುಂ ॥ ೨ ॥

ವ॥ ಆದೊಡೇನಾದುದು.

ಚಂ॥ ಪಲರ ನದಿರ್ಪಿದುರ್ಕು ಮೆಸೆಗುಂ ತನಗೀಯದೆ ಯೆಂದು ಬಂದು ದೋ ।
ರ್ವಲದಿ ನಮುಂಕಿ ಬಿಟ್ಟ ಗಜಕರ್ಣನ[ನೇಂ ಗ]ಜಕರ್ಣದಂತೆ ಸಂ ॥
ಚಳತೆಯೊಳೊಂದೆ ತೂಳ್ದಿ ಜಯವರ್ಮನೃಪಂಗೆ ಜಯಪ್ರಮೋದಮಂ ।
ಚಲಮುಮ ನುಂಟುಮಾಡದೊಡೆ ಮತ್ಕುಲಕೀರ್ತಿ ಕಲುಂಬುಗೊಳ್ಗದೇ ॥ ೩ ॥

ಶರಣಾಯಾತರ್ಕಳಂ ಕಾವುದು ಮೆರೆದವಗಾರ್ತಿಯಂ ಕ್ಷತ್ರಧರ್ಮಂ ।
ನರಪಂಗೆಂತೆಂದೊಡಂ ಲೋಗನೆ ಗಡೆ ಜನನೀಭ್ರಾತೃ ವಾಭೂಪ ನೀಗಳ್ ॥
ಪರಭೂಪಂ ಮುತ್ತಿ ಪೇಳ್ದಿಟ್ಟದ ನೆನಗೆನೆ ಮುಳ್ಗೀಳಲಾಳೋಚಿಸುತ್ತಾ ।
ನಿರಲುಂಟೇಂ ಪಂಥ ವಿನ್ನಾರದೊ ಪರಿಭವ ಮೇಕಿರ್ಪೆ ನಾನಿಂದೆ ಬರ್ಪೆಂ ॥ ೪ ॥

ವ॥ ಇಂತೆಂದು ತಱಿಸಂದು ಪೂಣ್ದು ತತ್ಸಮಯದೊಳ್ ಜಯಪ್ರಯಾಣಮಂ ಪಡೆಗೆ ಪಡೆವಳನಿಂ ಸಾರಿಸಿ (ವಿಸ)ರ್ಜಿತರಾಜಲೋಕ ನಾಸ್ಥಾನಮಂಟಪದಿ ನೆಱಿದ್ದು ಮಜ್ಜನಭೋಜನಾದ್ಯುಚಿತದಿಂದಂ.

ಕಂ॥ ದಮನನ ನಧ್ವಶ್ರಮಸಂ ।
ಕ್ರಮನನ ನಾತ್ಮೀಯಮಾತುಳಾದೇಶಕೃತಾ ॥
ಗಮನನ ನಾಹಿತಚಿಂತಾ ।
ಸುಮನನ ನಾಱಿಸಿದ ನರಸ ನಂದಿನ ದಿನದೊಳ್ ॥ ೫ ॥

ವ॥ ಅನ್ನೆಗಂ.

ಚಂ॥ ಅಗಲೆ ನಿಜೇಷ್ಟಚಕ್ರ ಮೆಸಕಂಗಿಡೆ ಮಂಡಲದೇಱಿಗ್ಗಿ ಚಂಡಹೇ ।
ತಿಗಳ ಪೊಡೆವರ್ಪ ಕುಂದೆ ಕಮಲಂ ಕಿಡೆಲಂಬರಮಂ ಬಿಸುಟ್ಟು ಶ ॥
ತ್ರುಗಳದಿರ್ದೋಡುಗುಂ ನೃಪತಿ ಯೆತ್ತಿದೊಡೀತೆಱದಿಂದ ಮೆಂದು ಥಾ ।
ತ್ರಿಗೆ ಹರಿ ಮುನ್ನುದಾಹರಿಸಿ ತೋರ್ಪವೊಲೆಯ್ದಿದ ನಸ್ತಶೈಲಮಂ ॥ ೬ ॥

ವ॥ ಅಂತು ನೇಸರ್ಪಡೆಲೊಡಂ.

ಚಂ॥ ನೆಗಱ ದಿನಾವಸಾನಪಟಹಧ್ವನಿ ರಂಜಿಸೆ ಸಂಜೆಗೆಂಪು ಸ ।
ಯ್ತುಗಲೆ ರಥಾಂಗಯುಗ್ಮತತಿ ಪಱಿಕ್ಕಿಗೆ ಸಾರೆ ವಿಹಂಗಜಾತಿ ಕಾ ॥
ಡಿಗೆವೊಗರೇಱ ಮೂಡೆದೆಸೆ ಪುಟ್ಟೆ ವಿಟೀವಿಟಸಂಧಿವಿಗ್ರಹಂ ।
ಮುಗಿಯೆ ಸರೋಜರಾಜಿ ದಳವೇಱ ಖಳರ್ ವೊಗಸಿತ್ತು ಮುನ್ನಿರುಳ್ ॥ ೭ ॥

ವ॥ ಆಸಮಯದೊಳ್.

ಉ॥ ಮಂಗಳತೂರ್ಯನಾದ ವಭಿರಂಜಿಸೆ ಮಂಗಳದೀಪಪಾತ್ರಹ ।
ಸ್ತಂಗಳೆ ಕಾಮಿನೀತತಿ ನಿವಾಳಿಸೆ ಮಂಗಳಪಾರಕೋಕ್ತಿ ಚಿ ॥
ತ್ತಂಗೊಳೆ ಮಂಗಳಾರ್ಹದಿನದಂದಪರಾಹ್ನಿಕ[ಸಂತತ]ಕ್ರಿಯಾ ।
ಮಂಗಳವಾಗೆ ಮಂಗಳಪರಂಪರೆವೆತ್ತೆಸೆದಂ ಮಹೀಭುಜಂ ॥ ೮ ॥

ವ॥ ತದನಂತರಂ.

ಮ॥ಸ್ರ॥ ಗಿರಿಗಳ್ ನೀಳಾದ್ರಿ ಯೆಂಬಂತಿರೆ ನಿಖಿಳನದೀರಾಜಿ ಕಾಳಿಂದಿ ಯೆಂಬಂ ।
ತಿರೆ ವೃಕ್ಷಂಗಳ್ ತಮಾಳಾಕೃತಿಯಿ ನಿರೆ ಮೃಗಶ್ರೇಣಿ ಋಕ್ಷಂಗಳೆಂಬಂ ॥
ತಿರೆ ನಾನಾಪಕ್ಷಿಗಳ್ ಕೋಗಿಲೆವೊಲಿರೆ ನಭಂ ಕಾರ್ಮುಗಿಲ್ ಮುಚ್ಚಿದಂತಾ ।
ಗಿರೆ ಭೂ ನೀಳಸ್ಥಳೀಕುಟ್ಟಿಮ ಮೆನಿಸಿರೆ ಪರ್ವಿತ್ತು ಘೋರಾಂಧಕಾರಂ ॥ ೯ ॥

ವ॥ ಆಗಳ್.

ಕಂ॥ ಜನಪನ ಜಯಪ್ರಶಸ್ತಿಯ ।
ನನಿಮಿಷಪಥ ಮೆಂಬ ನೀಳಪಟದೊಳ್ ರಾತ್ರ್ಯಂ ॥
ಗನೆ ಬರೆದ ಬರೆಪದಕ್ಕರ ।
ಮೆನೆ ತೊಳಗಿದುದು ವಿದಿತತಾರಾನಿಕರಂ ॥ ೧೦ ॥

ವ॥ ಮತ್ತಂ.

ಕಂ॥ ಸಂಕಳಿತಬಹುಳತಾರಾ ।
ಸಂಕುಳದಿಂ ಪೋಲ್ತುದಭ್ರ ಮಾವೃತತಿಮಿರಂ ॥
ತೇಂಕುವ ಮಲ್ಲೀಮುಕುಳದ ।
ಸಂಕುಳಮಂ ತಳೆದು ನಿಂದ ಜಗುನೆಯ ಮಡುವಂ ॥ ೧೧ ॥

ವ॥ ಅವಱೊಡನೆ ಬೆಳಗನೊಳಕೊಂಡು ಮನೆಮನೆ ದಪ್ಪದೊಪ್ಪಿ.

ಕಂ॥ ಮುನಿದು ತವೆ ನುಂಗಿ ತಿಮಿರಮ ।
ನಿನಿತಱಿಕ್ಕಿಸಲಾಱದಡರೆ ಕಾಱಿದಪು ವಿವೆಂ ॥
ಬಿನ ಮೊಸೆದುವು ಸೊಡರ್ಗಳ್ ಜಲ ।
ಕೆನೆ ನಿಜಚೂಳಿಕೆಯಿ ನೊಗೆವ ಕಾಳಿಕೆಯಿಂದಂ ॥ ೧೨ ॥

ವ॥ ಅನಂತರಮುದಯಸಮಯದರುಣಕಿರಣಪ್ರವಾಳದಿಂದ ಮಿಂದ್ರದಿಗ್ವಧೂಶಿಖಂಡಮಂಡನವಿಳಾಸನಮಂ ತಳೆದು.

ಶಿಖರಿಣೀ॥ ಕಳಾರುಂದ್ರಂ ಚಂದ್ರಂ ಬೆಳಗೆ ನಭಮಂ ಕಾಂತಿವಿಸರಂ ।
ಗಳಿಂ ನೆಯ್ದಿಲ್ಗೆಯ್ದಲ್ ಮೊಗಸಿ ನಳಿನೀವೃಂದದಳಿನೀ ॥
ಕುಳಂ ಕೋಕಂ ಶೋಕಂಬಡೆಯೆ ಮನದೊಳ್ ಪುಟ್ಟಿ ಜಗದೊಳ್ ।
ಬಳೋತ್ಕಾರಂ ವೂರಂಗಧಟಿನ ತಿರುಳ್ ರಂಜಿಸಿತಿರುಳ್ ॥ ೧೩ ॥

ವ॥ ಅಂತು.

ಕಂ॥ ತೊಳಗುವ ನಕ್ಷತ್ರಂಗಳ ।
ಬೆಳಗಿಂ ಸುರಲೋಕಚಂದ್ರ ನೊಪ್ಪಿದ ನತ್ತಲ್ ॥
ಬೆಳಗುವ ಕೈದೀವಿಗೆಗಳ ।
ಬೆಳಗಿಂ ನರಲೋಕಚಂದ್ರ ನೊಪ್ಪಿದ ನಿತ್ತಲ್ । ೧೪ ॥

ವಿಳಸಿತಚಂದ್ರಾಲೋಕದಿ ।
ನಲರ್ದುವು ಕುಮುದಂಗಳತ್ತ ಮಿತ್ತಲ್ ನೃಪನ ॥
ಗ್ಗಳಿಪ ಸದಯಾವಲೋಕದಿ ।
ನಲರ್ದುವು ಸೇವಕರ ನಯನಹೃತ್ಕುಮುದಂಗಳ್ ॥ ೧೫ ॥

ವ॥ ಅಂತು ಪಳಚ್ಚನಾದಚ್ಚವೆಳ್ದಿಂಗಳೊಳ್ ವಸ್ತುಕಕವಿಗಳ ಕಾವ್ಯಗೋಷ್ಠಿಯುಂ, ವರ್ಣಕಕವಿಗಳ ಗೀತಗೋಷ್ಠಿಯುಂ ಮನಂಗೊಳಿಸೆ ಯಾಮಿನೀಪ್ರಥಮಯಾಮಮಂ ಕಳಿಪಿ ಬಳಿಕ್ಕ ಮೋಲಗಮಂ ವಿಸರ್ಜಿಸಿ ಸೆಜ್ಜೆವನೆಗೆ ಬಿಜಯಂಗೆಯ್ದು.

ಕಂ॥ ಅಮೃತಾರ್ಣವದೊಳ್ ಸಿರಿವೆರ ।
ಸು ಮುಕುಂದಂ ಪವಡಿಪಂದದಿಂ ಪವಡಿಸಿದಂ ॥
ಹಿಮಧವಳಧಾಮಶಯನದೊ ।
ಳಮರ್ವಿರೆ ಸೂಟಿರಸಿ ವೆರಸು ರಾಜಮನೋಜಂ ॥ ೧೬ ॥

ವ॥ ಅಂತು ಸುಖಸುಪ್ತನಾಗಿರೆ ನಿಶಾವಸಾನಸಮಯದೊಳ್.

ಕಂ॥ ಸೊಡರ್ಗಳಿರುಳೆಣ್ಣೆಯಂ ನಿಲೆ ।
ಕುಡಿದಱ್ಕಿಮೆವಟ್ಟ್ಟ ವೆನಿಸಿ ನವೆದುವು ತನುಗಳ್ ॥
ಜಡತೆಯಿ ನದಂತೆ ಪೊಡೆರಲ್ ।
ಕುಡುಗುವೆ ದೋಷಾತಿರೇಕ ಮರುಚಿನಿಮಿತ್ತಂ ॥ ೧೭ ॥

ಇದು ತಳರ್ವ ನಿಶಾಸುದತಿಯ ।
ಮೃದುಪದನೂಪುರದ ನೂಲ ತೊಂಗಲ ದನಿಯೆಂ ॥
ಬುದ ನೆನಿಸಿ ಪೊಣ್ಮಿದುದು ನಿ ।
ದ್ದೆದಿಳಿದು ನಲಿದುಲಿವುತಿರ್ಪ ವಿಹಗರವಂಗಳ್ ॥ ೧೮ ॥

ಉತ್ಸಾಹಂ॥ ಎತ್ತಿ ನಡೆಯ ಲೊಡರಿಪೀತ ನೆನ್ನುಮಂ ಸದೋಷನು ।
ದೃತ್ತ ನೆಂದು ಮುಳಿದು ಕಿಡುಗು ಮೆಂಬ ಶಂಕೆಗುಮ್ಮಳಂ ॥
ಬೆತ್ತನೆನಿಸಿ ಮಸುಳ್ದು ನಿಂದು ತನ್ನ ಹೃದಯದೊಳ್ ಭಯಾ ।
ಯತ್ತನೆರಳೆವುಳ್ಳ..........................ಜಡ ನತಿಪ್ರತಾಪಧೀರನೇ ॥ ೧೯ ॥

ವ॥ ಮತ್ತಮುತ್ತುಂಗಚೈತ್ಯಭವನಂಗಳೊಳಗೆ ಮೊಱಗುವ ವಿಭಾತಪೂಜಾಪಂಚಮಹಾಶಬ್ದ ಘೋಷಮುಂ ಸಂವೇದಿಸಿಯುಂ, ಮತಿರಮ್ಯಹರ್ಮ್ಯನಿವಹನೀಡದೊಳ್ ನಿದ್ದೆಗೆಯ್ದ ಪಾರಾವತಂಗಳ ನೆಚ್ಚಱಿಸಿಯುಂ, ಪಕ್ಕದಲೆಯ ನೆಕ್ಕಯಿಂದಮುರ್ದ್ವಱಂಕೆವಿದಿರ್ದೆಱಿರ್ದ್ದ ಕೂಗುತಿರ್ಪ ಕುಕ್ಕುಟಕುಳಂಗಳ ಸರಂಗಳಂ ಸಂಗಳಿಸಿಯುಂ, ಕುಳಿರ್ವ ಬೆಳ್ಪಿಂಗಳಂ ಬಿಡವಡೆರೆಕುಡಿದು ಸೊಕ್ಕಿ ಜೋಂಪಿಸುವಲಂಪಿನ ಚಕೋರಂಗಳನೆಳಸಿರ್ದ ನಸುನಿದ್ರೆಗೆಯ್ಸಿಯುಂ, ಮೇಳಿಸಿದ ನೆಜ್ಜರದಿನೇಱಿಲುಜ್ಜುಗಂಗೆಯ್ವ ವಿಜಯಕುಂಜರದ ಮಂಜೀರಸಿಂಜಿತಕ್ಕೆ ಪಕ್ಕಾಗಿಯುಂ, ಸಪ್ರಭವಸುಪ್ರಭಾತಮಂಗಳಮೋದುತಿರ್ಪ ವರಗಾಯನಿಯರನಪ್ಪುಗೆಯ್ದುಂ, ವಿನೋದಕಲಹದಿಂದೆ ವಿನತರಾದಿನಿಯರ ನಯಕ್ಕೆ ತಿಳಿಯದಿರ್ದ ಬದ್ಧೆಯರ ಮುದ್ದುತನದ ಮುಳಿಸಂ ಬಳಿಕ್ಕೆ ಬಱಿದೆ ನೆಱಿವುಗಿಡಿಸಿಯುಂ, ಸುಸಿಲ ಮಸಕದಿಂಬಸವಱಿದು ನಸುನಿದ್ದೆಗೆಯ್ವ ದಂಪತಿಗಳ ಪೀನಕದಂಬವಂ ತುಱುಂಬಿಯುಂ, ಗೃಹೋಪವನದ ತಿಳಿಗೊಳದ ನಳಿನೀದಳದ ಸಂಪುಟಪುಟೀಕೋಟರದೊಳೆಱಗಿಪ ಮಱುದುಂಬಿವಿಂಡ ನೆಚ್ಚಱಿಸಿಯುಂ, ಸಂಪ್ರಾಪ್ತಸುಪ್ತಿಜಾತಜಾಡ್ಯಮೂಢರಾಗಿರ್ದ ಸುಕವಿಗಳ ಮತಿಯ ನತಿಸೀತಮಾಗಿಸಿಯುಂ ಮದಗಜಗಮನದಿ ನೆಯ್ತಂದು.

ಕಂ॥ ಶಯ್ಯಾಸದನಗವಾಕ್ಷಮ ।
ನೊಯ್ಯನೆ ಪೊಕ್ಕುಲಿದು ನೃಪನ ಸುಖನಿದ್ರೆಯ ॥
ಕೆಯ್ಯಂ ತೊಲಗಿಸಿತು ಮಿಗೆ ಪಳ ।
ಮೆಯ್ಯ ಪಸಾಯಿತರವೋಲ್ ಪ್ರಭಾತಸಮೀರಂ ॥ ೨೦ ॥

ವ॥ ಅನ್ನೆಗಂ.

ಕಂ॥ ಆದವುದು ಯಾನದೊಳ್ ಮಿ ।
ತ್ರೋದಯ ಮಾತೆಱತೆ ಭುವನಮಿತ್ರಂಗೆಂದಾ ॥
ವೇದಿಸುವಂತಾದುದು ಮಿ ।
ತ್ರೋದಯ ಮಗ್ಗಳಿಸೆ ರಾಗ ಮುದಯಿಸೆ ತೇಜಂ || ೨೧ ||

ವ॥ ಅಂತು.

ಕಂ॥ ಚಂಡಕರಂ ಪ್ರಾಕ್ಶೈಲಶಿ ।
ಖಂಡಮ ನೇಱಿದೊಡಖಂಡಮಂಡಳ ಮಮುದರ್ಾ ॥
ಖಂಡಳದಿಗಂಗನಾಮಣಿ ।
ಕುಂಡಳ ಮೆನಿಸಿದರ್ುದರುಣಕಿರಣಚ್ಛವಿಯಿಂ || ೨೨ ||

ಮ॥ ಮಸಕಂಗುಂದೆ ನಿಶಾಟಕೋಟಿ ಕಿಡೆ ಶುಕ್ರಾಳೋಕಸಂಪತ್ತಿ ಪು ।
ಟ್ಟೆ ಸುರೇಂದ್ರಾಶೆಗೆ ರಾಗ ಮಂದು ಹರಿ ಪದ್ಮಾನಂದಿ ಪೀತಾಂಬರೋ ॥
ಲ್ಲಸಿತಂ ಚಕ್ರಸಹಾಯ ನಾಕ್ರಮಿಸಿದಂ ಭೂಚಕ್ರಮಂ ಪಾದದಿಂ ।
ರಸೆಗಾಗಳ್ ಬಲಿದುಸ್ತ್ರಮಂ ತಳರ್ವಿನಂ ದಾನಪ್ರಬದ್ಧಾಕುಳಂ || ೨೩ ||

ಕಂ॥ ಮಾಗಧಮಂಗಳಗೀತಾ ।
ಭೋಗದಿ ನುನ್ನಿದ್ರನಾಗಿ ಸ(ಲ್ಲಲಿ)ತಮನೋ ॥
ರಾಗಂ ನೃಪನೊಡರಿಸಿದಂ ।
ಬೇಗಂ ಪ್ರತ್ಯೂಷಕೃತ್ಯಮಂಗಳವಿಧಿಯಂ || ೨೪ ||

ವ॥ ಅಪ್ರಸ್ತಾವದೊಳ್.

ಮ॥ ದೆಸೆಯೊಳ್ ದಿಗ್ಗಜಬೃಂಹಿತಂ ಗಗನದೊಳ್ ಸೂರ್ಯಾಶ್ವಹೇಷಾರವಂ ।
ವಸುಧಾಭೃತ್ಕುಳದೊಳ್ ವಿನಿರ್ಜರರವಂ ವಾರಾಸಿಯೊಳ್ ಘೂರ್ಣನ ॥
ಪ್ರಸರಂ ಕಾನನದೊಳ್ ಮೃಗೇಂದ್ರರುತಿ ಮೆಯ್ವೆರ್ಚಲ್ಕತಿವ್ಯಾಪ್ತಿ ಯಾ ।
ಯ್ತು ಸುಹೃಚ್ಚಕ್ರಮಯಂ ಕರಂ ನೃಪಜಯಪ್ರಸ್ಥಾನಭೇರೀರವಂ || ೨೫ ||

ವ॥ ಆಗಳಾಘೋಷದ ಮಸಕಮಂ ಕೇಳಲೊಡನೆ ಮಂದರಾದ್ರಿಮಥನಸಮಯಸಮುದ್ಘೀರ್ಣ ಗುಣಾರ್ಣವಕ್ಷೋಭರಭಸಮಂ ತಳೆದು ಬಳೆದ ಚತುರಂಗಬಳದ ಕಳಕಳ ಮಳುಂಬಮಾಗೆ.

ಮ॥ ಲಲಿತಾಂತಃಪುರಕೋಟ್ಟಿಪಿಂದೆ ತಳತಂತ್ರಂ ಮುಂದೆ ಸಾಮಂತಸಂ ।
ಕುಳ ಮಿರ್ವಕ್ಕದೊಳಂತೆ ಪತ್ತಿ ಬರೆ ನಾನಾನೂನಯಾನಂಗಳಿಂ ॥
ತಳರ್ದಂ ಕಾಮರ್ುಗಿಲಂ ಮುಸುಂಕುವೆಳಮಿಂಚೆಂಬಂತೆ ತಂದಾನೆಯಂ ।
ಪೊಳೆಯಿಪ್ಪಂಕುಶಕಾಂತಿಗಳ್ ಪುದುವಿನಂ ಸದ್ಭವ್ಯಸಂಕ್ರಂದನಂ || ೨೬ ||

ಕಂ॥ ಅತಿಸೌಮ್ಯಸಿತಾಸಿತಲೋ ।
ಹಿತಚಿತ್ರಾಂಕುಶದಿ ನೆಸೆವ ಕೇತುಗಳಿಂ ಮಾ ॥
ರುತವೀಥಿಯಂತೆ ನೃಪವೀ ।
ಥಿ ತೋಱಿ ನರಲೋಕಚಂದ್ರ ನೆಯ್ದಿದ ನದಱಿಶೊಳ್ ॥ ೧೭ ॥

ವ॥ ಅಂತು ವಿವಿಧಧ್ವಜರಾಜಿವಿರಾಜಮಾನಮಾದ ರಾಜಮಾರ್ಗದೊಳಗಣ ವಿಚಿತ್ರಾಂಶುಕನಿಚಯರಚಿತಂಗಳುಮಂ, ಸಲ್ಲಲಿತಪಲ್ಲವೋಲ್ಲಲಿತಂಗಳುಮಂ, ಚಂಚತ್ಪಂಚರತ್ನಾಂಚಿತಮುಮಪ್ಪ ವಿವಿಧ ತೋರಣಂಗಳಂ ನುಸುಳುತ್ತುಂ ಬಂದು.

ಕಂ॥ ನಾನಾವಸ್ತುವಿತಾನದೆ ।
ನಾನಾನೃಪಕುಳಜಯಾಂಗನಾಪರಿಣಯನಾ ॥
ಸ್ಥಾನಮೆನಿಸಿದ ಜಯಪ್ರ ।
ಸ್ಥಾನಶ್ರೀಶಿಬಿರಮಂ ಮಹೀಪತಿ ಪೊಕ್ಕಂ ॥ ೧೮ ॥

ವ॥ ಪೊಕ್ಕಂದಿನ ದಿವಸಮಲ್ಲಲ್ಲಿ ವಲ್ಲಭತುಂಗವಿಜಯಗಜಸಂಚಯಕ್ಕೆ ತಕ್ಕ ಪಲ್ಲಣದ ಬಿಸುಗೆಯ ಮೊಗಮಡೆದ ಗುಡಿನ ದಳೆವಡಿಕೆಯುಂ ತೋರ್ಪ ಸಾಹಣಮೆಗ್ಗಡೆಗಳ ಸಂಸರ್ಗದೊಳಂ, ಅಸಿ ಮುಸಲ ಕಣಯ ಕಂಪಣ ಗದಾ ದಂಡ ಕೋದಂಡ ತೋಮರಾದ್ಯಾಮುಕ್ತಾಮುಕ್ತ ಪಾಣಿಮುಕ್ತಯಂತ್ರಮುಕ್ತಂಗಳಪ್ಪ ನಿಜನಿಶಿತ ನಿಖಿಳಾಯುಧಂಗಳಂ ವಿಳೋಕಿಪಕುತೂಹಳದೊಳಂ ಹರಿಕರಿಕರೇಣುವೇಸರಾಂದೋಳಶಿಬಿಕಾದಿಯಾನಸ್ಥಾನಮುಮಂ ತಾನೆ ನಿರವಿಸಿ ನಿಜಾಂತಃಪುರವಿಳಾಸಿನೀಜನಕ್ಕಂ ಪಸಾಯಿತವರ್ಗಕ್ಕಂ ಎಸೆವ[illegible]ಪ್ರಸಾದರಸವಿನೋದದೊಳಮಿರ್ದು ಮಱುದೆವಸಂ ಮಾರ್ತಂಡಮಂಡಲೋ[illegible]ಯದೊಳ್ ವಿಚಿತ್ರಕ್ರಿಯಾನಿಯಾಮನಿರ್ವರ್ತನಾನಂತರಂ ಪ್ರಯಾಣೋತ್ಸುಕನಾಗಿ.

ಚಂ॥ ಕೃತಯುಗಚಕ್ರವರ್ತಿ ಭರತೇಶ್ವರನಂ ತನುಬದ್ಧವಾಜಿ ರಾ ।
ಜಿತಘಳಭೂಜದಂತೆ ಧೃತಭಾಸುರಹೇತಿಸಹಸ್ರ ಮರ್ಕನಂ ॥
ತತಿಧೃತರಶ್ಮಿ ರತ್ನಗಣದಂ ತಸಮಶ್ರಿತಸೂನ ಮೀಶನಂ ।
ತತಿಶಯಕೇತುಶೋಭಿ ನಭದಂತೆನೆ ರಂಜಿಪ ತೇರ ನೇಱಿದಂ ॥ ೧೯ ॥

ವ॥ ಅಂತು ಜಯಮನೋರಥಾರೂಢಂ ರಥಾರೂಢನಾಗಿ ಸಹಾಯರಾಜನ್ಯರಾಜಿವೆರಸು ಅಪಾರಪರಿವಾರಪರಿವೃತಂ ಪ್ರಸ್ಥಾನಶಿಬಿರನಿಳಯದಿಂ ತಳರ್ವುದುಂ.

ಉ॥ ಆಂಕೆಯ ಗಂಡ ನಾವ ನುಱಿದೀನಡೆತಂದನೆ ವೀರವೈರಿವ ।
ಜ್ರಾಂಕುಶ ನಿತ್ತು ತೆತ್ತು ಬೆಸಕೆಯ್ದು ಬರ್ದುಂಕಿ ಮರಾತಿಗಳ್ ಭಯಾ ॥
ತಂಕದಿ ನೆಂದು ಸಾಱುವವೊಲಾಯ್ತು ಘನಧ್ವನಿತಾಭಿರಾಮನಾ ।
ಮಾಂಕಿತಕಾಹಳಂ ವಿಜಯದೋಹಳ ಮಾತ್ತಜಗತ್ಕುತೂಹಳಂ ॥ ೨೦ ॥

ವ॥ ಆಗಳಾನಿನಾದಮಂ ಕೇಳಲೊಡಂ.

ಕಂ॥ ಸಮುದೀರ್ಣಘೂರ್ಣಿತಾರ್ಣವ ।
ಸಮ ಮಾದು ದನೂನಯಾನಸರಭಸಜನಸಂ ॥
ಭ್ರಮಕಳಕಳದಿಂ ನೃಪವಿ ।
ಕ್ರಮಲಕ್ಷ್ಮೀರತ್ನಹಸ್ತಕಟಕಂ ಕಟಕಂ ॥ ೩೧ ॥

ವ॥ ಅಂತೆತ್ತಿ ತಳರ್ವುದುಂ.

ಮ॥ ಹರಿಹೇಷಾಧ್ವನಿ ಗಂಧಸಿಂಧುರಘಟಾಘಂಟಾಸ್ವನಂ ಸ್ಯಂದನೋ ।
ತ್ಕರಚೀತ್ಕಾರರವಂ ಭಟೋದ್ಭಟರಟತ್ಕೋಳಾಹಳಂ ಶಂಖಪು ॥
ಷ್ಕರಭೇರೀ ಕಹಳಾಮೃದಂಗಬಹಳಪ್ರಧ್ವಾನ ಮಾಘೂರ್ಣದಿ ।
ಕ್ಕರಿಕರ್ಣಾಂತರ ಮಾಗೆ ನೀಳ್ದುದು ನೃಪಶ್ರೀಜೈತ್ರಯಾತ್ರೋತ್ಸವಂ ॥ ೩೦ ॥

ಚಂ॥ ಬಳೆದುದೊ ಭೂತಳಂ ಬೆಸಲೆಯಾಯ್ತೊ ದಿಶಾವಳಿ ಮೇರೆದಪ್ಪಿತೋ ।
ಜಳಮಯಮಾಗಿ ವಾರ್ಧಿ ಭುವನತ್ರಯವಾಸಿಗಳೆಲ್ಲ ಮಿಳ್ಳಿಗೇ ॥
ಗಳೆ ನೆರನಾಗಿ ಬಂದು ನಡೆವಂದವೊ ಪೇೞಿಮೆನಲ್ಕಗುರ್ವ ನಾ ।
ಳ್ದಳವಿಗಳುಂಬ ಮಾದುದು ಬಳಪ್ರಚಳಂ ಜಯತುಂಗದೇವನಾ ॥ ೩೨ ॥

ವ॥ ಇಂತು ಸಕಳಕ್ಷೋಣೀತಳಕ್ಷೋಭಕಾರಿ ಯಾಗಿ ನಡೆವಲ್ಲಿ.

ಮ॥ ಭರದಿಂ ಶೇಷನ ನೆತ್ತಿ ಪೊತ್ತಿ ಪೊಗೆಯಲ್ಕುಚ್ಛ್ವಾಸದಿಂ ದುರ್ವಿಗು ।
ಬ್ಬರಿಪುದ್ದಾಮನಿಕಾಮಧೂಮಚಯ ಮೆಂಬಂತಾಗಿ ಮಾಣ್ದಿರ್ದುದೇ ॥
ಪರತೇಜಸ್ವಿಯ ನೇಕೆ ಸೈರಿಪು ದಿದೆಂಬಂತುಷ್ಣರುಗ್ಬಿಂಬಡೆಂ ।
ಬರಮಂ ಪೊೞ್ದುದು ತದ್ಭಟಪ್ರಬಳಪಾದೋದ್ಧೂತಧೂಳೀಚಯಂ ॥ ೩೪ ॥

ವ॥ ಮತ್ತಂ.

ಮ॥ ಅದು ಸನ್ಮಾರ್ಗವಿಶುದ್ಧಿಯಂ ಕೆಡಿಸಿತಾಶಾಂತಸ್ಫುಟಸ್ವಚ್ಛಭಾ ।
ವದ ಪೆಂಪಂ ಪೆಱಗಾಗಿಸಿತ್ತು ಜನಸಮ್ಯಗ್ದರ್ಶನಜ್ಞಾನಸಂ ॥
ಪದಮಂ ಕೀೞ್ಪಡಿಸಿತ್ತು ತಾಂ ಜಡಧಿಗಳ್ಗಂತಸ್ಥ ಮಾಗಿರ್ದುದೆಂ ।
ಬಿದು ಯುಕ್ತೋಕ್ತಿ ಕುಮಾರ್ಗನಿರ್ಗತರಜೋಜಾಳಕ್ಕಿದಾಶ್ಚರ್ಯ ಮೇಂ ॥ ೩೫ ॥

ಚಂ॥ ಪೆಸರ ನರೇಂದ್ರನಂದನರ ಚಾಮರವಾಯು ಕಳಲ್ಚೆ ಸಾಮಜ ।
ಪ್ರಸರದ ಕರ್ಣತಾಳಮರುತಂ ಮರಳೊತ್ತೆ ಮದಾಂಬುಶೀಕರಂ ॥
ಪಸರಿಸಿ ಪೀರೆ ವಾಜಿಗಳ ಲೋಳೆಯ ಪೇನವಿತಾನ ಮೀಂಟೆ ನಿ ।
ಶ್ವಸಿತದ ಗಾಳಿ ಚಾಳಿಸೆ ತೆರಳ್ಗಡಿಗಳ್ಗಿತು ಧೂಳಿಜಾಳಮುಂ ॥ ೩೬ ॥

ಕಂ॥ ಕರಿಯ ಮದಪಂಕಜಳ ಮಾ ।
ವರಿಸಿದ ವಾಹಿನಿಯೊಳಲೆಯೆ ಮಾರುತರಜಕಂ ॥
ಪರೆದ ರಜದಿಂದೆ ಮಾಸಿದ ।
ಹರಿದಂಬರ ಮೆಯ್ದೆ ಜಲಕನಾಯ್ತಿದು ಚಿತ್ರಂ ॥ ೩೭ ॥

ವ॥ ಅಂತು ಜಗತೀದಿಗಂತಗಗನತಳವಳಯ ಮತಿವಿವಿಧಪಾಂಸುಪಟಲ ಮಾಗೆ.

ಕಂ॥ ಶತ್ರುಕ್ಷತ್ರಿಯಮುಖಶತ ।
ಪತ್ರಗ್ಲಾನಿಯಿ ನತುಚ್ಛನೃಪಕಟಕಮಹಾ ॥
ಯಾತ್ರಾವಿಳಾಸಚಂದ್ರಿಕೆ ।
ನೇತ್ರೋತ್ಪಳಶುಭದ ಮಾಯ್ತು ನೋೞ್ಪರ್ಗನಸುಂ ॥ ೩೮ ॥

ವ॥ ಆಗಳಲ್ಲಿ.

ಮ॥ ಮುದದಿಂ ಯಾನವಿಳಾಸ ಮೊಪ್ಪೆ ಮೆಱೆದರ್ ತಂತಮ್ಮ ಸಂಪತ್ತಿಯಂ ।
ಕದನೋಚ್ಚಂಡಭುಜರ್ ಮಹಾಮಹಿಭುಜರ್ ಶೌರ್ಯೋಗ್ರಧೀಮಂತ ರಂ ॥
ಕದ ಸಾಮಂತ ರುದಾರವೀರವಿಭವಶ್ರೀಮನ್ನೆಯರ್ ಮನ್ನೆಯರ್ ।
ಮದವದ್ವೈರಿವಿಮರ್ದನಿರ್ದಯಕನತ್ಕೌಕ್ಷೇಯಕರ್ ನಾಯಕರ್ ॥ ೩೯ ॥

ಮ॥ ಕ್ರಮಸಿಂಹಾಸನವೊಂದೆ ಭೇದಮಿವರ್ಗಂ ಭೂಪಂಗ ಮುಂತಾನಭೇ ।
ದಮು ಮಿಲ್ಲಾತ್ಮವಿಳಾಸದಿಂ ವಿಭವದಿಂ ಸಾಮಗ್ರಿಯಿಂ ತೇಜದಿಂ ॥
ಸಮ ನೆಂಬಂತಿರಶೇಷರಾಜ್ಯಭರಧುರ್ಯರ್ ಪೂರ್ಣಕಾರ್ಯರ್ ನಯಾ ।
ಗಮವಿದ್ಯಾಪುರುಷರ್ ಪ್ರಧಾನಪುರುಷರ್ ಬಂದರ್ ನಿಜಾನಂದದಿಂ ॥ ೪೦ ॥

ಉ॥ ಪೊನ್ನೊಱೆ ಚಿಕ್ಕಗೇಣ್ ಪಳಿಯ ಟೊಪ್ಪಿಗೆ ಬೆಳ್ಮೊಗಸುತ್ತು ನೇಲ್ದ ಗ ।
ಡ್ಡೆ ನ್ನಸುಜೋಲ್ದ ಡೊಳ್ಳು ಪುಟದಂಗಿಗೆ ಶಿಷ್ಯಪರಿಗ್ರಹಂ ಬುಧೋ ॥
ತ್ಪನ್ನಸುಭಾಷಿತಂ ತಱಿಯ ತಣ್ಣೆಳಲಂದಣ ವಾರ್ಯವೇಷಮಂ ।
ಕನ್ನಡಿಸಲ್ಕೆ ಬಂದ ರವನೀಶನಿಯೋಗಿಗ ಳುದ್ಧಭೋಗಿಗಳ್ ॥ ೪೧ ॥

ಚಂ॥ ನಿರುಪಮಲೀಲೆ ಕಣ್ದೆಱೆಯ ಬೆಜ್ಜರು ಮಜ್ಜರು ಮುಂಗರಕ್ಕರುಂ ।
ಕರವಳರುಂ ವಿಳಾಸಿನಿಯರುಂ ನಗೆಕಾಱರು ಮಿಚ್ಚೆಕಾಱರುಂ ॥
ಸರಸವಿನೋದಿಗಳ್ ಸುಮನದೀಮನೆವಕ್ಕಳು? ಮಿರ್ಕ್ಕೆಲಂಗಳೊಳ್ ।
ಬರೆ ನಡೆತಂದರಂದಿರದೆ ರಾಜಕುಮಾರ ರುದಾರ ರಱಿತ್ತಿಯಿಂ ॥ ೪೨ ॥

ಶಾ॥ ಕಾಳವ್ಯಾಳಕರಾಳಚಾಪಚಟುಳಂ ಸದ್ಬಾಣತೂಣೀರಬಂ ।
ಧಾಳಂಬಂ ಗುಣಘೃಷ್ಟಿನಿಷ್ಠುರಕಿಣಭ್ರಾಜದ್ಭುಜಂ ಬಂಧುರಾ ॥
ಭೀಳಜ್ಯಾರವಭೈರವಂ ಸಚಳಿತಂ ವಿದ್ಯಾಟವೀಯಾಟನೋ ।
ಲ್ಲೀಲಂ ಬಿಲ್ವಡೆ ಕಾದಿ ಗೆಲ್ವೊಡೆ ಜವಂಗಂ[1] ಪೊಗ್ಗಿದಲ್ತೆಂಬಿನಂ ॥ ೪೩ ॥

ಪೊಱಗುವ ಪರಿಗೆಯ ರಭಸಂ ।
ಪೊಱಗುವ ವಿಳಯಾಭ್ರಘುಟಿಯ ಘುರ್ಜನ ಪೆನಲಿಂ ॥
ಪೊಱಗುವ ದನಿಗೆಣೆಯೆನೆ ತ ।
ಕ್ಕಱಿಯದೆ ನಡೆತಂದುದಂದು ನೃಪತಳತಂತ್ರಂ ॥ ೪೪ ॥

[1] ಜವಂಗೇಂ ಪೊಗ್ಗ ಪೇಱಿರಿಂಬಿನಂ.

ಕಂ॥ ಕಡಿತಲೆಯುವ ರೇೞ್ಕಿಗೆ ನಾ ।
ಲ್ಕಡಿತಲೆಗೆಟ್ಟೋದ ದೂತರಾರೆನೆ ನಡೆದರ್ ॥
ಕಡಿತಲೆಯು ಭಟರ್ ಮುಂಡದ ।
ಕಡಿ ತಲೆಯೊಡನುರುಳೆ ಪೊಯ್ದು ಕಡುವಿನ್ನಣಿಗರ್ ॥ ೪೫ ॥

ವ॥ ಅಂತುಗ್ರೋಗ್ರತರಸಮಗ್ರಸಾಮಗ್ರಿವೆರಸು ವಿಗ್ರಹೋದಗ್ರಭೂಪಾಗ್ರಿಯಂ ಕತಿಪಯ ಪ್ರಯಾಣಂಗಳಿಂ ಭದ್ರಾವತೀಪುರಮ ನೆಯ್ದಿ.

ಕಂ॥ ಮೇಲೆತ್ತಿ ಮಹಾಪದ್ಮನೃ ।
ಪಾಲಕ ನೆಟ್ಟಿಂದ ನೆಂದೊಡೆಗಿದೋಡಿದ ನಾ ॥
ಲೋಲಬಲಂ ಗತಭುಜಬಲ ।
ನಾಲಾಪಂಗೆಟ್ಟು ಬಿಟ್ಟವಂ ಗಜಕರ್ಣಂ ॥ ೪೬ ॥

ವ॥ ಆಗಳವನಖರ್ವಚಾತುರ್ಬಲಮನೆಟ್ಟಿಬಿಟ್ಟು ಸರ್ವಸ್ವಮಂ ಸೂರೆಗೊಂಡು ಗಜಕರ್ಣನಂ ಪಿಡಿವೊಲಂಗೊಂಡು ಜಯಶ್ರೀಯಂ ಕೈಕೊಂಡು ಭದ್ರಾವತೀಪುರಮಂ ಪುಗುವಲ್ಲಿ.

ಮ॥ ಲಲಿತೋತ್ತುಂಗವಿಳಾಸದೇವಭವನವ್ರಾತಂಗಳೊಳ್ ನಿಂದು ನಿ ।
ರ್ಮಲಹರ್ಮ್ಯಂಗಳ ನೇಱಿ ಸೌಧಶಿಖರಪ್ರಾಗ್ಭಾಗಮಂ ಪತ್ತಿ ಪಾ ॥
ಗಲ[ನಾ]ಶ್ರೈಸಿ ನಿಜಾಂಗಸಂತತಿಗೆ ಸಾರ್ದಟ್ಟಾಳಮಂ ಮೆಟ್ಟಿ ನೋ ।
ೞ್ಪ ಲತಾತನ್ವಿಯ ರಂಬರೇಚರಿಯ ರೆಂಬಾಶಂಕೆಯಂ ಮಾಡಿದರ್ ॥ ೪೭ ॥

ವ॥ ಅಂತು ತಂತಮ್ಮ ಬಹುವಿಧವ್ಯಾಪಾರಂಗಳಂ ಪರಿಹರಿಸಿ ಪರಿತಂದು ಪುರಮಶೇಷಪುರಂಧ್ರೀನಿಕರಮಯಮಾದುದೆಂಬಿನಂ ನೆರೆದು ನೆರವಿಗೊಂಡು ಕೌತುಕಂಗೊಂಡು ಕಾಮರಾಗಸಾಗರದ ಬಹಳಲಹರೀಸಹಸ್ರಂಗಳೆನಿಪನೇಕಭಾವಂಗಳುದಯಿಸೆ ಬಯಸಿ ನೋೞ್ಪ ನಗರೀನಾರೀಕದಂಬಕದ ನಗೆಮೊಗದ ಕಾಂತಿಮೃಗಧರನ ಚೆಲ್ವಂ ತಗುಳ್ಚೆಯುಂ, ಕಡೆಗಣ್ಣ ಕಾಂತಿಯೆ ಚೊನ್ನದಚೆನ್ನನೀಯೆಯುಂ, ಕಂಕಣದ ನುಣ್ಚರದ ನುಣ್ಪು ಕಳಕಂಠಸ್ವನಮ ನವಟಯ್ಸೆಯುಂ, ಸುಲಿಪಲ್ಲ ಪೊಳೆಪು ಮಲ್ಲಿಕಾಕುಟ್ಮಳಮ ನುಜ್ಜ್ವಳಿಸೆಯುಂ, ಭದ್ರಾವತೀಪುರದ ಪರಮೋತ್ಸವಕ್ಷೋಭಶೋಭೆಯಂ ಬಸಂತಸಮಯಮನೊಳಗುಮಾಡಿ ಯುಧಿರಾಜಂ ರಾಜಮಾರ್ಗದೊಳಗಣಿಂ ದಗಣ್ಯಪುಣ್ಯಾಂಗನಾಕರಕಮಳವಿಕೀರ್ಯಮಾಣಮಂಗಳಲಾಜಾಕ್ಷತಂಗಳುಮಂ, ಕುಸುಮೋಪಹಾರಂಗಳುಮಂ, ನಿರೀಕ್ಷಿಸುತುಂ ನಡೆತಂದು ನವಾಮ್ರಚಂಪಕಾಶೋಕಪಲ್ಲವೋಲ್ಲಸಿತಮಣಿತೋರಣಂಗಳೊಳಂ,ಪರಿಮುಕ್ತಮುಕ್ತಾದಾಮಕಮನೀಯ ವಿಚಿತ್ರನೇತ್ರದೇವಾಂಗವಿತಾನದೊಳಂ ಆ ಬದ್ಧರತ್ನರಾಜಿವಿರಾಜಿತಶಾತಕುಂಭಕುಂಭಂಗಳೊಳ, ಮಾಲಿಖಿತ ವಿಚಿತ್ರಚಿತ್ರಭಿತ್ತಿಗಳೊಳ, ಮಾಮೋದಿತಮೃಗಮದಕರ್ದಮಾಲಿಪ್ತಮಣಿಕುಟ್ಟಿಮರಚಿತಕರ್ಪೂರಪರಾಗರಂಗವಲ್ಲೀ ವಿತಾನದೊಳ,ಮಾಕೀರ್ಣಸುವರ್ಣಕಲಶಶೋಭಿತಶಿಖರಂಗಳೊಳೆಸೆವ ಸೌಧಾಲಯಂಗಳ ನೊಳಕೊಂಡ ರಾಜಭವನದ ರಾಜಾಂಗಣಮಂ ಪೊಕ್ಕು.

ಕಂ॥ ಸಮದ (ಜಯ) ದ್ವಿಪದಿಂ ದಿೞಿ ।
ದು ಮಹಾಪದ್ಮಾವನೀಶ್ವರಂ ತಾಂ ಕಱುವಮಾ ॥
ಡೆಮ ನೇಱಿದ ನನುನಯದಿಂ ।
ಕಮಳಪ್ರಿಯ ನೇಱುವಂತಿರುದಯಾಚಲಮಂ ॥ ೪೮ ॥

ವ॥ ಈ ಪ್ರಕಾರದಿಂ ಕಱುವಮಾಡದುಪ್ಪರಿಗೆಯ ನೇಱಿ.

ಕಂ॥ ನಾನಾಮಂಗಳವಸ್ತು ವಿ ।
ತಾನದಿ ನೊಪ್ಪುವ ಜಯಾಂಗನಾಪರಿಣಯನಾ ॥
ಸ್ಥಾನ ಮೆನಿಸಿರ್ಪ ಜಯುವ ।
ರ್ಮಾನೂನಾವಾಸಮಂ ಮಹೀಶಂ ಪೊಕ್ಕಂ ॥ ೪೯ ॥

ವ॥ ಪೊಕ್ಕು ಮಾತುಳಂಗಂ ಮಾತುಳಾನಿಗಂ ತುೞಿಲ್ಗೆಯ್ವುದು ಮವರನೇಕನಲ್ವರಕೆಗಳ್ವೆರಸು ಪರಮೋತ್ಸವಪರಂಪರೆಯ ನೆಯ್ದಿ ಮಱುದೆವಸಂ ಮೌಹೂರ್ತಿಕರಂ ಬರಿಸಿ ತಾಂಬೂಲಮಾಲ್ಯಾದಿಪುರಸ್ಸರಂ ವಿವಾಹಲಗ್ನಮಂ ಬೆಸಗೊಳ್ವುದುಂ, ನವಗ್ರಹಂಗಳೆಲ್ಲಂ ಸ್ವೋಚ್ಚಸ್ವಕ್ಷೇತ್ರಮಿತ್ರಸ್ಥಾನಂಗಳೊಳೇಕಾದಶಫಳಪ್ರದಂಗಳಾಗೆ ಲಗ್ನಮಂ ನಿಶ್ಚೈಸಿ ಪೇೞ್ವುದು ಮಾಕ್ಷಣದೊಳೆ ಪುರದೊಳಷ್ಟಶೋಭೆಯಂ ಮಾಡಲುಂ ವಿವಾಹಮಂಟಪಮಂ ಸಮೆಯಿಸಲುಂ ಗೃಹಮಹತ್ತರಂಗೆ ಬೆಸಸುವುದುಂ.

ಚಂ॥ ಪುರಜನಮಾಗಳೊಂದಿ ಪರಮೋತ್ಸವದಿಂ ವರಮಾಲ್ಯಮಂಜುಳಾ ।
ಭರಣನವಾಂಗರಾಗವಿವಿಧಾಂಶುಕಲೀಲೆಯ ನೆಯ್ದಿ ತಾಳ್ದಿ ತಾ ॥
ಪುರದೊಳಗುಣ್ಮಿ ಪೊಣ್ಮೆ ಕೃತಮಂಗಳತೂರ್ಯನಿನಾದ ಮೆತ್ತಲುಂ ।
ಸುರುಚಿರತೋರಣಂ ತುಱುಗೆ ತಳ್ತಿರೆ ನೇತ್ರವಿಚಿತ್ರಕೇತನಂ ॥ ೫೦ ॥

ವ॥ ಅಂತು ಮಲ್ಲದೆಯುಂ ಪದ್ಮರಾಗದ ನೆಲೆಗಟ್ಟನೊಳಂ, ಪಳುಕಿನ ಕಂಬಂಗಳೊಳಂ, ಹರಿನೀಲದ ನಾಗವೇದಿಕೆಯೊಳಂ, ವೈಡೂರ್ಯದ ತೊಲೆಯೊಳಂ, ಪವಳದ ಜಂತೆಯೊಳಂ ಕರ್ಕೇತನದ ಸಾಲಭಂಜಿಕೆಗಳೊಳಂ, ಗೋಮೇಧಿಕದ ಭಿತ್ತಿಯೊಳಂ, ಚಂದ್ರಕಾಂತದ ಗವಾಕ್ಷಂಗಳೊಳಂ, ಪುಷ್ಯರಾಗದ ಮೊಗಸಾಲೆಗಳೊಳಂ, ಕೋದ ಮುತ್ತಿನ ಸೂಸಕದೊಳಂ, ಚೆಂಬೊನ್ನ ತಿಂಗಿಣಿಯೊಳಂ, ಚೀನದ ದೇವಾಂಗದ ನೇತ್ರದ ಮೇಲ್ಕಟ್ಟನೊಳಂ, ವಿರಚಿಸಿದ ವಿವಿಧಕುಸುಮದಾಮಂಗಳೊಳಂ, ಸರಸಸಹಕಾರನಾರಂಗ ಮಾತುಳುಂಗನಾಳಿಕೇರಕದಳೀಫಲಾವಳಿಗಳೊಳಂ, ಕತ್ತುರಿನೀರ ಚಳೆಯದೊಳಂ, ಬಿಡುಮುತ್ತಿನ ರಂಗವಲ್ಲಿಯೊಳಂ, ವಿಚಿತ್ರಾಂಶುಕವಿವಿಧಧ್ವಜಂಗಳೊಳಂ, ಬಹುವಿಧನೂತ್ನರತ್ನತೋರಣಂಗಳೊಳಂ ನೆಱೆದುದು.

ಕಂ॥ ಶತಮುಖ ನಿಱ್ಲಿರಿಸಿಟ್ಟಂ ।
ಕೃತಮತಿ ನುತಖುತುವಿಮಾನಮಂ ದೈತ್ಯರ ವಿ ॥
ಸ್ಮೃತಬಾಧೆಗಟಿಕ್ಕಿ ತಾನೆನ ।
ಲತಿಶಯ ಮಾದತ್ತು ಪರಮಪರಿಣಯನಗೃಹಂ ॥ ೫೧ ॥

ವ|| ಅನಂತರಂ ಮಹಾಪದ್ಮರಾಜಂ ಮಾಂಗಲ್ಯಪ್ರಸಾಧನೋಚಿತಾಲಂಕೃತ ನಾದಾಗಳ್.

ಕಂ|| ಪೇರುರ ಮೆಂಬಬ್ಧಿನಿಯೊಳ್ ।
ರಾರಾಜಿಪ ಪಿರಿಯ ಸಿರಿಯ ತರಳೇಕ್ಷಣನೀ ॥
ಹಾರದ ರುಚಿ ಯೆನೆ ಸುರುಚಿರ ।
ಹಾರಂ ಸೊಗಯಿಸಿತು ತನ್ನರೇಂದ್ರನ ಕೊರಲೊಳ್ ॥ ೫೨ ॥

ಮಿಸುಗುವ ಮಣಿಮಯಮಂಡನ ।
ವಿಸರಪ್ರಭೆಯೊಳ್ ಪಳಂಚಿ ತನುರುಚಿ ಚೆಲ್ವಂ ॥
ಪಸರಿಸಿ ದೆಸೆದೆಸೆಯೊಳ್ ಕರ ।
ಮೆಸೆದಿರಲೆಸೆದಂ ನರೇಂದ್ರಚೂಡಾರತ್ನಂ ॥ ೫೩ ॥

ವ॥ ಮತ್ತಮಿತ್ತ ಚತುರಚತುರಿಕೆಯರಪ್ಪ ಪರಿಚಾರಕಿಯರುಂ, ವಿದಗ್ಧಸೀಮಂತಿನೀಕದಂಬ ಮುಂ ಭಾನುಮತಿಯಂ ಮಂಗಳವಸದನಂಗೊಳಿಸಲವಸರಂಬಡೆದರು.

ಮ|| ನವನೀಳಾಭರಣಾಂಶುಗಳ್ ಮೃಗಮದವ್ಯಾಳೇಪಮಂ ಮೌಕ್ತಿಕಾ ।
ನಿವಹಾಳಂಕೃತಿರಶ್ಮಿಗಳ್ ಮಳಯಜವ್ಯಾಲೇಪಮಂ ಪದ್ಮರಾ ॥
ಗವಿಭೂಷಾಕಿರಣಂಗಳಾರ್ದ್ರಕುಸುಮವ್ಯಾಲೇಪಮಂ ಬೀಱಿ ಬೀ ।
ಱಿ ವಧೂವೃಂದಕ ಮಂದು ಬಂದು ಮದೆಪಿಂ ಕೆಯ್ಗೆಯ್ಸಿದರ್ ದೇವಿಯಂ ॥ ೫೪ ॥

ಕಂ॥ ಪೊಸಮುತ್ತಿನ ತಲೆದುಡುಗೆಯ ।
ಪಸರಿಪ ಕಾಂತಿಯ ದಗುಂತಿ ಮಾಲೆವೊಲಿರೆ ಕಂ ॥
ಡು ಸಮಂತು ಮುಗ್ಧೆಯರ್ ಮುಡಿ ।
ಯಿಸರಿ ಕೆಲರ್ ಮುಂಚಿ ಮುಡಿದರೆಂಬೀಭ್ರಮೆಯಿಂ ॥ ೫೫ ॥

ಕಟಕಂಗಳಿಂ ಸುರಾದ್ರಿಯ ।
ಕಟಕಂಗಳ ತೆಱದೆ ರುಚಿರಕಲ್ಯಾಣ ಪ್ರಾ ॥
ಕಟಕರ ಮೆಸುತ್ತು ಮರೆಬರ್ ।
ಕುಟಿಳಾಳಕಿಗೊಲ್ದು ಕಂಕಣಂಗಳ ನಿಟ್ಟರ್ ॥ ೫೬ ॥

ಕುಚಕೋಕಂಗಳ್ ದಶನಾಂ ।
ಶುಚಳಚ್ಚಂದ್ರಿಕೆಯಿ ನಗಲದಂತು ಮುಖಾಗ್ರ ॥
ಪ್ರಚುರಶ್ರೀಬಿಸಲತೆಯನೆ ।
ಖಚಿಯಿಸಿದವೊಲಿಕ್ಕೆ ಹಾರ ಮೆಸೆದುದು ಕೊರಲೊಳ್ ॥ ೫೭ ॥

ಕಂ|| ಅರುಣಾಧರರುಚಿಯಿ ನಧಃ ।
ಕರಿಸದಿ ರಿನ್ನಿವಳ್ಕ ನೆಂದು ಕಾಲ್ವಿಡಿದಿರ್ಪಂ ॥
ತಿರೆ ಪದ್ಮರಾಗಮಣಿನೂ ।
ಪುರಮಂ ನೃಪವಧುಗೆ ತುಡಿಸಿದಳ್ ಮತ್ತೊರ್ವಳ್ ॥ ೫೮ ॥

ಏಱಿಸದಿಕ್ಷುಶರಾಸನ ।
ವೇಱಿಸಿದವುದೀಗಳಂಗಭವನಿಂದೆನೆ ನೀ ॥
ರೇಱಿದ ಮಂಗಳವಸದನ ।
ಮೇಱಿ ಮನಂಗೊಳಿಸಲಾರ್ತುದಾಕೋಮಳೆಯಾ ॥ ೫೯ ॥

ವ|| ಅಂತು ಕೆಯ್ಗೆಯ್ಸಿ ಭಾನುಮತಿಯುಂ ಮಂಗಳಾಚರಣೋಚ್ಚಾರಣರವಂಗಳುಂ, ಮಂಗಳ ಗೇಯರವಂಗಳುಂ, ಮಂಗಳತೂರ್ಯಸ್ವನಂಗಳುಂ, ಪುಣ್ಯಾಹಘೋಷಂಗಳು ಮೆಸೆಯೆ ವೃದ್ಧಕಂಚು ಕಿಪುರಸ್ಸರ ಮೊಡಗೊಂಡುಬಂದು ವಿವಾಹಮಂಟಪಮಧ್ಯಸ್ಥಿತವೇದಿಕಾತಳಮ ನಳಂಕರಿಸಿದ ಮಣಿ ಮಯಪೀಠದೊಳಿಸಿರಿ ಮಹಾಪದ್ಮರಾಜನಂ ಬರಿಸಿ.

ಕಂ|| ಪುರಿಪುಂಡರೀಕಿಣೀಶಂ ।
ಗುರುತರಶೌರ್ಯಾಂಬುನಿಧಿಗೆ ಜಯವರ್ಮನೃಪಂ ॥
ಪರಮೋತ್ಸವದೆ ಪುರೋಹಿತ ।
ಪುರಸ್ಸರಂ ತಾನೆ ಬಂದು ಕೆಯ್ನೀರೆಱೆದಂ ॥ ೬೦ ॥

ರತಿಪತಿಯುಂ ರತಿಯುಂ ಜನ ।
ನುತರಕ್ತಾಶೋಕಮಹಿಜಮಂ ಬಲಗೊಳ್ವಂ ॥
ತತಿಶಯದಿಂ ಬಲಗೊಂಡರ್ ।
ಕ್ಷಿತಿಪತಿಯುಂ ಸತಿಯು ಮೊಗೆದ ಹೋಮಾನಲನಂ ॥ ೬೧ ॥

ಭೂಪತಿ ತಳೆದಂ ಪ್ರಗುಣಗು ।
ಣೋಪೇತಂ ಭಾನುಮತಿಯ ನುತ್ಸವತೂರ್ಯಂ ॥
ವ್ಯಾಪಿಸೆ ದೆಸೆಯಂ ನೃಪತಿ ಮ ।
ಹಾಪದ್ಮಂಗಿತ್ತು ಪೆರ್ಮೆಯಂ ಜಯವರ್ಮಂ ॥ ೬೨ ॥

ವ|| ಅಂತು ವಿವಾಹೋತ್ಸವಂ ಸಕಳಜನಮನೋತ್ಸವಮಾಗೆ ತದನಂತರ ಮನಂತಸಾಮಂತ ಸೀಮಂತಿನೀಪ್ರಮುಖವೃದ್ಧಕಂಚುಕಿಸಹಿತಂ ಪುರಪುರಂಧ್ರಿಯರುಂ, ಪುರೋಹಿತಪುರಸ್ಸರಂ ಧರಾ ಮರರುಂ ಪರಸಿ ಸೇಸೆಯನಿಕ್ಕೆ ಮಂಗಳಪಾಠಕರ್ ನಿಂದು.

ಕಂ|| ಆಯುಂ ಶ್ರೀಯುಂ ವಿಜಯಮು ।
ಮಾಯತಿಯುಂ ನಿಮ್ಮೊಳೊದವಿ ಸುಸ್ಥಿರಮಪ್ಪಂ ॥
ತೀಯುತ್ತುಮಿರ್ಕೆ ಕಾಂಚನ ।
ಕಾಯಂ ಪ್ರಭು ಶಾಂತಿ ನಿನಗೆ ವಿಭುಶಾಂತಿಜಿನಂ ॥ ೬೩ ॥

ಮ|| ದಿನಪಾಬ್ಜಾರಬುಧಾಮರೇಜ್ಯಸಿತಮಂದಾಹೀಂದ್ರಕೇತುವ್ರಜಂ ।
ನಿನಗೇಕಾದಶರಕ್ಕೆ ಸೂಕ್ತಿಸತಿಯುಂ ಶ್ರೀಕಾಂತೆಯುಂ ಜೈನಶಾ ॥
ಸನದೇವೀಕುಳಮುಂ ಸಮಂತು ಸಮಸಂದಿಷ್ಟಾರ್ಥಮಂ ಮಾಱಿಕ್ಕಿ ಕಾಂ ।
ತ ನೃಲೋಕಸ್ತುತ ನಿರ್ನ್ಮೊಳಿಂದು ವಿಜಯಂ ಭದ್ರಂ ಶುಭಂ ಮಂಗಳಂ　　॥ ೬೪ ॥

ಮಸ್ರ|| ಸ್ಥಿರಲಕ್ಷ್ಮೀಲಾಸ್ಯಲೀಲಾಭವನ ಮಗಲ್ದುರಂ ಭಾರತೀಚಂದ್ರಿಕಾಭಾ ।
ಸುರಚಂದ್ರಂ ಚಾರುವಕ್ತ್ರಂ ಸ್ಮರವಿಜಯವಧೂಕೇಳಿಶೈಳಂ ಭುಜಾಗ್ರಂ ॥
ಪರಮಶ್ರೀಲಕ್ಷ್ಯಸಲ್ಲಕ್ಷಣಮಣಿಗಣಗರ್ಭಾರ್ಣವಂ ಮೂರ್ತಿ ಯೆಂಬಂ ।
ತಿರೆ ಷೆಂಪಂ ತಾಳ್ದಿದಂ ನಾಡ್ಪ್ರಭು ಗುಣನಿಳಯಂ ಶಾಂತ ನುತ್ಕೀರ್ತಿಕಾಂತಂ　　॥ ೬೫ ॥

ಚಂ|| ಪರಹಿತದೊಳ್ ನಯಕ್ರಮದೊಳಾಯತಿಯೊಳ್ ಸುಚರಿತ್ರಯೊಳ್ ದಯಾ ।
ಪರಿಣತಿಯೊಳ್ ಕಳಾವಿಭವದೊಳ್ ಭುಜವಿಕ್ರಮದೊಳ್ ಗಭೀರದೊಳ್ ॥
ಗರಿಮೆಯೊಳೂರ್ಜಿತಪ್ರಭುತೆಯೊಳ್ ಪ್ರಭುಮಂಡನ ಶಾಂತಿವರ್ಮ ಸಾ ।
ಕ್ಷರಸಮಯಾವಳಂಬ ನಿನಗಾರ್ ದೊರೆ ಮಾನವರೀಧರಿತ್ರಿಯೊಳ್　　॥ ೬೬ ॥

ಮ|| ಜನಕಂ ವಿಶ್ರುತವಂದಿವೃಂದಜನಕಂ ಬಪ್ಪಂ ಲಸನ್ಮಾತೆ ಮಾ ।
ನಿನಿ ಮಾದಾಂಬಿಕೆ ಭಾಮೆ ಭಾಮಲೆ ಜಿನೇಂದ್ರಂ ದೈವ(ವ)ಮ್ಮಮ್ಮ ಕೀ ॥
ರ್ತಿನಿದಾನಂ ನೃಪಕಾರ್ತವೀರ್ಯ ನಹಿತಕ್ಷ್ಮಾಭೃದ್ಬೃಹದ್ವಜ್ರ ನಾ ।
ಳ್ದ ನೆನಲ್ ನಾಡ್ಪ್ರಭು ಶಾಂತಿವರ್ಮನ ನದಿನ್ನೇವಣ್ಣಿಪಂ ಬಣ್ಣಿಪಂ　　॥ ೬೭ ॥

ಕಂ|| ಸಾಸಿರದೈತ್ಯಾಧಿಪರೆ ।
ಣ್ಬಾಸಿರ ಖಚರೇಂದ್ರ ರೀವ ಗುಣದೊಳ್ ಪದಿನೆ ॥
ಣ್ಬಾಸಿರರವಿನಂದನರೇಂ ।
ಪಾಸಟಿಯಾದಪರೆ ಭವ್ಯ ಚೂಡಾಮಣಿಯೊಳ್　　॥ ೬೮ ॥

ಪೊಳೆವಮೃತಕರನ ಕಿರಣದ ।
ಬೆಳವಿಗೆ ಮಚ್ಚರಿಸುವಂತಿ ರೆಣ್ದೆಸೆಗಂ ಬ ॥
ಳ್ವಳನೀಳ್ದು ಬಳೆದು ಚೆಲ್ವಂ ।
ತಳೆದುದು ಸಲೆ ಶಾಂತಿವರ್ಮಕೀರ್ತಿಪ್ರಸರಂ　　॥ ೬೯ ॥

ವ॥ ಎಂದು ಮಂಗಳವೃತ್ತಂಗಳೆ ನೋದಿಸುವ ಕವಿಜ(ನನು)ನಾನಲ್ಪಕಲ್ಪದ್ರುಮನ ಚತುರ ವಿತರಣದಿಂ ಸಂತೃಪ್ತರಾದ ರನ್ನಿಗ ಮಿತ್ತಲ್.

ಕಂ|| [1] ಭೂಪತಿ ತಳೆದಂ ಪ್ರಗುಣಗು ।
ಣೋಪೇತಂ ಭಾನುಮತಿಯ ನುತ್ಸವತೂರ್ಯಂ ॥
ವ್ಯಾಪಿಸೆ ದೆಸೆಯುಂ ನೃಪತಿಮ ।
ಹಾಪದ್ಮಂಗಿತ್ತು [2] ಪೆರ್ಮೆಯಂ ಜಯವರ್ಮಂ　　॥ ೭೦ ॥

---

[1] ೬೨ ನೆಯ ಪದ್ಯವೂ ಇದೂ ಒಂದೇ ಆಗಿದೆ.　　[2] ಪೊರ್ದಿದಂ ಜಯವರ್ಮಂ.

* ಕಂ॥ ಸಗರಂ ಪೃಥುಚಕ್ರವರ್ತಿ ।
ಭಗೀರಥಯಯಾತಿನಳಹರಿಶ್ಚಂದ್ರ[ನೃಪ]ರ್ ॥
ನೃಗನಹುಷಬಾಣಬಲಿ ದಶ ।
ಕಂಠರ್ ಪಾಸಟಿಯೆ ನಿನಗೆ ಜಿನೇಂದ್ರ ಚರಣಕಮಲ ಭೃಂಗಾ ॥ ೨೧ ॥

ವ॥ ಅಂತು ಬೀಯದ ಚಾಗದ ಪೆರ್ಮೆಯಂ ಮೆಱೆದು ಮದುವೆಯಂ ಮಾಡಿ ಕತಿಪಯದಿನಂಗಳಿಂ ಮಗಳ ನಳಿಯನುಮಂ ಪುಂಡರೀಕಿಣಿಗೆ ಕಳಿಪಿ ಬರ್ಪರ್ಗಳ್.

ಮ॥ ಕಮಳಾನಂದವ ನುಂಟುಮಾಡಿದುದು ಭಾಸ್ವನ್ಮಂಡಳಾಗ್ರಪ್ರಭಾ ।
ವಮ ನಂಗೀಕರಿಸಿತ್ತುದಗ್ರಧರಣೀ ಭೃದ್ವಾಹಿನೀಜೀವನೋ ॥
ದ್ಯಮಮಂ ಪೀರ್ದುದು ವಿದ್ವಿಷತ್ಕುವಳಯಶ್ರೀಯಂ ಕಳಲ್ಚಿತ್ತದೇ ।
ನೊ ಮಹಾಪದ್ಮನೃಪಪ್ರತಾಪದಹನಜ್ವಾಳೋಷ್ಮಮೋ.ಗ್ರೀಷ್ಮಮೋ ॥ ೨೨ ॥

ಚಂ॥ ನಗಕುಳಕುಂಜರಂ ಜಳಧಿ ಕಾನನ ಮುರ್ವರೆ ಯೆಂಬಿವೆಲ್ಲಮಾ ।
ವಗಮೊಳಗಾದುದೊ ಕುಳಿಶವಹ್ನಿಗೆ ವಾರಿದ............... ॥
..................................................... ।
.................ಗೆತ್ತುದಿಲ್ಲಿ ಖಗಮುಂ ಮೃಗಮುಂ ಪರಿತಾಪದೇೞ್ಗೆಯೊಳ್ ॥ ೨೩ ॥

ಉ॥ ಪುತ್ತಿನ ಬಾಯ್ಗಳಿಂ ಪುಗುವ ಚಂಡಮರೀಚಿಮರೀಚಿ ಧಳ್ಳೆನಲ್ ।
ಕುತ್ತಿದ ಕೊಳ್ಳಿಯಂತೆ ಸುಡೆ ನೆತ್ತಿವಗಲ್ಗಳರಲ್ಗಳಂದದಿಂ ॥
ಪೊತ್ತಿ ಸಿಡಿಲ್ದು ಪಾಱಿದುವು ವಕ್ತ್ರವಿಷಾನಲವಿಸ್ಫುಲಿಂಗ ಮು ।
ಣ್ಮುತ್ತಿರೆ ಕೋಪದಿಂ ವಿಷಧರಂಗಳೊಳೆಂಬಿನ ಮಾನಿದಾಘದೊಳ್ ॥ ೨೪ ॥

ಕಂ॥ ಕೆಂಡದ ಮೞೆ ಕೊಂಡಪ್ಪುದ ।
ಜಾಂಡದಿ ನಿಳೆ ದೂವೆಗಿಚ್ಚು ನುಗುಳ್ದಪ್ಪುದು ದಿ ॥
ಙ್ಮಂಡಲಮಿಂ ದುರಿಗೊಳ್ಳಿಯು ।
ತಂಡದೆ ಕೇರ್ಗಟ್ಟಿತೆನಿಸಿ ತೋಱುತ್ತದೞ್ಕೊಳ್ ॥ ೨೫ ॥

ಉ॥ ತಾಱಿದ ಬಳ್ಳಿ ಮಿಱಿದ ದವಾನಲ ನಾಱಿದ ಬೆಂಚೆ ತಾಯ್ಮಣ ।
ಲ್ದೋಱಿದ ಸಿಂಧು ಬೆಂದೊಡೆದು ಪಾಱಿದ ಬೆಟ್ಟು ಕರಿಂಕುವೋಗಿ ಕ ॥
ರ್ಪೇಱಿದರಣ್ಯಭೂಮಿ ಬೆಮಱಿಱಿದ ದೇಹಿಸಮೂಹ ಮೂಷ್ಮೆಯಂ ।
ಪೇಱಿದ ಭಾನು ಭಾನುಬಿಸುಪೇಱಿದಿಳಾತಳ ಮಿಲ್ಲದೆಲ್ಲಿಯುಂ ॥ ೨೬ ॥

ಕಂ॥ ನಡುವಗಲ ಪುಗಿಲ ಬಿಸಿಲೊಳ್ ।
ಬಿಡೆ ನಾಲಗೆಗಿೞ್ತು ತೇಂಕಿ ತನ್ನಯ ನೆೞಲಂ ॥
ಕಡುಗಪ್ಪಲೆಂದು ಪೊರಳ ।
ಲ್ಕೊಡರಿಸಿ ಮೆಯ್ಯಿಕ್ಕಲಿರ್ದ ವನ್ಯಲುಲಾಯಂ ॥ ೨೭ ॥

---

* ಈ ಪದ್ಯವು ಪ್ರಕ್ಷಿಪ್ತವೆಂದು ತೋರುವುದು. ನಾಲ್ಕನೆಯ ಪಾದದಲ್ಲಿ ಪ್ರಾಸಕ್ಷರವುಕೆಟ್ಟಿರುವುದಲ್ಲದೆ ಮಾತ್ರೆಗಳೂ ಛಂದಸ್ಸಿಗನುಗುಣವಾಗಿಲ್ಲ. ಮೊಗರೇಂ ಪಾಸಟಿಯೆ ನಿನಗೆ ಜಿನಪದರಕ್ತಾ॥ ಎಂದು ತಿದ್ದಬಹುದು.

ಕಂ॥ ನೋಡಿದವೆಂ ಸೀಗು ಮೊಯ್ಕನೆ ।
ತೀಡಿದ ಬಗೆ ಬೇಗು ಮುರಿದೊಡುಗ್ರತೆಯಿಂ ಮಾ ॥
ತಾಡಿದ ಬಾಯ್ ಪೊತ್ತುಗು ಮೆನೆ ।
ನಾಡೆ ಯಗುರ್ವಿಸಿದುದನುಗತೋಷ್ಮಂ ಗ್ರೀಷ್ಮಂ ॥ ೭೮ ॥

ವ॥ ಅಂತೆನಿಸಿದ ನಿದಾಘದೊಳ್ ಬರುತ್ತಿರೆಯಿರೆ ಮುಂದೊಂದೆಡೆಯೊಳ್.

ಕಂ॥ ವನಮಿರ್ದು ದತೆಸುಗಿದು ಜೀ ।
ವನ ಮಂಗ(ಜ)ಲಕ್ಷ್ಮಿಗಿದುವೆ ಪುದಿದೇಱುಂಜ ॥
ವ್ವನ ವಖಿಳಜಗತ್ರಯುಪಾ ।
ವನ ಮೆನೆ ರತಿಯು ನವಲಾಸ್ಯಲೀಲಾಭವನಂ ॥ ೭೯ ॥

ಮ॥ ವನಮಾಲಾಮಿಳಿತಂ ಸುಪರ್ವಲುಲಿತಂ ಸತ್ಕಾಂತಿಪೀತಾಂಬರಂ ।
ಘನಸುಚ್ಛಾಯ ವನಂತಭೋಗನಿಲಯಂ ಲಕ್ಷ್ಮೀಸಮೇತಂ ಸುದ ॥
ರ್ಶನಸೇವ್ಯಂ ಸುಮನಃಪ್ರತಾನನಿಚಿತಂ ತೋಡಾಯ್ತು ಪೇಂದ್ರಂಗೆ ಮ ।
ಜ್ಜನಕಂಗೀಮರ ನೆಂದು ಮಾಮರಕೆ ಕಾಮಂ ಕೊಟ್ಟ ನಾತಿಥ್ಯಮಂ ॥ ೮೦ ॥

ಉ॥ ಕಾದಲರಂ ಪಳಂಚಲೆವ ಪಂಚಶರಕ್ಕದಱಂಕುರಂ (ಪುಣಂ) ।
ಬಾದುದು ಕೆಂದಳಿರ್ ಮಿಸುಪ ಕೆಂಗಱ ಯಾದುದು ಹೂದೊಡಂಬೆ ಪಿ ॥
ಱ್ಕಾದುದು ಕೊಂಬು ಕೋಲಕುಟಿಲತ್ವಮ ನೋಜೆಗೆ ತಿರ್ದಲೊತ್ತುಗೊಂ ।
ಬಾದುದು ಬಟಿದ್ದಿ ನೆಂದು ನಲಿದಂ ನುಡಿದಂ ನಡೆ ನೋಡಿ ಚೂತಮಂ ॥ ೮೧ ॥

ವ॥ ಅದಲ್ಲದೆಯುಂ.

ಮ॥ ಮೊದಲೊಳ್ ಕೂರಿಸಿ ಕೂರ್ತವರ್ ಬಱಕಗಲ್ದಿರ್ದಂತೆ "ಕೊಲ್ ಹಂದಿ ಸ ।
ತ್ತುದು ನಾಯ್ ಸತ್ತುದು ಪಾಪಮಿಲ್ಲ ಪಱಯಿಲ್ಲೆಂ"ದಂಗಜಂ ತೋಳ ನೀ ॥
ಳದ ಪತ್ರಂ ಬರೆದೀಯೆ ಕೊಂಡು ಮಧುಚೌತಂ ಪೂಸಿ ನೇರಿಟ್ಟ ವಾ ।
ರ್ಗದೆ ಕಂಕೆಲ್ಲನಶೋಣಪಲ್ಲವಚಯಂ ಚೆಲ್ವಾದು ಪುದ್ಯಾನದೊಳ್ ॥ ೮೨ ॥

ವ॥ ಅಂತು ನಯನಾನಂದ ಪುಪ್ಪ ನಂದನಮಂ ನೋಡುತ್ತುಂ ಬರ್ಪಲ್ಲಿ ಆತ್ಮೀಯಸುರಭಿನಿಶ್ವಾಸಂಗಳಿಂದ ಮುದ್ಯಾನಮಂ ಸುರಭಿಸುತ್ತುಂ ಪುಷ್ಪಾಪಚಯನಿರತ ರಾಪಲ್ಲಿ.

ಕಂ॥ ರಂಜಿತಮಧುಮಧುಕರಚಯು ।
ಮಂ ಜಿತನಾನಾಪ್ರಸೂನಚಯ(ಮಂ) ಮದವ ॥
ತ್ಕುಂಜರಗಾಮಿನಿ ಪೆಱಳೇ ।
ಱುಂಜವ್ವನೆ ಕೊಯ್ದುಳೊಸೆದು ಪೊಸಮಲ್ಲಿಗೆಯಂ ॥ ೮೩ ॥

ವ॥ ಮತ್ತಮೊಂದೆಡೆಯೊಳವಧಾರಿತವಿದ್ಯಾವಿಳಾಸಿನೀವಿಭ್ರಮೆಯುಮುಪಹಸಿತಪುರಂದರಕಾಮಿನೀ ಸೌಂದರ್ಯರೂಪಕೃತ ಸೌಭಾಗ್ಯವತಿಯು ಮೆನಿಸಿದಾಕೆ.

ಕಂ|| ತರಳತರತಾರ ಹಾರೋ |
ತ್ಕರರಚನೆಗೆ ಸುಟ್ಟದೋಱ ನೀರೇರುಹಬಂ ||
ಧುರಗಂಧಿ ರಮಣನಿಂದಂ |
ಸುರಹೊನ್ನೆಯ ನನೆಯ ನೆಸೆಯೆ ಕೊಯ್ಸಿದಳೊರ್ವಳ್ || ೮೪ ||

ವ|| ಮತ್ತಮೊಂದೆಡೆಯೊಳ್ ಅವಿರಳಕುಸುಮಪರಿಮಳಮುದಿತಮದವದಳಿಕುಲಮೃದುಮಧುರರವದಿಂ ಸುರಭಿತಸಹಕಾರಭೂರುಹಾಂತರದೊಳ್.

ಕಂ|| ಉಪರಿಜಕುಸುಮಮಂ ನೋಪನ |
ನಪೂರ್ವಮಂ ತನಗೆ ಬೇಡೆಲಾಲಿಂಗನಲೋ ||
ಲುಪ ನೆತ್ತಿ ನೀನೆ ಕೊಯ್ಯೆಂ |
ದುಪಾಯದಿಂದಪ್ಪಿಕೊಂಡ ನಲಘುಸ್ತನಿಯಂ || ೮೫ ||

ವ|| ಮತ್ತಮೊಂದೆಡೆಯೊಳಖಿಳಯೌವನೋದ್ದಾಮರಾಮಾಭಿರಾಮಕಾಮಿನಿ ಯೆನಿಸಿದಾಕೆ.

ಕಂ|| ಬೆನ್ನಂ ಸೋರ್ಮುಡಿ ಮುಟ್ಟೆ ಸ |
ಮುನ್ನತಕುಚೆ ಮರನ ನಡೆರ್ವ ಸೋಗೆಯ ತೆಱದಿಂ ||
ಪುನ್ನಾಗದ ಬಿರಿಮುಗುಳಂ |
ತನ್ನಿನಿಯನ ಪೆಗಲ ನೇಱ ಕೊಯ್ದಳದೊರ್ವಳ್ || ೮೬ ||

ವ|| ಮತ್ತಮೊಂದೆಡೆಯೊಳೊರ್ವಳ್.

ಕಂ|| ಎಳೆಮಾವಿನ ತಳಿರಂ ಕೊಳ |
ಲೆಳೆಯಳ್ ಕೆಂದಳಮ ನೊಯ್ಯೆ ತಳಮಂ ತಳಿರ್ಗೆ ||
ತ್ತೆಳಸಿ ಗಿಳಿ ಕರ್ದುಕೆ ಭಯವಿ |
ಹ್ವಳೆ ಚೆಚ್ಚರ ಮಪ್ಪಿದಳ್ ನಿಜೇಶನ ಕೊರಲಂ || ೮೭ ||

ವ|| ಆಗಳ್.

ಕಂ|| ಖರಕರತಾಪಂ ಕರಮು |
ಬ್ಬರಿಸೆ ತರತ್ತರಳತಾರಹಾರಾವಳಿಯಂ ||
ತಿರೆ ಘರ್ಮಬಿಂದುಚಯ ಮಂ |
ಕುರಿಸಿದು ವಬಲೆಯರ ತನುಲತಾವಿತತಿಗಳೊಳ್ || ೮೮ ||

ವ|| ಅಂತೊಗೆದ ಘರ್ಮೋದಬಿಂದುವಿಂ ಪರಿದಂಗರಾಗಮುಂ, ನಸುಗುಂದಿದ ಕುಸುಮವಿಭೂಷಣಂಗಳುಂ ಬೆರಸು ಮದಾಲಸಮರಾಳಗತಿಯಿಂ ಬಂದು ವನಲತಾಗೃಹಂಗಳೊಳ್ ವಿಶ್ರಮಿಸುತ್ತೆ ರೂಪಹೃತವನವಿಹರಣರಾಗಿ ಭಾನುಮತಿಪುರಸ್ಸರಂ ಸಕಳಷಂಡವಾಸ ಮೊಡವರೆ ಜಲಕೇಳೀಲೋಲ ನೆನಿಸಿದ ಯೂಥಪತಿ ಕರೇಣುಯೂಥಂ ಬೆರಸು ಬರ್ಪಂತೆ ಬಂದು.

ಕಂ॥ ಮುರಹರನಂತೆ ರಥಾಂಗ ।
ಸ್ಫುರಿತಂ ನಕ್ಷತ್ರದಂತೆ ಮೀನಾನ್ವಿತ ಮಂ ॥
ಬರದಂತೆ ರಾಜಹಂಸೋ ।
ದ್ಧುರಶೋಭಾಕರ ಮೆನಿಪ್ಪ ಕಮಳಾಕರಮಂ ॥ ೭೯ ॥

ವ॥ ಅದಂ ಕಂಡೆಯ್ದೆ ವಂದು ಜಳಕೇಳೀವಿಳಾಸೋದ್ಯುಕ್ತನಾದಾಗಳ್.

ಉ॥ ಆಲಲನಾಕದಂಬಕ ವಿಶಾಲನಿತಂಬಸುಪೀವರಸ್ತನಾ ।
ಸ್ಫಾಲನದಿಂದ ಮಬ್ಜಿನಿ ಕಲಂಕಿ ತರತ್ತರಳೋರ್ಮಿಮಾಲೆಯಂ ॥
ಲೀಲೆಯಿ ನಾಂತುದಂತುಟೆ ಮಹದ್ವಿಮಳತ್ವಗಭೀರವೃತ್ತ ಮಾ ।
ಬಾಲೆಯ ತೋಳ್ ತಗುಳ್ತರೆ ವಿಕಾರಮ ನೆಯ್ದುವು ದಾವ ವಿಸ್ಮಯಂ ॥ ೮೦ ॥

ಕಂ॥ ಮತ್ತಗಜಕುಂಭಸದೃಶಕು ।
ಚಾತ್ತಪಯಃಕ್ಷೋಭದಿಂ ರಥಾಂಗಯುಗಂ ಮೆ ॥
ಯ್ವೆತ್ತಿರ್ದ‌ಗಲ್ದುದೇನು ।
ದ್ವೃತ್ತಕೃತಾನ್ಯಪ್ರಸಾದ ಮೆಂಬುದು ಮುಂಟೇ ॥ ೮೧ ॥

ವ॥ ಅದಲ್ಲದೆಯುಂ.

ಕಂ॥ ಇನಿಯಳ್ ಮುನಿದೊಡೆ ತಿಳಿಪ ।
ಲ್ಕನಿಯಂ ಕಾಲ್ವಿಡಿಯಲೆಂದು ಮುೞುಂಗಿದ ನಾಕಾ ॥
ಮಿನಿಗೆ ಜಲದಿಮ್ಯದಿಂ ಶು ।
ದ್ಧನಪ್ಪ ಬಗೆ ಬಗೆಯೊಳೊಂದಿ ಮುೞುಂಗುವ ತೆಱದಿಂ ॥ ೮೨ ॥

ವ॥ ಅದಲ್ಲದೆಯುಂ.

ಕಂ॥ ಇದು ವದನ ಮಿದು ಸರೋರುಹ ।
ಮಿದು ಕುಚ ಮಿದು ಚಕ್ರವಾಕ ಮಿದು ಕಣ್ಣಿದು ಮೀ ॥
ನಿದು ಕುರುಳಿದು ಮಧುಕರ ಮೆಂ ।
ಬುದ ನಱಿಯಲ್‌ಬಂದುದಿಲ್ಲ ಕಮಳಾಕರದೊಳ್ ॥ ೮೩ ॥

ಪಸರಿಸಿದಕೃತಕಸೌಂದ ।
ರ್ಯಸೌರಭಂ ಪಿಂಗೆ ಪಿಂಗದಂಗಂಗಳೊಳೇ ॥
ನೆಸೆದುದೊ ಹೃದಯಂಗಮ ಮಾ ।
ಯ್ತುಸದಳವಾತ್ಮಾಂಗಸೌರಭಂ ಲಲನೆಯರಾ ॥ ೮೪ ॥

ವ॥ ಅಂತು ಜಲಕೇಳೀವಿನೋದದಿಂ ನೀಡುಂ ಪೊೞ್ತುಗಳೆದಂದಿನ ದಿನ ಮಲ್ಲಿರ್ದು ಮಱು ದಿವಸಂ ಪುಂಡರೀಕಿಣಿಗೆ ನಿಜ್ಜವಯಣಂ ಬಂದು.

ಕಂ|| ಮಂಗಳತೂರ್ಯ್ಯರವಂ ಮಿಗೆ ।
ಮಂಗಳಗಾಯಕನಿನಾದ ಮೊಡರಿಸೆ ಭಾಸ್ವ ॥
ನ್ಮಂಗಳಪಾಠಕನಿನದಂ ।
ಸಂಗಳಿಸಿರೆ ನೃಪತಿ ರಾಜಗೃಹಮಂ ಪೊಕ್ಕಂ || ೯೫ ||

ವ|| ಪೊಕ್ಕು ಪದ್ಮರಾಜಂಗಂ ವನಮಾಳಿಕಾಮಹಾದೇವಿಗಂ ನಿರ್ಭರಭಕ್ತಿಭರದಿಂ ಪೊಡಮಡುವುದು ಮವರ್ ತೆಗೆದು ತಬ್ಬಿಕ್ಕೈಸಿಕೊಂಡು ಪಲವುನಲ್ವರಕೆಗಳಿಂ ಪರಸಿ ಪರಮೋತ್ಸವಪರಂಪರೆಯ ನೆಯ್ದಿ ಸುಖಮಿರ್ಪುದುಂ ಕತಿಪಯದಿನಂಗಳಿಂ (ಮಹಾ)ಪದ್ಮರಾಜನ ಮಹಾದೇವಿಯೆನಿಸಿದ ಭಾನುಮತಿಯ ಗರ್ಭದೊಳ್ ಪೂರ್ವಜನ್ಮಸಂಚಿತಾಗಣ್ಯ ಪುಣ್ಯಪ್ರಭಾವದಿಂ.

ಕಂ|| ಜಿನವಾಕ್ಯಾಮೃತ ಮಣಿಭಾ ।
ಜನ ನಭಿನುತವಂಶವಾರ್ಧಿವರ್ಧನಲೀಲಾ ॥
ವನಧಿಸುತ ನರ್ಥಿಜನನಂ ।
(ದನ ನಾ)ಧನದೇವನೆಂಬ ಸುತ ನುದಯಿಸಿದಂ || ೯೬ ||

ವ|| ಅಂತಿರ್ಪುದು ಮೊಂದುದಿವಸಂ ಮಹಾಪದ್ಮನಾಥಂ ಮಂಟಪಮಧ್ಯಸ್ಥಿತಸಿಂಹಾಸನಾಸೀನ ನೊಡ್ಡೋಲಗಂಗೊಟ್ಟಿರೆ.

ಕಂ|| ದಿನಲಕ್ಷ್ಮಿ ವಾರುಣೀಸೇ ।
ವನೆಗಿರ ದೆಟ್ಟಿರ್ಪ ಪದದೊ ಳವಳಡಿಯಿಂ ಬಿ ॥
ಲ್ದಿನುಪಮಮಣಿಮಂಜೀರಕ ।
ವೆನಲಿನ ನಪರಾದ್ರಿಶಿಖರಶೇಖರ ನಾದಂ || ೯೭ ||

ಚಂ|| ಕಮಳಿನಿಯಂ ವಿಯೋಗಿನಿಯ ನೀಕ್ಷಿಸಿ ಮತ್ತೆ ಬೃಹದ್ವಿಯೋಗಮೇ ।
ಗಮ ನೊಳಕೊಳ್ಗ ಮಿಾಗಳೆ ಮದಾಗಮನೋತ್ಸವಮಂ ನಿವೇದಿಸೆಂ ॥
ದಮೃತಮರೀಚಿ ಪೇಟ್ದಿ ನಿಜದೂತಿಯ ನುತ್ಸಳಲಕ್ಷ್ಮಿಗಟ್ಟಿದಂ ।
ತಮರ್ದೆಸೆದಿರ್ದ ಸಂಜೆ ಪರಿರಂಜಿಸುತಿರ್ದು ದಪೂರ್ವಶೋಭೆಯಿಂ || ೯೮ ||

ಮ|| ಇನ ನೆನ್ನಾಸೆಯ ನೊಲ್ಲದೀಗಳಪರಾಶಾಯೋಷಿದಾಸಕ್ತನಾ ।
ದ ನವಂ ಸಂಚಳ ನೆನ್ನ ಪಕ್ಕದೊಳಗಿರ್ದುಂ ಸಯ್ತಿರಂ ಪೋಗಿ ಪ ॥
ದ್ಮಿನಿಯಂ ಪೊರ್ದುವೆ ನೆಂದು ನೊಂದು ಹರಿದಿಕ್ಕಾಂತಾನನಂ ಕಂದಿತೆಂ ।
ಬಿನೆಗಂ ಮರ್ಬು ಪೊದಳ್ದು ಪರ್ವಿದು ದಗುರ್ವಿಂ ಪೂರ್ವದಿಗ್ಭಾಗಮಂ || ೯೯ ||

ಕಂ|| ಕಾಲಿಂದಿಯ ನಮರಾಪಗೆ ।
ನೀಲಾದ್ರಿಯ ನಾಹರಾದ್ರಿ ಯಸಿತಾಬ್ಜಿನಿಯಂ ||
ಪೋಲೆ ಸಿತಾಬ್ಜಿನಿ ಪೋಲ್ತಿರೆ ।
ಕಾಲದಮರ್ಪು ರ್ವಿಪರ್ವಿತುರ್ವೀತಳಮಂ || ೧೦೦ ||

ವ॥ ಅಲ್ಲಿ.

ಮ॥ ದೆಸೆಯಂ ನೋಡೆದಿರಕ್ಕ ನಿನ್ನ ಧವಳಾಪಾಂಗಂ ಪೊದಳ್ದಿಪ್ಪುದಿ ।
ನ್ನುಸಿರಲ್ವೇಡೆಲೆ ಮುಗ್ಧೆ ನಿನ್ನದಶನಾಂಶುಜ್ಯೋತ್ಸ್ನೆ ನೀಳ್ದಪ್ಪುದೆಂ ॥
ದು ಸಮಾಲಿಂಗಿತಮೌನಮಾಡಿ ಸಖಿಯಂ ಸಂಕೇತಸದ್ಮಕ್ಕೆ ಪ ।
ಳ್ಳಿಸರಂದೋಱುತೆ ಮುಂತೆಮುಂತೆ ನಡೆದೊಯ್ದಾಳ್ ದೂತಿ ಚಾತುರ್ಯದಿಂ ॥ ೧೦೧ ॥

ಕಂ॥ ಇದು ಸಾಂಧ್ಯತಾಂಡವಾರಂ ।
ಭದೊಳೀಶ್ವರಬಾಹುನರ್ತನಕ್ಷೇಪದೊಳು ॥
ಣ್ಮಿದ ಪುಷ್ಪಾಂಜಳಿ ಯೆನಲೇ ।
ನುದಯಿಸಿದುದೊ ಗಗನದೊಳಗೆ ತಾರಾನಿಕರಂ ॥ ೧೦೨ ॥

ಇನಿ[ಸಿನಿ]ಸಂ ತಮದೊಡ್ಡೊ ।
ಯ್ಯನೆ ತಾನೊರಸಿತಮ[ರೇಶ್ವ]ರಾಶಾವನಿತಾ ॥
ನನಮಿನಿಸಿನಿಸಂ ಬೆಳ್ಪಂ ।
ಜನಿಯಿಸಿದುದಯಾದ್ರಿಯಂ ಸುಧಾಕರ ನಡರ್ದಂ ॥ ೧೦೩ ॥

ವ॥ ಆಪ್ರಸ್ತಾವದೊಳ್.

ಮ॥ ಅಮರಾಧೀಶ್ವರಗಂಧಸಿಂಧುರ ಶಿರಸ್ಸಿಂಧೂರಮಿಂದ್ರಾಲಯಾ ।
ಗ್ರಿಯಲೀಲಾರುಣನೂತ್ನರತ್ನಕಳಶಂ ಜಂಭಾರಿಶುಂಭತ್ಸರಾ ॥
ಗಮಯೈಕಾತಪವಾರಣಂ ಶತಮುಖಶ್ರೀವಕ್ತ್ರಕಾಶ್ಮೀರರಾ ।
ಗ ಮಿದೆಂಬೇೞ್ಗೆಯ ನಾಂತು ರಕ್ತರುಚಿಯಿಂ ಚೆಲ್ವಾಯ್ತು ಚಂದ್ರೋದಯಂ ॥ ೧೦೪ ॥

ವ॥ ಅದಲ್ಲದೆಯುಂ.

ಮ॥ ಅನಿಮೇಷಧ್ವಜವಶ್ಯಯಂತ್ರವಳಯಂ ಕಂದರ್ಪಶೌರ್ಯಪ್ರಶ ।
ಸ್ತಿನಿಯುಕ್ತಸ್ಥಿತಶಾಸನೈಕಫಳ(ಕಂ) ಪುಷ್ಪಾಸ್ತ್ರಕೇಳೀಲತಾ ॥
ವನಪುಷ್ಪಸ್ತಬಕಂ ಮನೋಜವಿಜಯಪ್ರಸ್ಥಾನಮಾಂಗಲ್ಯಪಾ ।
ವನಪುಣ್ಯಾಮೃತಕುಂಭ ಮೆಂಬೆಸಕಮಂ ತಾಳ್ದಿತ್ತು ಚೆಲ್ವಿಂದುವಾ ॥ ೧೦೫ ॥

ಮ। ಸ್ರ॥ ಗಗನಂ ತೀವಲ್ಕೆ ಮೇಣ್ಕೊರ್ವಿದುದೊ ತುಹಿನಕೃದ್ಬಿಂಬ ವಾಶಾಂತಮಂ ಕೆ ।
ಯ್ಮಿಗೆ ಮೇಣ್‌ದುಗ್ಧಾಬ್ಧಿ ಬೆಳ್ಳಂಗೆಡೆದು ಕವಿದುದೋ ಲೀಲೆಯಂ ತಾಳ್ದಿಮೇಣೀ ॥
ಜಗಮಂ ಶ್ರೀಶಾಂತಿವರ್ಮಪ್ರಥಿತಯಶಮೆ ತಾಳ್ದಿರ್ದುದೋ ಪೇೞಿ ಮೆಂಬ ।
ನ್ನೆಗ ಮುರ್ವೀಚಕ್ರಮಂ ಕಣ್ಗೊಳಿಸಿದುದು ಲಸಚ್ಚಂದ್ರಿಕಾಶ್ರೀವಿಳಾಸಂ ॥ ೧೦೬ ॥

ವ॥ ಆಗಳೋಲಗಮಂ ವಿಸರ್ಜಿಸಿ ಸಂಧ್ಯಾಸಮಯಸಮುಚಿತನಿತ್ಯನಿಯಮಮಂ ನಿರ್ವರ್ತಿಸಿ ಪ್ರಭುಗುಣಾರ್ಣವಪೂರ್ಣಚಂದ್ರಂ ಚಂದ್ರಿಕಾಶ್ರೀಯಂ ನೋಡಿ ಪುರಮಂ ತೊೞಲ್ದು ನೋಡುವ ಬಗೆಯಿಂ ನಾಗರಿಕವಿಟವಿದೂಷಕಾದಿಗಳ್ವೆರಸು ರಾಜಭವನಮಂ ಪೊಱಮಟ್ಟು.

ಕಂ|| ಅಂಗಜನಿಭ ನೆಯ್ದಿದ ನರ ।
ಸಂ ಗಣಿಕಾವಾಟಮಂ ವಿಟೀವಿಟಜನತಾ ||
ಸಂಗತಮಧುರವಚಸ್ತಬ ।
ಕಂಗಳನಾತ್ಮೀಯ ಕರ್ಣಪೂರಂಮಾಡಲ್ || ೧೦೭ ||

ವ|| ಅಪ್ರಸ್ತಾವದೊಳ್.

ಮ। ಸ್ರ|| ಲಳನಾಧಮ್ಮಿಲ್ಲಮಾಲಾಕುಸುಮಪರಿಮಳಾಮೋದಿ ಕಂದರ್ಪಕೇಳೀ ।
ಚಳಿತಸ್ತ್ರೀಪುಂಸಘರ್ಮೋದಕಲವಶಿಶಿರಂ ಸೌಧವಾತಾಯನಪ್ರೋ ||
ಚ್ಛಳಿತೋದ್ಯದ್ಧೂಪಧೂಮಪ್ರಬಳವಿಲುಳಿತಶ್ಯಾಮಳಾಲೀಲೆಯಿಂದಂ ।
ಸುಖಿಂಗುಂ ಸೌಭಾಗ್ಯಘಂಟಾರವಮುಖರಿತಮಂದಪ್ರಚಾರಂ ಸಮೀರಂ || ೧೦೮ ||

ಮ|| ವನಿತಾನೂಪುರಜಾಲಚಾರುನಿನದಂ ಸೌಭಾಗ್ಯಘಂಟಾಚಳ ।
ನ್ನಿನದಂ ಪಂಜರಕೀರಮಂಜುನಿನದಂ ಕಾಂಚೀಕನತ್ಕಿಂಕಿಣೀ ||
ನಿನದಂ ರಂಜಿತಗೀತವಾದ್ಯನಿನದಂ ಮಾಧುರ್ಯವೀಣಾಲಸ ।
ನ್ನಿನದಂ ಪೊಂಪುಳಿ ಯಾದುದಚ್ಚರಿ ಯೆನಲ್ ವೇಶ್ಯಾಲಯಾನೀಕದೊಳ್ || ೧೦೯ ||

ವ|| ಅಂತು ಮನೋಜರಾಜಲೀಲಾಕರಸೌಧಕೂಟದೊಳ್ ಬರ್ಪಾಗಳ್ ವಿವಿಧವಿಚಿತ್ರಭಿತ್ತಿ ಸಂಪತ್ತಿರಮ್ಯಹರ್ಮ್ಯತಳಖಚಿತಮರಕತಕುಟ್ಟಿಮಪ್ರಾಂಗಣವಿರಚಿತಮತ್ತವಾರಣಂಗಳಂ ನೆಮ್ಮಿ.

ಚಂ|| ಚಳನನಿತಂಬಬಿಂಬಕುಚಕರ್ಣಕಪೋಲಲಲಾಟದೇಶದೊಳ್ ।
ತೊಳಗಿ ಪಿನದ್ಧನೂತ್ನಮಣಿನೂಪುರಕಾಂಚನಸೂತ್ರಹಾರಮಂ ||
ಡೆಳಮಕರಾಂಕಪತ್ರತಿಳಕಾವಳಿಗಳ್ ವಿಟಕೋಟಿಯುಂ ಪಳಂ ।
ಚಲೆಯೆ ವಿಳಾಸಮಂ ತಳೆದು ದೊತ್ತಿಗೆ ನಿಂದ ವಿಳಾಸಿನೀಜನಂ || ೧೧೦ ||

ಮ|| ವನಜಾತಾನನೆ ಪೇಟಿರ್ ಸುಧಾಂಶುಯಶ ಕೇಳ್ ಹಂಸಾಂಗನಾಯಾನೆ ಪೇಟಿರ್ ।
ಘನನಾದಾನ್ವಿತ ಕೇಳ್ ಮದದ್ವಿರದಕುಂಭೋರೋಜೆ ಪೇಟಿರ್ ಸಿಂಹಶೌ ||
ರ್ಯನಿಭಾ ಕೇಳಳಿಮಾಳಿಕಾಕಬರಿ ಪೇಟಿರ್ ಸಚ್ಚಂಪಕಾಮೋದ ಕೇ ।
ಳೆನಲಾ ಕಾಂತೆಯ ನಂತೆ ಬಿಟ್ಟ ನದ ನಿನ್ನೇನೆಂಬೆ ನಾಶ್ಚರ್ಯಮಂ || ೧೧೧ ||

ವ|| ಮತ್ತಮೊಂದೆಡೆಯೊ ಳೊರ್ವಂ ತನ್ನ ಕೆಳದಿಗಿಂತೆಂದಂ.

ಚಂ|| ಅರಸನೆ ರಂಜದಾನೆ ಹರಿದೆಯ್ದಿದೊಡಾಗಳೆ ನೂಂಕುತಿರ್ದ ವಾ ।
ತುರಗಮ ನಕ್ಕೆ ಸ್ವೈರಿಸದೆ ಹೆಗ್ಗಡೆಗಂಜಿರೆ ಮನ್ಮನೋರಥಂ ||
ವಿರಥಮ ನೆಯ್ದಲಾಂ (ದ್ವಿಪ.) ದೆಯ್ದಿದೆ ನಾಚತುರಂಗಯುಕ್ತಿ ಬೇ ।
ರ್ವರಿದಿರೆ ಪೆಂಡಿರೊಲ್ದೊಲವನೇಳಿಸು ವಾತನೆ ಗಾಂಪ ನಲ್ಲನೇ || ೧೧೨ ||

ವ|| ಮತ್ತಮೊಂದೆಡೆಯೊಳೊರ್ವಳ್.

ಮ|| ಇನಿಯಂ ಮೆಲ್ಲನೆ ತೂಗೆ ಬಣ್ಣಿಸೆ ಜನಂ ತನ್ನಂ ಮನೋರಾಗದಿಂ ।
ಕನಕಾಂದೋಳಮಂ ನೇಱಿ ಮನ್ಮಥಧನುರ್ಜ್ಯಾರಾವಮಂ ಪೋಲ್ತು ಗೀ ॥
ತನಿನಾದಂ ಬಗೆಗೊಂಡು ಕಾಮುಕಜನ ಪ್ರಕ್ಷೋಭಮಂ ಮಾಡೆ ಕಾ ।
ಮಿನಿ ಯೊರ್ವಳ್ ಪ್ರಭುಶಾಂತಿವರ್ಮನ ಯಶಃಶ್ರೀಲೀಲೆಯಂ ಪಾಡಿದಳ್ ॥ ೧೧೩ ॥

ವ|| ಮತ್ತಮೊಂದೆಡೆಯೊಳವಿರಳಕುಸುಮಮಾಳಾನಿಚಯರಚಿತ ವಿವಿಧಮಣಿಗಣ ಖಚಿತವಿಚಿತ್ರಚೀನಾಂಬರಾಡಂಬರಲೀಲಾಂದೋಳಕೇಳಿಯೊಳ್.

ಚಂ|| ಪದೆಕೊರಲೊಳ್ಪು ಕಣ್ಣರಿಪು ಕಿತ್ತು ಕೊದಳ್ಗಮಕಂ ನಯಂ ಬೆಡಂ ।
ಗೊದವೆ ಮಱಲ್ದು ವಾರವಧು ವಾರವಧೂತ್ತಮೆ ಪಾಡಿದಳ್ ವಿಳಾ ||
ಸದೆ ತೆರೆಯಲ್ಕೆ ಮೇಲುದಲೆದೆತ್ತಿದ ಸುತ್ತಿದ ಸೀಯನಪ್ಪ ಗೇ ।
ಯದ ಪೊಸಬಣ್ಣದೊಳ್ ಸೊಬಗೆ ಶಾಂತನ ನೂರ್ಜಿತ ಕೀರ್ತಿಕಾಂತನಂ ॥ ೧೧೪ ॥

ವ|| ಮತ್ತಮೊರ್ವಳ್ ತನ್ನಿನಿಯಂ ತಡೆದು ಬಂದುದರ್ಕೇವಯಿಸಿ.

ಕಂ|| ಮಾಣ್ಬಕ್ಕನೆ ನೀನವಳೊಳ್ ।
ಕಣ್ಬಲ್ಲದೆ ಪೋಗಿ ನೆರೆದು ಮೆಲ್ಲನೆ ಬಂದೈ ॥
ನಾಣ್ಬುವೆ ಯಲ್ಲೆನುತಂ ಕಿಸು ।
ಗಣ್ಬಿ ಸರೋಜಾಕ್ಷಿ ಬಡಿದಳಾತ್ಮಪ್ರಿಯನಂ || ೧೧೫ ||

ಪೋಗದೆ ತಡೆದಿರ್ದಗಣಿತ ।
ಭೋಗಾಮರ ಭಾನುಮತಿಯುಪದಹತದೊಳ್ ಪ ॥
ಕ್ಕಾಗದೆ ನೀಂ ನೃಪ ಸೆಜ್ಜೆಗೆ ।
ಪೋಗೆಂದೆಂಬಂತೆ ಘಟಿಕೆ ಮೊಱಗಿತ್ತಾಗಳ್ ॥ ೧೧೬ ॥

ವ|| ಅಂತು ರಾತ್ರಿ ಸಂಭೋಗಸ್ವೀಕೃತಮನೋರಾಗನು ಮಾಗಿ.

ಮ|| ಮನಮೊಲ್ದಾನಿರೆ ತಾರಕಾನಿಕರದೊಳ್ ಕೂಡಿರ್ಪೆ ನೀನೆಂದು ಯಾ ।
ಮಿನಿ ಮೆಯ್ವೆರ್ಚಿದ ಕೋಪದಿಂ ವಿಕಳಭಾಷಾವೇಷ ಮುಣ್ಮಲ್ಕೆ ಪೋ ॥
ಗೆ ನತಾಸ್ಯಂ ವಿಗತಾಂಬರಂ ಶಶಿ ವಿಕಾಸಂಗೆಟ್ಟು ಬೆಂಬಿಡಿದ್ದು ಪೋ ॥
ದನದೇಂ ಚೋದ್ಯಮೋ ನೋಱಿಸ್ಪಡೆಂತುಟಿ ವಿಯೋಗೋದ್ಯೋಗಮೇಗೆಯ್ಯದೋ ॥೧೧೭॥

ಚಂ|| ಹಿಮರುಚಿ ರಾಗದಿಂ ನೆರೆದು ಸತ್ಪಥಲಕ್ಷ್ಮಿಯು ನಸ್ತಶೈಲದೊಳ್ ।
ಸಮರತದಿಂ ಬಿಬಿಲ್ದೊರಗಲಾಕೆಯ ಮೆಯ್ವಿಡಿದಾಱುತಿರ್ಪ ಮೆ ॥
ಯ್ಬೆಮರ್ವನಿಯಂತೆ ಬಾಂದೊಱಿಯೊಳೊಂದೆರಡಿರ್ದುವು ತಾರೆ ಬಿದ್ದಿ ಕುಂ ।
ಕುಮರುಚಿರಾಂಬರಂಬೊಲೆಸೆದಿರ್ದುದು ಪೂರ್ವದಿಶಾರುಣಾಂಬರಂ || ೧೧೮ ||

ವ॥ ತದನಂತರಂ.

ಕಂ॥ ಜಳಜಭವಂ ಮಾನಸುರಾ ।
ಚಳದ ಸುರಾಚಳದ ಮೈಮೆಯಿಂ ತೂಗೆ ಸುರಾ ॥
ಚಳದಡೆರ್ದ ಕೊಱತೆ ಗಿಕ್ಕಿದ ।
ತೊಳಗುವ ಗುಂಜೆ ಯೆನೆ ರಂಜಿಸಿದ ನುದಯಾರ್ಕಂ ॥ ೧೧೯ ॥

ವ॥ ಆಗಳ್ ನಿರ್ವರ್ತಿತನಿತ್ಯನಿಯಮನುಂ, ಕೃತದೇವತಾರ್ಚನನು ಮಾಗಿ ಮಹಾಪದ್ಮ ನಾಸ್ಥಾನಮಂಟಪದೊಳಿರ್ಪುದುಂ ಋಷಿನಿವೇದಕ ನೊರ್ವಂ ಪರಿತಂದು ನಿಟಿಳತಟಘಟಿತಕರಸರೋಜನಾಗಿ ಸಾಷ್ಟಾಂಗವೆಱಗಿ ಪೊಡೆವಟ್ಟು ದೇವ ನಿಮ್ಮ ಬಹಿರುದ್ಯಾನದೊಳ್ ಭೂತಹಿತಜಿನ್ವರ್ ಬಿಜಯಂಗೆಯ್ದರೆಂದು ಬಿನ್ನಪಂಗೆಯ್ಯಲವರಿರ್ದ ದೆಸೆಗೇೞಡಿಯಂ ನಡೆದು ಸಾಷ್ಟಾಂಗಪ್ರಣತ ನಾಗಿ ಋಷಿನಿವೇದಕಂ ಗಂಗಚಿತ್ತಮಂ ಕೊಟ್ಟು ಸನ್ನಾಹಭೇರಿಯಂ ಪೊಯ್ಸಿ.

ಮ॥ ಧರಣೀಶಸ್ತಸಮಸ್ತಮಂಡಳಿಕದಂಡಾಧೀಶಸಾಮಂತಸಾ ।
ಕ್ಷರಪೌರೋಹಿತಪೆಂಡವಾಸಲಲನಾಶುದ್ಧಾಂತಕಾಂತಾಲಸ ॥
ತ್ಪರಿವಾರಂ ಬೆರಸರ್ಚನಾವಳಿಸಮೇತಂ ನೂತನಾನಂದದಿಂ ।
ನರನಾಥಂ ಪೊಱಮಟ್ಟ ನಂದು ಪದೆಪಿಂ ಶ್ರೀಭವ್ಯರತ್ನಾರ್ಣವಂ ॥ ೧೨೦ ॥

ಗದ್ಯಂ

ಇದು ಸಮಸ್ತಭುವನಸಂಸ್ತುತಜಿನಾಗಮಕುಮುದ್ವತೀ
ಚಾರುಚಂದ್ರಾಯಮಾಣಮಾನಿತ ಶ್ರೀಮದುಭಯಕವಿಕಮಳಗರ್ಭ
**ಮುನೀಂದ್ರಪಂಡಿತದೇವ**
ಸುವ್ಯಕ್ತಸೂಕ್ತಿ ಚಂದ್ರಿಕಾಪಾನಪರಿಪುಷ್ಟಮಾನಸಮರಾಳ
**ಗುಣವರ್ಮನಿರ್ಮಿತಮಪ್ಪ**
**ಪುಷ್ಪದಂತ ಪುರಾಣದೊಳ್**
**ಜಳಕೇಳೀವರ್ಣನಂ**
ಅಷ್ಟಮಾಶ್ವಾಸಂ

ಶ್ರೀ

# ಪುಷ್ಪದಂತ ಪುರಾಣಂ

## ನವಮಾಶ್ವಾಸಂ.

ಕಂ॥ ಶ್ರೀನಿರತಿಶಯಗಭೀರನಿ ।
ನಾದಂ ಸೌಜನ್ಯಮಂಡನಂ ಜಿನನಿರ್ದು ॥
ದ್ಯಾನವನ ಕ್ಕೆಯ್ತಂದಂ ।
ಮಾನಧನಂ ಪ್ರಭುಗುಣಾಬ್ಜವನಕಳಹಂಸಂ ॥ ೧ ॥

ವ॥ ಅಂತು ಬಂದು.

ಬಲಗೊಂಡ ನಮರನಗಮಂ ।
ಬಲಗೊಳ್ವಿನನಂತಗಣ್ಯಪುಣ್ಯಾವಸಥಂ ॥
ಬಲರಿಪುಪರಿಪೂಜಿತಜಿನ ।
ನಿಲಯಮ ನನುನಯದಿ ನೆಸೆವ ಭವ್ಯೋತ್ತಮ(ಮಂ) ॥ ೨ ॥

ವ॥ ಅಂತು ಬಲಗೊಂಡೊಳಗಂಪೊಕ್ಕು ಪ್ರಗಲ್ಭನಿರ್ಭರಭಕ್ತಿಯಿಂ ನಿಟಿಳತಟಘಟಿತಕರಸರೋಜ ನಾಗಿ.

ಚಂ॥ ಅತನುಮದಪ್ರಭಂಜನ ಜನಸ್ತುತಸೂಕ್ತಿನಿವಾಸ ವಾಸವಾ ।
ರ್ಚಿತಪದಪದ್ಮ ಪದ್ಮಸದನಾಸ್ಪದವಿಕ್ರಮ ವಿಕ್ರಮಾಂಗಜ ॥
ಕ್ಷಿತಿಧರವಜ್ರ ವಜ್ರಿರಚಿತಪ್ರಥಿತಾಯತತೂರ್ಯಘೋಷ ಘೋ ।
ಷಿತನವತತ್ವ ತತ್ವರಸವಾರಿದಿ [1]ನೀನೆ ವಲಂ ಜಿನೇಶ್ವರಾ ॥ ೩ ॥

ಮ॥ ಸಕಳಜ್ಞಾನಸುಖೈಕಮೂರ್ತಿ ಜಿನ ನಿನ್ನಂ ಕೀರ್ತಿಸಲ್ ನಾಕನಾ ।
ಯಕರುಂ ಶಕ್ತಿವಿಮುಕ್ತರಾದರದಱಿಂ ದಾನೇವೆ ನೆಂಬೀನಿರ ॥
ರ್ಥಕವಾಗ್ಜಾಣಿಕೆವೇಡ ಪೂರ್ಣ ಮತಿವಿಸ್ತೀರ್ಣಂ ಪ್ರಸನ್ನಂ ಯಶೋ ।
ಧಿಕ ಮಾಗಿರ್ದೊಡ ಮಬ್ಧಿಗೇವಿರಿದೊ ಪೆಂಪಿಂ ಪೇೞ್ ಸರೋಜಾಕರಂ ॥ ೪ ॥

ವ॥ ಎಂದಿವುಮೊದಲಾದನೇಕವಸ್ತುಸ್ತವಗುಣಸ್ತವರೂಪಸ್ತವಂಗಳಿಂ ಜಗತ್ತ್ರಣೂತಭೂತಹಿತಜಿನರಂ ಸ್ತುತಿಯಿಸಿ ಪೊಡೆವಟ್ಟು ತದನಂತರಂ.

ರಗಳೆ॥ ಶ್ರೀಕನಕಕಲಶಭೃತನಿರ್ಮಳಜಲಂಗಳಿಂ ।
ಹಿಮಘುಸೃಣಸಂಮಿಶ್ರಮಳಯಜರಸಂಗಳಿಂ ।
ಸುರಭಿಪರಿಮಳವಿರಳಕಳಮಾಕ್ಷತಂಗಳಿಂ ।
ಮಂದಾರಸಿಂಧುವಾರಾದಿ ಕುಸುಮಂಗಳಿಂ ।
ಸರಸಮೃದುಭಕ್ಷ್ಯಯುತದಿವ್ಯಚರುಕಂಗಳಿಂ ।
ಶೋಣಮಣಿಕಿರಣರುಚಿರಚಿತದೀಪಂಗಳಿಂ ।

---

[1] ವಾರ್ಧಿಯೆ.

ಕಾಳಾಗುರುಪ್ರಮುಖಧೂಪಧೂಮಂಗಳಿಂ ।
ಪನಸಾಮ್ರನಾರಂಗದಾಡಿಮಫಲಂಗಳಿಂ ।
ಮತ್ತಮನಿತೊಳವೆಸೆವ ಬಹುವಿಧಾರ್ಚನೆಗಳಿಂ ।
ಪೂಜಿಸಿದನನಘಜಿನಪಾದಯುಗಳಂಗಳಂ ।
ಭಾರತೀಚರಣಸರಸಿರುಹಯುಗ್ಮಂಗಳಂ ।
ಜಿನಮುನಿಪದಾಂಬುಜಯುಗಂಗಳಂ ಮಂಗಳಂ । ॥ ೫ ॥

ವ॥ ಅಂತರ್ಚಿಸಿ ಗುರುಭಕ್ತಿಪೂರ್ವಕಂ ಪಂಚಮುಷ್ಟಿಯಿಂ ವಂದಿಸುವುದುಂ.

ಕಂ॥ ಕಾರುಣ್ಯಾಂಭೋನಿಧಿಗಂ ।
ಭೀರರವಂ ಪುದಿದುದೆನಿಸಿ ರಾರಾಜಿಸಿದ ॥
ತ್ತಾರಾಜಸಭೆಗೆ ನಿರುಪಮ ।
ಸೂರಿಜನಂ ಪರಸೆ ಧರ್ಮವೃದ್ಧಿಯ ಘೋಷಂ ॥ ೬ ॥

ವ॥ ಅಂತು ಪರಸುವುದುಂ–ಮಹಾಪದ್ಮರಾಜಂ ಪರಮಾನಂದಮಂ ಪಡೆವಂತೆ ಪರಮಾನಂದ ಪರಂಪರೆಯ ನೆಯ್ದಿ ಸಮುಚಿತಾಸನದೊಳ್ ಕುಳ್ಳಿರ್ದುದುಂ, ಅವರ್ ಸದ್ಧರ್ಮಸ್ವರೂಪಮಂ ಸಂಕ್ಷಿಪ್ತಮುದಿತ ನತ್ಯಾಸನ್ನಭವ್ಯ ನೆಂಬುದ ನಗಾಧಕೇವಳಬೋಧದಿಂದಱಿದು ಪಂಚಾಸ್ತಿಕಾಯ ಷಡ್ದ್ರವ್ಯಸಪ್ತತತ್ವ ನವಪದಾರ್ಥ ಸ್ವರೂಪಮಂ ನಿರೂಪಿಸುವುದುಂ ಕೇಳ್ದು ತತ್ವಭಾವನೆಯುಂ ಪರಿಭಾವಿಸುತ್ತು ಮಿರಲದುವೆ ವೈರಾಗ್ಯಹೇತುವಾಗೆ ಸಂಸಾರಶರೀರಭೋಗವಿರಕ್ತನಾಗಿ ತನ್ನ ರಾಜ್ಯಮಂ ಧನದೇವಂಗೆಕೊಟ್ಟು.

ಕಂ॥ ಒಡಲಂ ಸಂಸ್ಕೃತಿಲತಿಕೆಯು ।
ಮಡಲಂ ಸಂಸಾರದುಃಖಲಹರಿಕೆಗಳ ಪೆ ॥
ರ್ಗಡಲಂ ಸುಖಮುಖನಿದ್ರೆಯ ।
ಪೊಡೆಲಂ ಬಿಡೆಲರಿಯದಂಗೆ ನಿರ್ವೃತಿ ಯುಂಟೇ ॥ ೭ ॥

ವ॥ ಎಂದು ಸಂಸಾರಭೀರುತ್ವದಿಂ ಸಂಸಾರಭೀರುಗಳು ಮಪ್ಪ ಸಾಸಿರ್ವರರಸುಮಕ್ಕಳ್ವೆರಸು ದೀಕ್ಷೆಯುಂ ಕೆಯ್ಕೊಂಡು.

ಮ॥ ಜಿನನಂ ನಮ್ರಸುರಾಸುರೇಂದ್ರಜನನಂ ದುರ್ವಾರಮಾರಪ್ರಭಂ ।
ಜನನಂ ಶಾಶ್ವತನಿಶ್ವತತ್ವಮನನಂ ಮಾಂಗಲ್ಯಕೈವಲ್ಯಲೋ ॥
ಚನನಂ ಸದ್ವಿನತೋಪಶಾಂತಮನನಂ ಮುಕ್ತ್ಯಂಗನಾಲೋಚನಾಂ ।
ಜನನಂ ತಾಳ್ದಿದ ನಾತ್ಮಹೃತ್ಕಮಳದೊಳ್ ಯೋಗೀಂದ್ರವೃಂದಾರಕಂ ॥ ೮ ॥

ಕಂ॥ ನೆಱೆ ನೃಪತಿ ದೀಕ್ಷೆಗೊಂಡೊಡೆ ।
ಬಱಿಗೊಂಡಂ ಗೂಡುಗೊಂಡ ನಾರ್ತಂಗೊಂಡಂ ॥
ಮಱೆಗೊಂಡ ನೊತ್ತುಗೊಂಡಂ ।
ಪೆಱತೇಂ ಸ್ಮರ ನಸ್ತಕಾಂಡ ನಪಕೋದಂಡಂ ॥ ೯ ॥

ವ॥ ಅಂತು ದೀಕ್ಷೆಯಂ ಕೆಯ್ಕೊಂಡು ಗ್ರಾಮನಗರಖೇಡಖರ್ವಡಮಡಂಬಾದಿಗಳಂ ವಿಹಾರಿಸುತ್ತುಂ ಚಿರಕಾಲ ಮಿರ್ದು ಯೇಕಾದಶಾಂಗಧರಂ ಷೋಡಶಭಾವನೆಗಳಿಂ ತೀರ್ಥಕರಪುಣ್ಯಮಂ ಕಟ್ಟಿ ತದನಂತರದೊಳಾರಾಧನಾವಿಧಿಯಿಂ ಮುಡಿಪಿ ವಿಂಶತಿಸಾಗರೋಪಮಾನಾಯುಷ್ಯನುಂ ಮೂಱುಮೊಳನರೆನಿಡಿಯನು ಮಾಗಿ.

ಕಂ॥ ಪ್ರಾಣತಕಲ್ಪದೊಳತುಳ ।
ಪ್ರಾಣತಸುರರಾಜ ನಾಗಿ ಪಂಚಮಪೃಥ್ವೀ ॥
ಪ್ರಾಣಾವಧಿಬೋಧದಿ ನ ।
ಕ್ಷೂಣತರಾರಣವಿಮಾನದೊಳ್ ಸುಖಮಿರ್ದಂ ॥ ೧೦ ॥

ವ॥ ಅನ್ನೆಗ ಮಿತ್ತಲ್ ಜಂಬೂದ್ವೀಪಲಕ್ಷ್ಮಿಗೆ ವಿಲಾಸೋಪಕರಣ ಮೆನಿಸಿರ್ಪ.

ಮ॥ ಸದಯಾರತ್ನಕರಂಡದೊಳ್ ಭರತಧಾತ್ರೀಖಂಡದೊಳ್ ರಂಜಿಸಿ ।
ರ್ಪುದು ಕಾಶೀವಿಷಯಂ ಮನೋಜವಿಷಯಾರಮ್ಯಂ ಜಗತ್ಕಾಮ್ಯ ಮಂ ॥
ತದು ಪೃಥ್ವೀತಿಳಕಂ ಕ್ಷಮಾಕಟಕ ಮುರ್ವೀಕಾಂಚಿ ವಿಶ್ವಂಭರಾ ।
ವಿದಿತೋತ್ತಂಸ ಮಿಳಾವತಂಸ ಮವನೀಹಾರಂ ಮಹೀನೂಪುರಂ ॥ ೧೧ ॥

ಮ। ಸ್ರ॥ ನವರತ್ನೋತ್ಪತ್ತಿಯಿಂ ಬೆಟ್ಟುಗ ಳಖಿಳಕುಜೋತ್ಪತ್ತಿಯಿಂ ಕಾಡುಗಳ್ ಕೈ ।
ರವಕಂಜೋತ್ಪತ್ತಿಯಿಂ ಸಿಂಧುಗ ಳನಘುಜನೋತ್ಪತ್ತಿಯಿಂ ದುರ್ಗ ಳಂಗೋ ॥
ದ್ಭವಬೀಜೋತ್ಪತ್ತಿಯಿಂ ಭೋಗಿಗ ಳಖಿಳಫಳೋತ್ಪತ್ತಿಯಿಂ ಕೆಯ್ವೊಲಂಗಳ್ ।
ಧ್ರುವಸತ್ಯೋದ್ಪತ್ತಿಯಿಂ ಕ್ಷತ್ರಿಯರೆಸೆದು ಸುಖೋತ್ಪತ್ತಿಯಿಂ ಬೀಡುತಿರ್ಕುಂ ॥ ೧೨ ॥

ಕಂ॥ ಪ್ರಕಟಿಸುವು ವಖಿಳಧಾನ್ಯ ।
ಪ್ರಕರಂಗಳ್ ಕೆಲದ ಪೊಲದ ಸಿರಿಯಂ ಜನತಾ ॥
ಸುಕೃತಂ ಬೆಳೆವಂತಿರೆ ಬೆಳೆ ।
ದಕೃಷ್ಟಪಚ್ಯಂಗ ಳತುಳಫಳರುಚ್ಯಂಗಳ್ ॥ ೧೩ ॥

ಚಂ॥ ಕಳಮವನಕ್ಕೆ ಬಂದೆಱಪ ಕೀರದೆಱಂಕೆಯ ಗಾಳಿಯಿಂ ಶ್ರಮಂ ।
ಗಳೆದಪೆ ವೆಂದು ನಿಂದು ನೆವದಿಂ ಪಥಿಕರ್ ಗಿಳಿಸೋವ ಪಾಮರೀ ॥
ಕುಳಮ ನಗಲ್ದು ಪೋಗಲಣ ಮಾಱದೆ ನೋಲ್ತೆಳೆಸಿರ್ಪ ರಾಲಸ ।
ಲ್ಲಳನೆಯ ರಂಗಮೇಂ ಸ್ಮರವಿಳಾಸಕಳಾಪಮೊ ವಜ್ರಲೇಪಮೋ ॥ ೧೪ ॥

ವ॥ ಮತ್ತ ಮಲ್ಲಿ.

ಮ। ಸ್ರ॥ ಸಕಳೋದ್ಯಾನಂಗಳೊಳ್ ಸಂತತಸರಸಫಳವ್ರಾತದಿಂ ಸೇವ್ಯ ಮಲ್ಲ ।
ಲ್ಲಿ ಕರಂ ಖರ್ಜೂರವೃಂದಂ ಕ್ರಮುಕಸಮಿತಿ ನೀಪವ್ರಜಂ ಬೀಜಪೂರ ॥
ಪ್ರಕರಂ ನಾರಂಗಸಂಘಂ ಕದಳಿಸಮುದಯಂ ನಾಳಿಕೇರಾವನೀಭೂ ।
ನಿಕರಂ ಚೂತೋತ್ಕರಂ ದಾಡಿಮತತಿ ಪನಸಶ್ರೇಣಿ ಜಂಬೀರಜಾಳಂ ॥ ೧೫ ॥

ಚಂ॥ ಎನಸು ಮಶೋಕಭಾಗಿ ವನಮುಂ ಜನಮುಂ ಸುಮನಶ್ಶಿಳೀಮುಖಾ ।
ಸನಮದನಾನುಷಂಗಿ ವನಮುಂ ಜನಮುಂ ಸುಮನೋವಿಳಾಸನೂ ॥
ತನತಿಲಕಾವಿಶೋಭಿ ವನಮುಂ ಜನಮುಂ ಕಮಳಾಕರಾವಲಂ ।
ಬನಜನಿತಾರ್ದ್ರಭಾವಮಹಿತಂ ವನಮುಂ ಜನಮುಂ ತದುರ್ವಿಯೊಳ್ ॥ ೧೬ ॥

ಚಂ॥ ನಯವಿದರೆಲ್ಲ ಮಲ್ಲಿಯೆ ಕಳಾನ್ವಿತ ರಲ್ಲಿಯೆ ಪುಣ್ಯವಂತ ರ ।
ಲ್ಲಿಯೆ ಸಿರಿವಂತ ರಲ್ಲಿಯೆ ಸುರೂಪಿಗ ಳಲ್ಲಿಯೆ ದಾನಶೂರ ರ ॥
ಲ್ಲಿಯೆ ರಣಶೂರ ರಲ್ಲಿಯೆ ವಿಭೋಗಿಗ ಳಲ್ಲಿಯೆ ಚಾಗಿವೃಂದವ ।
ಲ್ಲಿಯೆ ಎನೆ ಸಾರವೆಂಬಿನಗ ಮಾಮಹಿ ಪೋಲ್ವುದು ಭೋಗಭೂಮಿಯಂ ॥ ೧೭ ॥

ವ॥ ಅಂತೆನಿಸಿ.

ಉ॥ ಕೂಡೆ ಸಮಸ್ತವಸ್ತುಶತಸಾರಸಮೃದ್ಧಿಯಿ ನೊಪ್ಪುತಿರ್ಪುದಾ ।
ನಾಡು ದಿವಕ್ಕೆ ತೋಡು ಕುಸುಮೇಷುಗೆ ಬೀಡು ವೃಷದ್ವಿಪಕ್ಕೆತಾ ॥
ಯ್ಗಾಡು ನಯಕ್ಕೆ ಪಾಡು ವಿಭವಕ್ಕಮದೂಡು ಸುಖಾಮೃತಕ್ಕೆ ನೀ ।
ರ್ಗೋಡು ತಮಕ್ಕೆ ನೀಡು ನಯನಕ್ಕೆಳದಿಂಗಳ ಕಾಡಿದೆಂಬಿನಂ ॥ ೧೮ ॥

ಶಾ॥ ಆನಾಡೆಂಬ ಸರೋವರಕ್ಕೆ ವಿಕಸತ್ಪಂಕೇಜ ಮೆಂಬಂತೆ ಲ ।
ಕ್ಷ್ಮೀನೀಡಂ ಭುವನೋನ್ನತಂ ಸುವಿಧಿಜನ್ಮಾವಾಸ ಮುದ್ಯದ್ಗುಣ ॥
ಸ್ಥಾನಂ ಶಶ್ವದಿನಪ್ರತಾಪಮುದಿತಂ ದೋಷಾಕರದ್ವೇಷಿ ನಿ ।
ತ್ಯಾನಂದಂ ಕವಿರಾಜಹಂಸರುಚಿರಂ ಕಾಕಂದಿನಾಮಂ ಪುರಂ ॥ ೧೯ ॥

ಹರಿಣೀ॥ ಅದಱ ಬಹಿರುದ್ಯಾನಂ ನಾನಾಕುಜಾತನಿಕೇತನಂ ।
ಮದವದಳಿನೀಗಾನಸ್ಥಾನಂ ಸದಾನಿಲವಾರಣಾ ॥
ಭ್ಯುದಯವಿಪಿನಂ ಮಲ್ಲೀವಲ್ಲೀನಟೀನಟನಾಂಗಣಂ ।
ಮದನಕದನಕ್ರೀಡಾನೀಡಂ ವಿಯೋಗಿಭಯಂಕರಂ ॥ ೨೦ ॥

ಕಂ॥ ವನರಾಶಿಯೊಳಗೆ ಬೆಳೆದಿಸೆ ।
ವನೇಕವಿದ್ರುಮದ ಲತೆಯ ಪೊಂಪುಳಿಯವೊಲಾ ॥
ವನರಾಶಿಯೊಳಗೆ ಬೆಳೆದಿಸೆ ।
ವನೇಕವಿದ್ರುಮದ ಲತೆಯ ಪೊಂಪುಳಿ ರಯ್ಯಂ ॥ ೨೧ ॥

ವ॥ ಮತ್ತಮಲ್ಲಿ ಮನಸಿಜನ ಬಿಲ್ಲ ಬೀಜದಿಂ ಬೆಳೆಯದಿಕ್ಷುದಂಡಮಿಲ್ಲ, ಪಂಚಬಾಣಕ್ಕೆ ತಕ್ಕ ಕುಸುಮಶರಮಂ ಬೆಸಲೆಯಾಗದ ಮಲ್ಲೀವಲ್ಲರಿಗಳಿಲ್ಲ, ಹರಿಸುತಂಗೆ ಗಿರಿದುರ್ಗಮಾಗಿ ಪಾಳಿಸದ ಕೃತಕಶೈಲಮಿಲ್ಲ, ಪದ್ಮಾಸನಸರಸೀದಳನರಸುತನದಿಂದಾಕ್ರಮಿಸದಬ್ಜಿನಿಗಳಿಲ್ಲ, ದಿನಕರನ ಕರದ ಕಮಳದೊಡವುಟ್ಟಿದ ಕಮಳವನಂಗಳಿಲ್ಲ, ವಸಂತಸಖಿಯರ ನಖನಿಕರಮಂ ನೆನೆಯಿಸದ ಕೇದಗೆಯಿಲ್ಲ, ಪಗೆಯನೆನಸುಂ ತುಂಬಿಗಳಂ ಪಲುಂಬಿಸದ ಸಂಪಗೆಗಳಿಲ್ಲ, ಮಂದಾರಮಹೀಜಮಂ ನಿಂದಿಸದ ಮಾಕಂದಮಿಲ್ಲ, ನನೆವಿಲ್ಲ ಪಲಿಯಿಗೆಗೆ ತಕ್ಕ ಸುಱಿದಳಿರ ನೊಳಪೊಯ್ದು ಮಿಸುಗದಶೋಕಮಿಲ್ಲ,

ಕಾಮುಕಾಮಿನಿಯರ ಕಡೆಗಣ್ಣ ನೋಟದಿಂ ಪುಟಿಕಿಸದ ತಿಳಕ ಮಿಲ್ಲ, ವನದೇವತಾನಯನಾಂಶು ಕ್ಷೀರರಸನಿಷೇಕದಿಂ ಮುಕ್ಕುಳಿಸದ ವಕುಳಮಿಲ್ಲ, ಮಧುವಧುವ ನಪ್ಪಿ ತಳ್ವಿನಂ ಕುಸುಮಿಸದ ಕುರವಕಂಗಳಿಲ್ಲ, ಅಗ್ನಿಶಾವವರೆಯಾಗದರ ಗಿಳಿಗಳಿಲ್ಲ, ಶಂಬರಾರಿಯ ಕರ್ಪ್ಪೂರವಿಲ್ಲಿನ ಮೌರ್ವಿಯಾಗದಳಿಮಾಲೆಯ ಝುಂಕಾರಮಿಲ್ಲ, ವಿರಂಚನಂಚೆಯುಂ ವಳೆಂಚಲೆಯುದಂಚೆ ಯಿಲ್ಲ, ಕುಮಾರನ ಮಯೂರಮಂ ಕೂರಿಸದ ಸೋಗೆವೆಣ್ಣಿಲ್ಲ, ರತಿಯ ಕೃತಕಾಚಳಂಗಳೊಪ್ಪಮ ನದಿರ್ಪದ ಕೃತಕಾಚಳಂಗಳಿಲ್ಲದಲ್ಲ ದೆಯುಂ.

ಕಂ॥ ಭೂರಮಣಿಯ ಶೃಂಗಾರಾ ।
ಗಾರ ಮಿದೆನೆ ವಿರಹಿಜನಕೆ ಮದನನ ಕಾರಾ ॥
ಗಾರ ಮಿದೆನೆ ಬಗೆಗೊಳ್ವುವು ।
ಹಾರಿದ್ರಕಜೀರಕಾರ್ದ್ರಕೇಕ್ಷುವನಂಗಳ್ ॥ ೨೩ ॥

ವ॥ ಮತ್ತಮುತ್ತರಳಜಳಚರಾನೀಕಂಗಳೆನಿಸುವ ತಟಾಕಂಗಳುಂ, ಸಲ್ಲಲಿತಮೃದುಮೃಣಾಳ ದಂಡಂಗಳೆನಿಪ ಕಮಲಷಂಡಂಗಳುಂ, ವಿರಹಿಜನಭೀಕರಂಗ ಳೆನಿಸುವ ಕುಮುದಾಕರಂಗಳುಂ, ಅವಗಾಹಿತಪಥಿಕಜನಮನಕರುಣಿಗಳೆನಿಪ ಪುಷ್ಕರಿಣಿಗಳುಂ, ವಿಮಳರತ್ನಸೋಪಾನಕಳಾಪಂಗಳೆನಿಪ ಕೂಪಂಗಳುಂ, ಸರಸಸಾರಸಕಳಾಪಿಗಳೆನಿಪ ವಾಪಿಗಳುಂ, ವನವನಿತೆಯ ದುಕೂಲದಂಚೆಯೆನಿಪ ಬೆಂಚೆಗಳುಂ, ಸಂತತಸಂತೃಪ್ತಗೋಕುಲಶ್ರೇಣಿಗಳೆನಿಪ್ಪ ದ್ರೋಣಿಗಳುಂ, ಮದನರಾಜ ವಿಜಯತಂತ್ರಂಗಳೆನಿಪ ಘುಟೀಯಂತ್ರಂಗಳುಂ, ನದೀಲತಾಂಗಿಯ ಮೇಗಾಲ್ಗಳೆನಿಪ್ಪ ಪರಿಕಾಲ್ಗಳುಂ, ಅನಂಗಶೃಂಗಾರಲೀಲೆಗಳೆನಿಪ್ಪ ಪಾನೀಯಶಾಲೆಗಳುಂ, ಅಧಿಕಸೌಗಂಧಕೋಟಿಗಳೆನಿಪ್ಪ ಪುಷ್ಪವಾಟಿಗಳುಂ, ಪರಿಮಳಿತಮಂದಪವನಂಗಳೆನಿಪುಪವನಂಗಳುಂ, ಪೌರಜನಮನೋಭಿರಾಮಂಗಳೆನಿಸು ವಾರಾಮಂಗಳುಂ, ಆಶ್ರಿತಜನಕ್ಕಶೋಕನಿಳಯಮೆನಿಸಿದ ಸತ್ರನಿಳಯಂಗಳುಂ, ವಿವಿಧಲೋಕವಿಶ್ರಮಣಸುಖಪರಿಣತಂಗಳೆನಿಪ ಬೀಡುದಾಣಂಗಳುಂ, ಸಂಚಾರಿತತುರಗವರಿಮಳಗಾ್ರಹ್ಯಾಳಿಗಳೆನಿಪ ಬಾಹ್ಯಾಳಿಗಳುಂ, ಅನುದಿನವಿನೋದಿತಾನೇಕಕರಿಗಳೆನಿಸುವಾನೆವಱಿಗಳುಂ, ಸತತಾಭ್ಯಾಸನಿರತ ಜನಾನುಗಾಮಿಗಳೆನಿಪ್ಪಾಯುಧಶ್ರಮಭೂಮಿಗಳುಂ, ಬೀರಸಿರಿಯ ಬಿಂಕದ ಬಳ್ಳಗಂಗಳೆನಿಸುವವಂಕಂಗಳುಂ, ವಿವಿಧಗೋಕುಲಶ್ರೀಷ್ಠಂಗಳೆನಿಪ ಗೋಷ್ಠಂಗಳುಂ, ತನಗನೂನಶೋಭೆಯಂ ಪಡೆಯೆ.

ಕಂ॥ ಅಪರಿಮಿತಪೌರಕಳಕಳ ।
ಮಪೇತಬಾಳಾಪ್ರಪಂಚ ಮತಿವಿಶ್ರುತ ಮಿಂ ॥
ತುಪಶಲ್ಯಂ ವಿರಹಿಗಳೆರ್ದೆ ।
ಗುಪಶಲ್ಯ ಮಿದೆನಿಸಿ ಸಂತತಂ ಸೊಗಯಿಸುಗುಂ ॥ ೨೨ ॥

ವ॥ ಅದಕ್ಕನತಿದೂರಮಾಗಿ.

ಚಂ॥ ಜಳವಿಹಗೀಸಹಸ್ರವಿರುತಂ ಮರುತಂ ಮರುತಂಗೆ ಕಂಪನೀ ।
ವಲರ್ಗಳ ನೊಪ್ಪೆ ವಾತಚಳಿತಂ ಲುಳಿತಂ ವಳಿತಂಮೊಳುಣ್ಮಿ ನಿ ॥
ಚ್ಚಲು ಪೆಸೆದತ್ತು ಮತ್ಸ್ಯಮಕರಂ ಸುಕರಂ ಮಕರಂದರೇಣುವಿಂ ।
ಕಲಸಿ ಮಹಾಂಬುಬಾತಿ ಮೆಱೆಗುಂ ನೆಱೆಗುಂ ಕಱೆಗುಂ ಸುಶೋಭೆಯಂ ॥ ೨೪ ॥

ವ॥ ಅಲ್ಲಿಂದ ಮೊಳಗೆ.

ಕಂ॥ ಪ್ರಾಕಾರಂ ಕಾಂಚನರಚಿ ।
ತಾಕಾರಂ ಲಬ್ಧಲಲಿತಮಣಿತತಿಶೀರ್ಷ ॥
ಸ್ವೀಕಾರಂ ಧೃತವಿತತಪ ।
ತಾಕಾರಂಜಿತವಿಯತ್ತಳಂ ಸೊಗಯಿಸುಗುಂ ॥ ೨೫ ॥

ಮ॥ ಬಲವದ್ವಜ್ರಮಹಾಕವಾಟಮೆರ್ದಗಳ್ಕ್ಕಟಂ ರಿಪುಶ್ರೇಣಿಗ ।
ಟ್ಟಲೆ[ಗಳ್ಸಾಲ್ವುದು]ವೈರಿವೀರರಸಮಂ ತೊಗಲ್ ಚತುರ್ಗೋಪುರಂ ॥
ವಿಲಸನ್ನೂಪುರ ವಾಳ್ವ ಭೂಭುಜನ ವೀರಶ್ರೀಗೆ ವಂಕಂ ಯುಗ ।
ಪ್ರಲಯಾತಂಕ ಮರಾತಿಗಳ್ಗೆನಿಸಿಚೆಲ್ವಾಕೋಟೆ ಸಂಗೀಕೃತಂ ॥ ೨೬ ॥

ಚಂ॥ ತೊಳಗುವ ಪೊನ್ನ ಕೋಟೆಯ ಹರಿನ್ಮಣಿಗೋಪುರದಿಂದ್ರನೀಲದ ।
ಟ್ಟಳೆಗಳ ಪದ್ಮರಾಗಜಿನಗೇಹದ ಸೌಧಗೃಹಂಗಳಂಶುಮಂ ॥
ಡಳಿ ನೆಗೆದಲ್ಲಿ ಮಂಡಳಿಸೆ ಪೌರಜನಕ್ಕೆಸೆಗುಂ ವಿತಾನ ಮಾ ।
ಗಳವಡೆ ಪಂಚವರ್ಣದಿ ನಜಂ ಸಮೆದಂಬರದಂತಿರಂಬರಂ ॥ ೨೭ ॥

ವ॥ ಅದಱೊಳಗೆ

ಚಂ॥ ಪ್ರಣುತವನಪ್ರದೇಶದೊಳಗಿರ್ಪ ನಮೇರುವಿನಂತೆ ಪೊನ್ನ ಕೇ ।
ವಣದೊಳಗಿರ್ಪನರ್ಘ್ಯಮಣಿನಾಯಕದಂತೆ ವಿರಾಜಿಸಲ್ ನಭೋಂ ॥
ಗಣದೊಳಗಿರ್ಪ ಪೂರ್ಣಶಶಿಮಂಡಳದಂತೆ ಸಮಸ್ತವಸ್ತುಲ ।
ಕ್ಷಣರಚಿತಾಭಿರಾಜ ಮೆಸೆದಿರ್ಪುದು ಬಂಧುರರಾಜಮಂದಿರಂ ॥ ೨೮ ॥

ವ॥ ಅಲ್ಲಿ ಸಲ್ಲಲಿತಸಪ್ತತಳವಿಳಾಸ(ವಿಳಸಿ)ತವಾಸಮುಂ, ವಿಚಿತ್ರಚಿತ್ರಕರ್ಮನಿರ್ಮಾಪಣ ಸೌಮ್ಯಮುಂ ಸಕಳರತ್ನಸಂದರ್ಭಸಾರಸೌಂದರ್ಯಸಂಪೂರ್ಣಮುಂ ಸಮಸ್ತವಸ್ತುವಿಸ್ತೀರ್ಣಮುಮಾಗಿ.

ಮ। ಸ್ರ॥ ನಿರುತಂ ಶುದ್ಧಾಂತಕಾಂತಾಗೃಹಪರಿವೃತಿಯಿಂ ಹಸ್ತಿಶಾಲಾದಿನಾನಾ ।
ಪರಿವಾರಾವಾಸವಿನ್ಯಾಸದಿ ನತುಳಪತಾಕಾವಳೀಲೀಲೆಯಿಂ ಭಾ ॥
ಸುರಘಂಟಾಜಾಲದಿಂ ತೋರಣರುಚಿನಿಚಿತದ್ವಾರದಿಂ ರಂಜಿಸಿರ್ಕುಂ ।
ಕರುಮಾಡಂ ಕಾಂತಿನೀಡಂ ಮಣಿಮಯಕಳಶಾಪೀಡೆ ಮುತ್ತುಂಗಚೂಡಂ ॥ ೨೯ ॥

ಚಂ॥ ಅಸುಗೆಯ ಕೆಂಪು ಬಾಳೆಯ ಪಸುರ್ಪು ತಮಾಳದ ಕರ್ಪು ಚಂಪಕ ।
ಪ್ರಸರದ ಪೊನ್ನ ಬಣ್ಣ ವರೆಗುಂದದ ಕುಂದದ ಬೆಳ್ಪು ಸುತ್ತಲುಂ ॥
ಪಸರಿಸಿ ಪರ್ವಿ ಮಾಣಿಕದ ಪಚ್ಚೆಯ ನೀಳದ ಪೊನ್ನ ಬೆಳ್ಳಿಯಾ ।
ಪಸರದ ಚೆಲ್ವ ನಿಮ್ಮಡಿಸೆ ಭೂಪಗೃಹೋಪವನಂಗಳೊಪ್ಪುಗುಂ ॥ ೩೦ ॥

ವ॥ ಅಂತು ಮಗಧ ವಿಷಯದಂತೆ ರಾಜಗೃಹಸನಾಥಮುಂ, ನಾಟಕಪ್ರಕರದಂತೆ ವಿಪುಳವೀಧೀ ವಿಭಾಸಿಯುಂ, ಮೇಘಪಟಳದಂತೆ ತಟಚ್ಛೃಂಗಾಟನಿರತಮುಂ, ಸಿತಪಕ್ಷದಂತೆ ಚಂದ್ರಕಿರಣಾಂಕಿತ ನಿಶಾಂತನುಂ, ಗ್ರಹಗ್ರಾಮದಂತೆ ವಿತತಕೇತುಶತಶೋಭೆಯುಂ, ಸೌಪರ್ಣನಂತೆ ಸಮಗ್ರಸಚಿವ ರಾಜಿತಪ್ರಭಾವಮುಂ, ಛಂದೋನಿಬಂಧನದಂತೆ ಯತಿಗಣಮುಂ, ಶರತ್ಸಮಯದಂತೆ ಸುಮನೋವ ನಾಭಿರಾಮಮುಂ, ವಿಜಯಾರ್ಧಕುಧರದಂತೆ ಅಶೇಷವಿದ್ಯಾಧರನಿವಾಸಮುಂ, ಮುಖಕಮಳದಂತೆ ಸದ್ವಿಜಕುಳೋಪಶೋಭಿಯುಂ, ದಕ್ಷಿಣಕ್ಷೋಣಿಯಂತೆ ಭರತಜನಪರೀತಮುಂ[1] ಚಾಪಗುಣದಂತೆ ಮಾರ್ಗಣನಿಷೇವ್ಯಮುಂ, ಸಮುದ್ರದಂತೆ ಸಹಜಲಾವಣ್ಯಕಾಂತಾರಾಗರಮ್ಯಮುಂ, ಪಾತಾಳದಂತೆ ಬಹುಭುಜಂಗಗಣಭೋಗಭಾಗಿಯುಂ, ಪವನಪಥದಂತೆ ದಿವ್ಯಸಿಂಧುರವಿಭಾಸಿಯುಂ, ಫಲಿತವನದಂತೆ ಬಹುರಾಜಿವಾಚಿತಮುಂ, ಆದಿತ್ಯನಂತೆ ವಿವಿಧಗೋಕುಲಪ್ರಶಸ್ತಮುಂ, ಶುದ್ಧಾಂತನಿಳಯದಂತ ನೇಕಮಹಿಷೀಸಮೇತಮುಂ, ನೀಳಾಬ್ಜನಾಳದಂತೆ ನಿಷ್ಕಂಟಕಾತ್ಮಮುಂ, ಸತ್ಪುರುಷನಂತೆ ನಿಷ್ಕಪಟ ಮಹಿಮಾವಳಂಬಿಯುಂ, ಯಾಮ್ಯದಿಶೆಯಂತೆ ಧರ್ಮಪ್ರಭಾವವಿಭಾವಿತಮು ಮೆಂಬ ಮಹನೀಯ ಮಹಿಮೆಯುಂ ತಳೆದು.

ಮ। ಸ್ರ॥ ಅತಿಲಾವಣ್ಯಾಪ್ಸರಃಸಂತತಿಗೆ ನೆಲೆ ಸುರಾಸೇವಿತಾನಂತದಾನಾ ।
ನ್ವಿತಮಾಧುರ್ಯಾಪ್ಸರಃಸಂತತಿಗೆ ನೆಲೆ ಸದಾಸೇವಿತಾನಿಂದ್ರಜನ್ಮಾ ॥
ತತ ಮಿಂದ್ರಾರಾಧ್ಯಜನ್ಮಪ್ರತಿತಮಹಿಮ ನಾನೆಂದು ಕಾಕಂದಿ ನಾಕೋ ।
ನ್ನತಿಯಂ ಪ್ರೋತ್ತುಂಗ ಸೌಧಾಂಶುಗಳೊಳೆ ನಗುವಂತಿರ್ಪುದಾಧಿಕ್ಯದಿಂದಂ ॥ ೩೧ ॥

ಚಂ॥ ಅದು ಸಲೆ ರಾಜಶೂನ್ಯ ಮುರುರಾಜವಿಭಾಸಿಯ ನಾಂ ದ್ವಿಜಿಹ್ವಸಂ ।
ಪದ ಮದು ಸಜ್ಜನಕ್ಕೆ ಶರಣಾ ನವಿಚಾರಿ ನಿಸ್ಪೃಷ್ಮಮಂತದಾಂ ॥
ಸವಮಳಧರ್ಮಮಾರ್ಗಿ ಯೆನೆ ಭೋಗವತೀಪುರ ನೆನ್ನ ನೆಂತು ಪೋ ।
ಲ್ವುದು ಚಿರ ಮೆಂದಧಃಕರಿಸುವಂತಿರೆ ಮೇಲೆನಿಸಿರ್ಪುದಾಪುರಂ ॥ ೩೨ ॥

ಮ॥ ಅದನಾಳ್ವಂ ಶರಣಾರ್ಥಿಪಾರ್ಥಿವಕುಳಕ್ಷೋಣೀಧರಂ ಬೋಧಿದು ।
ರ್ಮದಭೂಪಾಳಮದಾಂಧಸಿಂಧುರದಳತ್ಕಂಠೀರವಂ ಧರ್ಮಸಂ ॥
ಪದುದೀರ್ಣಾರ್ಣವಪೂರ್ಣಚಂದ್ರ ನೆನಿಸಿರ್ಪಿಕ್ಷ್ವಾಕುವಂಶೋನ್ನತಂ ।
ಸದಯಂ ಕಾಶ್ಯಪಗೋತ್ರಪೂಜ್ಯತಿಲಕಂ ಸುಗ್ರೀವಭೂಪಾಲಕಂ ॥ ೩೩ ॥

ಕಂ॥ ಜಗಮೆಲ್ಲ ಮೊಂದೆ ಕೊರಲೊಳ್ ।
ಪೊಗಬಿಡೆ ಕೊರಲ್ಕೊಂಡು ಧರೆಯ ನುದ್ಧರಿಸಿ ಸಮಂ ॥
ತಗಲದೆ ಸಿರಿಕೊರ ಲೊಪ್ಪಿರೆ ।
ಸೊಗಯಿಸಿ ಸುಗ್ರೀವವೆಸರೊ ಳಾನೃಪ ನೆಸೆದಂ ॥ ೩೪ ॥

---

[1] ಭರಿತಮುಂ.

ಕಂ|| ಎರೆದರ್ಥಿಗೀವ ದಾನದೊ।
ಳರಿವಂಶಮ ನಡೆಸಿ ಕಡಿವ ದಾನದೊಳಿಳೆಯಂ ॥
ಪರಿಪಾಲಿಪ ದಾನದೊಳೇಂ।
ಕರಿಯಂತಿರನಂತದಾನ ನೆನಿಸಿದನೊ ನೃಪಂ || ೩೫ ॥

ಆಹವದೊಳಹಿತನೃಪಸಂ।
ದೋಹಮ ನಾಕ್ರಮಿಸೆ ಬೀರಸಿರಿ ಜಯಲಕ್ಷ್ಮೀ ॥
ಗೇಹ ನೆನಿಸಿದ ಸುಕಂಠನ।
ಬಾಹಾಬಳ ವಿಳೆಗೆ ಪೊಗಟಲೇ ನೆನ್ನಳವೇ || ೩೬ ॥

ವ॥ ಮತ್ತಂ.

ಚಂ|| ಅರಿಹರಿಣಂಗಳಂಗ(ಜ)ಱು ಬೆರ್ಚಿಸಿ ವೀರವಿರೋಧಿಗಂಧಸಿಂ।
ಧುರಗಣಮಂ ಪಡಲ್ವಡಿಸಿ ಕೂರಸಿದಾಡೆಯನೂನಸನ್ನಖೋ ||
ತ್ಕರಮಹಿತಾರುಣಾಂಬುರುಚ ಕೇಸರ ಮಾಗಿರೆ ವೀರಲಕ್ಷ್ಮಿ ಯೆಂ।
ಬುರುವನಸಿಂಹಿಯಂ ಸ್ವಭುಜಪಂಜರದೊಳ್ ಸೆಱೆಗೆಯ್ದ ನಾನೃಪಂ || ೩೭ ||

ಕಂ|| ಘನಸಮಯದೊಳಗೆ ಘರ್ಮಂ।
ಜನಿಯಿಸುವುದಾಗಳಂತೆ ಮುಱಿಕೊಳ್ವೊಲಾ ||
ಜನಪನ ಕೋಪದ ಬಱಿಯೊಳ್।
ಜನಿಯಿಸಿ ಜನಮಂ ಪ್ರಸಾದರಸ ಮಾಱಿಸುಗುಂ || ೩೮ ||

ಕಂ|| ಅನತರೊಳಂ ವಿನತರೊಳಂ।
ಘನರಕ್ಷಾನಿಧಿಯಿ ನಧಿಕಸರಣಂ ತಾನೆಂ ॥
ಬಿನಮೊದವಿಸಿ ಚೋದ್ಯ ಮಿದೆನೆ।
ಮುನಿಸುಮ ನೊಸಗೆಯುಮ ನೊಡನೆ ಮೆಱೆವಂ ಭೂಪಂ || ೩೯ ||

ವ|| ಮತ್ತಮಾನೃಪಂ ಸಪ್ತಾಂಗಸಂಗಿಯಾಗಿಯುಂ ಸಪ್ತಾಂಗಸಂಗಿ ಯಲ್ಲು, ಸಕಳ ಭೂತಳೋಪಕಾರಿಯಾಗಿಯುಂ ಸಕಳಭೂತಳೋಪಕಾರಿ ಯಲ್ಲು, ಸಮದನಾಗಿಯುಂ ಸಮದ ನಲ್ಲು, ವಿಗ್ರಹಕರಾಳನಾಗಿಯುಂ ವಿಗ್ರಹಕರಾಳನಲ್ಲು, ಮಾರ್ಗಣಾನುರಕ್ತನಾಗಿಯುಂ, ಮಾರ್ಗಣಾನುರಕ್ತ ನಲ್ಲು, ಪಟುಪ್ರತಾಪನಾಗಿಯುಂ ಪಟುಪ್ರತಾಪಿ ಯಲ್ಲು, ವಿದಗ್ಧಶರಣನಾಗಿಯುಂ ವಿದಗ್ಧಶರಣ ನಲ್ಲು, ಮಾನವಾಹಿತ ನಾಗಿಯುಂ ಮಾನವಾಹಿತ ನಲ್ಲು, ಮಾತಂಗಚರಿತನಾಗಿಯುಂ ಮಾತಂಗಚರಿತ ನಲ್ಲು, ಕ್ಷಿತಿನಾಥನಾಗಿಯುಂ, ಕ್ಷಿತಿನಾಥ ನಲ್ಲು, ಅನಂಗಸುಭಗನಾಗಿಯುಂ ಅನಂಗಸುಭಗ ನಲ್ಲು, ಪರಾರ್ಥಪರನಾಗಿಯುಂ ಪರಾರ್ಥಪರ ನಲ್ಲು, ಅನೀತಿರಹಿತನಾಗಿಯುಂ ಅನೀತಿರಹಿತನಲ್ಲು, ವಿದಿತಭೀರುಭಾವನಾಗಿಯುಂ ವಿದಿತಭೀರುಭಾವನಲ್ಲು, ಎಂಬ ವಿರುದ್ಧಗುಣಮ ನಳವಡಿಸಿ.

ಕಂ|| ಭ್ರಮರಹಿತಂ ಗುಣಸಹಿತಂ ।
ಸುಮನೋ(ಮ)ಹಿತಂ ನಿಜಾಜ್ಞೆ ಪೂಮಾಲೆಯುಮೋ ॥
ಲೆ ಮಹೀಶಮಸ್ತಕಾಗ್ರದೊ ।
ಳಮರ್ದಿರೆ ಸುಗ್ರೀವ ನೇನಳಂಕರಿಸಿದನೋ ॥ ೪೦ ॥

ವ|| ಅಂತೆನಿಸಿದ ಸುಗ್ರೀವಮಹಾರಾಜಂಗೆ ಸುಗ್ರೀವಕಂಠಿಕೆಯೆನಿಪ್ಪ ಶೋಭಾಸಮೃದ್ಧಿಯುಮ, ನಾಕಾಶ್ಯಪಗೋತ್ರಪ್ರದೀಪಂಗೆ ದೀಪ್ತಿಮಾಳಿಕೆಯೆನಿಪ್ಪ ಸಹಜಪ್ರಕಾಶಮುಮ, ಮಾಸತ್ಯರತ್ನಾಕರಂಗೆ ಜಾಹ್ನವಿಯೆನಿಪ್ಪ ಜಗತ್ಪವಿತ್ರವೃತ್ತಿಯುಮ, ನಾಮನುಜೇಂದ್ರಚಂದ್ರಮಂಗೆ ಚಂದ್ರಿಕೆಯೆನಿಪ್ಪ ಕಾಂತಿಯುಮ, ನಾಯಿಕ್ಷ್ವಾಕುವಂಶಮಾರ್ತಂಡಂಗೆ ದಿನಶ್ರೀಯೆನಿಪ್ಪ ತೇಜಮುಮ, ನಾಪ್ರತಿಮನ್ನಮಂದರಂಗೆ ರುಚಿರಮೇಖಳೆ ಯೆನಿಪ್ಪ ಮಹಿಮೆಯುಮ, ನಾಪರಾರ್ಘಪಾರಿಜಾತಂಗೆ ಕಲ್ಪಲತೆಯೆನಿಪ್ಪನೂನದಾನಮುಮ, ನಾವಿವೇಕಚತುರಾನನಂಗೆ ವಾಗ್ವಧು ವೆನಿಪ್ಪ ಚಾತುರ್ಯವಿಭವಮುಮ, ನಾಸೌಂದರ್ಯಕಂದರ್ಪಂಗೆ ರತಿಯೆನಿಪ್ಪ ಸೌಭಾಗ್ಯಗುಣಮುಮಂ ಸಹಜಾನುಬಂಧಬಂಧುಪ್ರೇಮದಿಂದ ಮಪ್ಪುಕೆಯ್ದು.

ಉ|| ಸಾಮಜಮಂದಗಾಮಿನಿ ಜಿತಾಮರಕಾಮಿನಿ ಭವ್ಯಲೋಕರ ।
ತ್ನಾಮಣಿ ಮಾನಿನೀಜನಶಿರೋಮಣಿ ಸದ್ಗುಣಭೂಮಿ ಭಾಗ್ಯಪೌ ॥
ಳೋಮಿ ವಿಶುದ್ಧಗೋತ್ರೆ ಸುಚರಿತ್ರಪವಿತ್ರೆ ವಿವೇಕದೃಷ್ಟಿ ಧ ।
ರ್ಮಾಮೃತಸಾರಯಷ್ಟಿ ಜಯರಾಮೆ ಸುಶೀಲದ ಸೀಮೆ ರಂಜಿಪಳ್ ॥ ೪೧ ॥

ಕಂ|| ಅನುರಕ್ತೆ ನಚ್ಚಿನಸಿಯುವ ।
ಳನುಪಮವಿಗ್ರಹವಿಳಾಸೆ ತೋಳ್ಪತ್ತುಗೆಯುಂ ॥
ದೆನಗಿಸವಳಿಕೆಯ್ಯಂದದಿ ।
ಪನೀಯೆ ಜಯರಾಮೆವೆಸರ ನಾಸತಿ ತಳೆದಳ್ ॥ ೪೨ ॥

ಚಂ|| ನಡೆ ಮಡು ಲೋಕಲೋಚನರ್ಝುಷಕ್ಕೆ ಬೆರಲ್ ಸರಲಂಗಜಂಗೆ ಮೆ ।
ಲ್ಲಡಿ ಪಡಿ ಪಲ್ಲವಕ್ಕೆ ವದನಂ ಸದನಂ ಸಿರಿ ಗರ್ಷ(ವ)[1]ಕ್ಷೆ ಚೆ ॥
ಲ್ವಿಡಿದಲರ್ವಿಲ್ಗೆ [2]ಸೋರ್ಮುಡಿ ಪದಿರ್ಮುಡಿ ಸೋಗೆಗೆ ಪುರ್ಬು ಕೊರ್ಬು ಚೆ ।
ಲ್ವಡೆಗೆ ನಖಂ ಮುಖಂ ಮತಿಗ ತೋಳ್ ಕರವಾಳ್ ಮವನಂಗೆ ಕಾಂತೆಯಾ ॥ ೪೩ ॥

ವ|| ಅಂತು ಮಲ್ಲದೆಯುಂ.

ಚಂ|| ನೆಲೆನೊಲೆ ಕೊತ್ತಳಂ ಜಘನ ಪಟ್ಟಳೆ ಮೇಲುದು ಪೊನ್ನಗೋಂಟೆ ಮೇ ।
ಖಲೆ ಪರಿಖಾಂಬು ನಾಭಿ ನಡುವೀಧಿ ಮುಖಂ ರಣಮಂಡಲಂ ಕಚಂ ॥
ಲಲಿತಪತಾಕೆ ಕಾಂತಿ ಜಳಸಂಪದ ಮಕ್ಷಿಮರೀಚಿ ಶಸ್ತ್ರಸಂ ।
ಕುಲ ಮೆನೆ ನೀರೆ ತೋಱುವ ಳನಂಗನ ಜಂಗಮದುರ್ಗಲಕ್ಷ್ಮಿಪೋಲ್ ॥ ೪೪ ॥

ವ|| ಮತ್ತಂ.

[1] ರಕ್ಷೆ. [2] ಕಾರ್ಮುಡಿ.

ಚಂ|| ಕಣೆಯದ ಚೆಲ್ವು ಕಂಪಣ ಮಡಂಗದ ಸುಯ್ ಪದೆಯಿಪ್ಪ ಶಕ್ತಿ ಕ।
ಣ್ಣೊಣಗರ್ಗಳವಟ್ಟ ಚಾಪಲತೆ ಮಿಕ್ಕ ಸರಂ ಕಟಮಂಡಲಾಗ್ರದು ||
ಳ್ಪಣತೆ ಲತಾಂಗಯಷ್ಟಿ ಕುಚಚಕ್ರದ ಮಂಡಲಸದ್ವಿಳಾಸಮಾ।
ಳ್ಪಣಿಯುರಮಾದುದಾರಮಣಿ ಬಾಲೆಯೊ ಕಾಮನ ಶೀಣಶಾಲೆಯೋ || ೪೫ ||

ಮಂ|| ಜಗದಾಲೋಕಸುಖಕ್ಕೆ ಕಣ್ದೆಱೆವಿಗಂ ಸಂಸಾರಸಾಫಲ್ಯ ಮು।
ರ್ವಿಗೆ ಸರ್ವಾಭರಣಂ ಸ್ಮರಂಗೆ ವಿಜಯಾಸ್ತ್ರಂ(ಸಾರ)ಸೌಂದರ್ಯಸ್ಪೃ ||
ಷ್ಟಿಗೆ ಬೀಜಂ ನೊಸಲಿಂಗ ತಾಯ್ವನೆ ವಿಳಾಸಕ್ಕೋಲ ಲಾವಣ್ಯಲ।
ಕ್ಷ್ಮಿಗೆ ಸಂಕೇತನಿಕೇತ ಮೆಂಬುದು ಜನಂ ರೂಪಂ ಮಹಾದೇವಿಯಾ || ೪೬ ||

ವ|| ಅದಲ್ಲದೆಯುಂ.

ಚಂ|| ಅರಸನ ತೇಜ ಮಾಕ್ರಮಿಸೆ ಬೇವಸಮುತ್ತರಿಭೂಪಕೋಟಿ ವಿ।
ಸ್ತರಿಸುವುದಾಲತಾಂಗಿಯ ಪದಾಶ್ರಯಮಂ ಗಡೆಗೊಂಡು ಚೋದ್ಯಮು ||
ಲ್ತುರಿವರಿವುಗ್ರರೋಚಿಯ ಬಿಸಿಲ್ ಸುಡೆ ಬೇವಸಮುತ್ತು ಬಂದು ಶಂ।
ಥರ ಪಡೆ ಪೊರ್ದಿ ತತ್ಪ್ರಿಯುಪಯೋಜಿಸಿಯುಂ ಸುಖಿ ಯಾಗಲಾಗದೇ || ೪೭ ||

ವ|| ಇಂತೆನಿಸಿ ಪನುಪಮಪ್ರಭಾವಮಂ ತಾಳ್ದಿದಾಮಹಾದೇವಿಯೊಡನೆ.

ಕಂ|| ಕೂರ್ಮೆಯೊಳನುಭವಿಸುತ್ತು ಮು।
ದೊರ್ಮೆಯು ಮವಚಱದೆ ಕಾಮಸುಖದಿಂ ಜನಮಂ ||
ಪೆರ್ಮೆಗಿಡೆದಿರ್ದ ನಂತಿದು।
ಧರ್ಮಾರ್ಥವಿರುದ್ಧ ಮಲ್ಲದೆನೆ ನಯನಿಪುಣರ್ || ೪೮ ||

ಮಂ|| ಪ್ರಜೆಯಂ ಪಾಲಿಸಿ ಸತ್ಪರಿಗ್ರಹದ ಪೆರ್ಚಂ ಮಾಡಿ ದುಷ್ಟಾವನೀ।
ಭುಜರಂ ಮರ್ದಿಸಿ ದಾನಧರ್ಮರುಚಿಯೊಳ್ ತಳ್ಪೊಯ್ದು ಯೋಗ್ಯಪ್ರಧಾ ||
ನಜನನ್ಯಸ್ತಸಮಸ್ತರಾಜ್ಯಭರ ನಾಗಿರ್ದಾನೃಪಾಲಂಬೊ ಲಂ।
ಗಜಕೇಳೀರತ ನಪ್ಪುದಲ್ಲಪನಗಂ ಕೊಂಡಾಡೆ ಹಾಸ್ಯಾಸ್ಪದಂ || ೪೯ ||

ವ|| ಎನಿಸಿ ಸುಖಸಂಕಥಾವಿನೋದದಿಂ ದಿರ್ಪನ್ನೆಗ ಮಿತ್ತಲ್.

ಕಂ|| ಗೀರ್ವಾಣಲೋಕಸುಖಮಂ।
ಪೂರ್ವೋಕ್ತಪ್ರಾಣತೇಂದ್ರ ನುಪಭೋಗಿಸಿ ತೀ ||
ರ್ದುರ್ವಿಗೆ ಬರಲರೆ ಮುಂಚಿ ಸು।
ಪರ್ವಾಗ್ರಣಿಗಾಯ್ತು ನಜ್ರಿಗಾಸನಕಂಪಂ || ೫೦ ||

ವ|| ಅಂತು ತನಗಾಸನಕಂಪಮಾಗೆ ಪಾಕಶಾಸನಂ ಭರತಕ್ಷೇತ್ರದೊಳ್ ಪರಮೇಶ್ವರ ಸ್ವರ್ಗಾವತರಣಕಲ್ಯಾಣ ಮಿನ್ನಱುದಿಂಗಳಕ್ಕು ಮೆಂಬುದಂ ಜಲಕ್ಕನವಧಿಬೋಧದಿಂದ ಮಱಿದು.

ಕಂ|| ಧನಪತಿಯುಂ ನಿತ್ಯಾರ್ಚಿತ ।
ಜಿನಪತಿಯುಂ ಭವ್ಯಜನಮನೋರಥನಳಿನೀ ॥
ದಿನಪತಿಯುಂ ಕಿಂಪುರುಷ ।
ಜ್ಜನಪತಿಯುಂ ಬರಿಸಿ ಪೇಟ್ದು ಮನದುತ್ಸವಮಂ || ೫೧ ||

*ಮ|ಸ್ರ|| ಜಿನಪಸ್ವರ್ಗಾವತಾರೋದ್ಯಮ ಮಿದು ಮಟಿಕಿಗಾಲಂ ಭವದ್ಭಕ್ತಿ ಕಾದಂ ।
ಬಿನಿ ಹೇಮದ್ಯೋತಿ ಸೌದಾಮಿನಿ ಮಣಿನಿಚಯಚ್ಛಾಯೆ ಗೀರ್ವಾಣಬಾಣಾ ॥
ಸನಭಾಗಂ ತೂರ್ಯಘೋಷಂ ಸ್ತನಿತ ಮೆನಿ[ಸೆ] ಕಾಕಂದಿಯೊಳ್ ಭವ್ಯಸಸ್ಯಾ ।
ವನಿಯೊಳ್ ರತ್ನೋತ್ಕರಾಸಾರಮ ನಖಿಳರ(ಿೋ)ಧೂಮಮಮಂ ಮಾಡು ನೀಡಂ ||೫೨||

ವ|| ಎಂದು ಬೆಸಸಲೊಡಂ.

ಕಂ|| ಶತಮುಖನನುಮತ ಮೆಂಬೆಲ ।
ರ ತೀಟದಿಂ ಯಕ್ಷಕಲ್ಪವೃಕ್ಷದ ಕುಸುಮಂ ।
ಕ್ಷಿತಿಗಲ್ಲೊಕ್ಕವು ದೆನೆ ಸೂ ।
ಸಿತಂದು ಸಾರ್ಧತ್ರಿಕೋಟಿ ರತ್ನಾಸಾರಂ || ೫೩ ||

ವ|| ಅಂತು ಮಲ್ಲದೆಯುಂ.

ಮ|| ಸುರಿಯುತ್ತಿರ್ದಪು ವೀಗಳಭ್ರನದಿ ಯಂಭೋಧಾರೆ ಶೈವಾಲವ ।
ಲ್ಲರಿ ರತ್ನೋತ್ಪಲದಂ(ಪ)ಮಂಡಳಿ ಮೃಣಾಲಶ್ರೇಣಿ ಭೃಂಗೀವರಂ ॥
ಪರೆ ಯೆಂಬಂತಿರೆ ಮುತ್ತು ಪಚ್ಚೆ ಪವಳಂ ವಜ್ರಂ ಸುನೀಲಂ ತರಂ ।
ತರದಿಂ ಸಾಲಿಡೆ ಪಂಚರತ್ನಮಯಧಾರಾಸಾರ ಮೇನೊಪ್ಪಿತೋ || ೫೪ ||

ವ|| ಅಂತು.

ಕಂ|| ಪಂಚಾಶ್ಚರ್ಯಸಮೇತಂ ।
ಪಂಚಮವಸುಧಾರೆ ಮೂಱುಪೊೞ್ತುಂ ಕಱಿಯು ॥
ಲ್ಕೆಂ ಚೋದ್ಯಮಾಯ್ತು ಜಿನವರ ।
ಸಂಚಿತಪುಣ್ಯಪ್ರಭಾವದಿಂ ದಾಪೊೞಲೊಳ್ || ೫೫ ||

ವ|| ಮತ್ತಂ

---

*ಮ|| ವರಕಾದಂಬಿನಿ ನಿನ್ನ ಭಕ್ತಿ ಮಟಿಕಿಗಾಲಂ ಮತ್ಕೃತಾದೇಶ(ಮಂ ।
ಬ್ದ)ರವಂ ಘೂರ್ಣಿಪದಿವ್ಯತೂರ್ಯ ಮೆಳಮಿಂಚುದ್ದಾಮಹೇಮಾಂಶುಗಳ್ ॥
ಸುರಚಾಪಪ್ರಭೆ ರತ್ನರಶ್ಮಿ ಯೆನೆ ನೀಂ ಸುಗ್ರೀವರಾಜೇಂದ್ರಮಂ ।
ದಿರದೊಳ್ ಮಾಡೆಱುದಿಂಗಳಪ್ಪಿನೆಗ ಮಿಂ ಮೆಯ್ವೆರ್ಚೆ ರೈವೃಷ್ಟಿಯಂ ॥

* ಇವೆರಡುಪದ್ಯಗಳೂ ಸಮಾನಾರ್ಥಕಗಳಾದುದರಿಂದ ಈ ಎರಡನೆಯದನ್ನು ರೇಖೆಯ ಕೆಳಗೆ ಬರೆದಿದೆ.

ಚಂ॥ ಅನಿಮಿಷರಾಜ ಸಾನೆಗಟ್ಟಿ ಭಾವಿಜಿನಾಂಬಿಕೆ ಯಪ್ಪ ಪುಣ್ಯಭಾ ।
ಗಿನಿಯ ಸುಕಂಠವಲ್ಲಭೆಯ ವಿಭ್ರಮವರ್ಧನಕಂ ಗಕಾಂತಿವ ॥
ರ್ಧನಕೆ ವಿಳಾಸವರ್ಧನಕೆ ಪುಷ್ಟಿವಿವರ್ಧನಕುದ್ಧ ದಾನವ ।
ರ್ಧನಕೆ ವಿನೋದವರ್ಧನಕೆ ಕಾರಣಭೂತೆಯ ರಾಗೆ ಭಾವಿಸಲ್ ॥ ೫೬ ॥

ವ॥ ಕುಳಾಚಳೋತ್ತುಂಗಶೃಂಗಸದ್ಮಪದ್ಮಾದಿಸರೋವರನಿವಾಸಿನಿಯರಪ್ಪಱುವರಂ ದೇವಿಯರುಮಂ.

ಕಂ॥ ಆ [1]ಹ್ರಸವಿಳಾಸಿನಿಯರಂ ।
ಶ್ರೀಹ್ರೀಧೃತಿಕೀರ್ತಿಬುದ್ಧಿಲಕ್ಷ್ಮಿಯರುಮಂ ಗಂ ॥
ಗಾಹ್ರದವಿಮಳೆಯರಂ ಕಾಂ ।
ತಾಹ್ರಾದಿನಿಗಮಳತನುಗಳಂ ಬೆಸವೇಟ್ಟಿಂ ॥ ೫೭ ॥

ವ॥ ಮತ್ತಂ.

ಕಂ॥ ಪ್ರಣುತಾಕೃತ್ರಿಮಚೈತ್ಯೋ ।
ಲ್ಬಣಮಣಿರುಚಿರುಚಿರಮಪ್ಪ ರುಚಕಾದ್ರಿಯ ಮೂ ॥
ಡಣ ತೆಂಕಣ ಪಡುವಣ ಬಡ ।
ಗಣ ದೆಸೆಗಳೊಳೊಗೆದುವಂದನುಕ್ರಮದಿಂದಂ ॥ ೫೮ ॥

ವ॥ ಒಪ್ಪುತಿರ್ಪ ವೈಡೂರ್ಯಕಾಂಚನಪ್ರಮುಖ ಕೂಟಾಷ್ಟಕಂಗಳೊಳ್ ರಮಿಯಿಸುವ ವಿಜಯೆವೈಜಯಂತಿಮೊದಲಾಗೆಯುಂ, ಅಮೋಘಸುಪ್ರಬುದ್ಧಪ್ರಮುಖಶಿಖರಾಷ್ಟಕಂಗಳೊಳ್ ವಸಿಯಿಸುವ ಪ್ರತಿಷ್ಠೆಸುಪ್ರಣಿಧಿಮೊದಲಾಗೆಯುಂ, ಲೋಹಿತಾಕ್ಷಜಗತ್ಕುಸುಮ ಪ್ರಮುಖಚೂಡಾಷ್ಟಕಂಗಳೊಳ್ ಕ್ರೀಡಿಸುವಿಳಾದೇವಿ[ಸುರಾದೇವಿ]ಮೊದಲಾಗೆಯುಂ, ಸ್ಫಟಿಕಕಾಂಚನ ಪ್ರಮುಖಶೃಂಗಾಷ್ಟಕಂಗಳೊಳ್ ವರ್ತಿಸುವ ಲಂಬೂಷೆಚಿತ್ರಲೇಖೆ ಮೊದಲಾಗೆಯುಂ, ನೆಗೞ್ತೆವೆತ್ತ ಮೂವತ್ತಿರ್ಬರ್ ದಿಕ್ಕುಮಾರಿಯರುಮಂ ಮತ್ತಮಾನಗದ ವಿಮಳನಿತ್ಯಾಲೋಕ ಪ್ರಭೃತಿಗಳುಂ, ವೈಡೂರ್ಯರುಚಕಪ್ರಭೃತಿಗಳುಂ ರತ್ನ[ಕೂಟ]ರತ್ನಪ್ರಭಪ್ರಭೃತಿಗಳು ಮಪ್ಪ ಪೆಱಪೆಱವು ಮಱುಕೆವೆಸರನೇಕ ಕೂಟಕೋಟಿಗಳೊಳಿರ್ಪ ಚಿತ್ರೆ ಕನಕಚಿತ್ರೆಮೊದಲಾದ ವಿದ್ಯುತ್ಕುಮಾರಿಕೆಯರುಮಂ, ರುಚಕೆ ರುಚಕಾಂತೆಮೊದಲಾದ ದಿಕ್ಕನ್ಯಕಾಮಹತ್ತರಿಯರುಮಂ, ವಿಜಯೆವೈಜಯಂತಿಮೊದಲಾದತಿಪ್ರಬುದ್ಧೆಯರೆನಿಪ ದೇವಿಯರನಿಬರುಮಂ ಬರಿಸಿ.

ಕಂ॥ ಜಿನಮಾತೃಗರ್ಭಸಂಶೋ ।
ಧನಾದಿರಮಣೀರಹಸ್ಯಕುಶಲಕ್ರಿಯೆಗಂ ॥
ಬಿನದಕ್ಕಂ ಬೆಸಕಂ ಮಂ ।
ಡನವಿಧಿಗಂ ನೆರೆದು ನೆಗೞೆ ಮೆಲ್ಲಂದದೊಳಂ ॥ ೫೯ ॥

ವ॥ ಎಂದು ಬೆಸಸಿ ಮತ್ತಂ.

[1] ಆಹ್ರಸ್ವ.

ರಗಳೆ॥ ಅವರೊಡನನೇಕನಗನಿವಾಸಿನಿಯರಪ್ಪ ।
ವಿವಿಧರಮ್ಯಪ್ರದೇಶಂಗಳೊಳ್ ರಮಿಯಿಪ್ಪ ।
ಮಾಳಿನಿಕನತ್ಕನಕದೇವಿ ಮಾಳಿನಿ ಚಿತ್ರೆ ।
ಮಾಳಾವತಿ ತ್ರಿಸರೆ ಕನಕಚಿತ್ರೆ ಸುಚಿತ್ರೆ ।
ಪುಷ್ಪಮಾಳಿಕೆ ಸುರಾದೇವಿ ಕಾಂಚನಮಾಳೆ ।
ಪುಷ್ಪಿಕೆ ಯಿಳಾದೇವಿ ರುಚಕೆ ವಿದ್ಯುನ್ಮಾಳೆ ।
ರತ್ನಪ್ರಭೆ ಜಯಾನಂದೆ ಮಣಿಮಾಲೆ ।
ರತ್ನಮಾಳಿಕೆ ಚಂದ್ರರೇಖೆ ಚಂದ್ರಸುಮಾಲೆ ।
ಮದಿರೆ ಮದಲೇಖೆ ಮಂದಾರಿಕೆ ಲತಾಕಳಿಕೆ ।
ಮದನಿಕೆ ಮರಾಳಿಕೆ ಲವಂಗಿಕೆ ಮಹೋತ್ಪಳಿಕೆ.
ತರಳಿಕೆ ತಮಾಳಿಕೆ ತರಂಗಿಕೆ ವಿಚಿತ್ರಲತೆ ।
ಪರಿಮಳಿಕೆ ಗಂಧವಾಹಿನಿ ಪದ್ಮೆ ಪತ್ರಲತೆ ।
ಗಂಧರ್ವಸೇನೆ ಮನ್ಮಥಸೇನೆಬಂಧೂಕಕಳಿಕೆ ।
ಮಹಾಸೇನೆತಾಂಬೂಲಕಳಿಕೆ ।
ಎಂಬ ಪೆಱಪೆಱವುಮಱಿಕೆಯ ಪೆಸರ್ಗಳಮರಿಯರ್ ।
ಅಂಬುಜಸುಗಂಧಬಂಧುರಭ್ರಮರಿಯರ್ ।
ಇಸುಪೆಸಕ್ಕಮರಪತಿ ಬೆಸಸೇಱಿ ರಾಗದಿಂ ।
ಬೆಸಕೆಯ್ದು ಜಿನಜನನಿಗೆಱಗುವುದ್ಯೋಗದಿಂ ।
ಪೊಳೆವ ಕಣ್ಗಳ ಬೆಳಗು ಬೆಳ್ದಿಂಗಳಂ ಬೀಱಿ ।
ಮಿಳಿರ್ವ ಸುಱಿಗುರುಳ ರುಚಿ ಕಾಳದಿರುಳಂ ಕಾಱಿ ।
ಕೆಂದ(ಳದ) ಕೆಂಪು ಕೆಂದಳಿರ ಚೆಲ್ವಂ ಪರಪೆ ।
ಮಂದಹಾಸದ ಕಾಂತಿ ವಜ್ರರುಚಿಯಂ ನೆರಪೆ ।
ನಗೆಮೊಗದ ಚೆಲ್ವು ಶಶಿಬಿಂಬಶತಮಂ ಕೆದಱಿ ।
ಬಿಗಿದೊಗೆದ ತೋರಮೊಲೆ ಕನಕಕಳಶಮ ನೊದಱಿ ।
ಘನಜಘನ ವಿಭಕುಂಭವಿಭ್ರಮಮ ನತಿಗಱಿಯೆ ।
ತನುಲತೆಯ ಕಾಂತಿ ಸೊಡರ್ಗುಡಿಯ ಚೆಲ್ವಂ ಪಱಿಯೆ ।
ತೊಳಪ ತೊಡವಿನ ಬೆಳಗು ದೆಸೆದೆಸೆಗೆ ನೆಱಿ ನಿಮಿರೆ ।
ಕಳನೂಪುರಂ ನೂಲ ತೊಂಗಲೊಡನುಲಿದಮರೆ ।
ಸೌಂದರ್ಯಸಾರಸದನಂಗಳಿವರೆಂಬಂತೆ ।
ಕಂದರ್ಪಭುಜವಿಜಯವಧುಗಳಿವರೆಂಬಂತೆ ।
ಮನಸಿಜನ ಮಂತ್ರದೇವತೆಯ ರಿವರೆಂಬಂತೆ ।
ನನೆಗಣೆಯ ಮೋಹನಕ್ರಿಯೆಗಳಿವರೆಂಬಂತೆ ।
ಶೃಂಗಾರರಸತರಂಗಿಣಿಯ ರಿವರೆಂಬಂತೆ ।
ಮಾಂಗಲ್ಯಲಕ್ಷಣದ ಕಳೆಗಳಿವರೆಂಬಂತೆ ।

ಕರವೊಸೆದು ದೆಸೆ ಬೆಸಲೆಯಾದುದಬಲೆಯರ ನೆನೆ ।
ಧರಣಿಸಕಳಂ ವಿವಿಧಯುವತಿಮಯ ಮಾದುದೆನೆ ॥
ಬಂದು ಕಾಕಂದಿಪುರಕೆ ಸೋತ್ಸಾಹಮಂ ।
ಗೊಂದಣಿಸಿ ಪೊಕ್ಕರ್ ಸುಕಂತನೃಪಗೇಹಮಂ ॥ ೬೦ ॥

ವ॥ ಅಂತು ಪೊಕ್ಕು ಭಕ್ತಿಭರದಿಂದ ಮೆಱಗಿ.

ಮ।ಸ್ರ॥ ದೊರೆವೆತ್ತಷ್ಟಾರ್ಘ್ಯಮಂ ಮಾಡಿದು ದಡಿಮೊದಲೊಳ್ ಮಂದಹಾಸಂ ಜಳಂ ಬಂ ।
ಧುರಗಂಧಂ ಶ್ವಾಸಗಂಧಂ ತಲೆದುಡುಗೆಯ ಮುತ್ತಕ್ಷತಂ ಚೆನ್ನಪೂ ಪೂ ॥
ಕುರುಳ್ಗರ್ಪುಂ ಧೂಪ ಮಂಗಾಭರಣರುಚಿ ಸೊಡರ್ ಕೇಕರಕ್ಷೀರಧಾರಾ ।
ಚರು ಬಿಂಬೋಷ್ಠಂ ಫಳಂ ತಾನೆನಿಸಿ ಜಿನನ ತಾಯ್ಗಿಂದ್ರಕಾಂತಾಕದಂಬಂ ॥ ೬೧ ॥

ವ॥ ಅಂತು ಪುರಂದರಂ ಸುರಪುರಂಧ್ರಿಕಾಮಹತ್ತರಿಯರ್ಗೆ ಸಮುಚಿತಕ್ರಿಯಾನುಯೋಗಂಗಳಂ ನಿಯಮಿಸಿ.

ಕಂ॥ ಆರಮನೆಯೊಳತ್ತಲಿತ್ತಂ ।
ಚರಿಯಿಪ ದೇವಿಯರ ಪದತಳಾಂಶು ಬಯಲ್ದಾ ॥
ವರೆಯೆಸಳ ನೆಸಗಿದುವು ನೂ ।
ಪುರತತಿ ಬೀಱಿದುವು ಮದನಮೌರ್ವೀರುತಿಯಂ ॥ ೬೨ ॥

ವ॥ ಅವರೊಳೊರ್ವಳ್.

ಕಂ॥ ಸತಿಯ ಕುಚಕೋಕಮಂ ಮುಖ ।
ಶತಪತ್ರಮ ನೊಲ್ದಲಗ್ಬೆಲೆಯತ್ತಂದ ನಹ ॥
ಸ್ಪತಿ ಬಿಸುಪ ನುಱಿದು ಕೆಲಕೆನೆ ।
ಶತಮುಖವಧು ಪಿಡಿದಳೊಪ್ಪೆ ಮುತ್ತಿನ ಕೊಡೆಯಂ ॥ ೬೩ ॥

ವದನೇಂದುವಿನುದಯದೊಳೊದ ।
ವಿದ ಲಾವಣ್ಯಾಂಬುನಿಧಿಯ ನೊರೆದೊಂಗಲಿವೆಂ ॥
ಬುದನೆನಿಸಿ ಜಿನಾಂಬಿಕೆಗಿ ।
ಕ್ಕಿದ ರಮರಿಯರಮರೆ ಧವಳಚಮರೀರುಹಮಂ ॥ ೬೪ ॥

ನಱುಸುಯ್ಗೆ ಸುಱಿವ ತುಂಬಿಯ ।
ಮಱಿವಕ್ಕಿಯೋ ಕೇಶಕೃಷ್ಣಭುಜಗಿಗೆ ಕಡುಪಿಂ ॥
ದೆಱಗುವೆಳನವಿಲೊ ಪೇಱಿನೆ ।
ಮೆಱೆದುದು ಜಯರಾಮೆ ಗಮರಿ ಬೀಸುವ ಕುಂಚಂ ॥ ೬೫ ॥

ಕಂ॥ ಇಂದೆಮ್ಮೊಡನೋಲಗಿಸಲ್ ।
ಬಂದಂ ವಿಧು ದೇವಿ ನಿಮ್ಮ ನಾದರಿಸುವುದೆಂ ॥
ದಿಂದುವನೆ ತಂದು ಕಾಣಿಸು ।
ವಂದ [ಮಿದೆ]ನೆ ಕಾಂತೆ ಗಮರಿ ಕನ್ನಡಿವಿಡಿದಳ್ ॥ ೬೬ ॥

ಎಳಲತೆಯ ಕುಡಿಯ ತಳಿರೊಳ್ ।
ಖಳೆದುದು ಕಾವುಳ್ಳ ಕನಕಕಮಳಂ ಕೌತೂ ॥
ಹಳ ಮಿದೆನೆ ಪೊನ್ನ ಡವಕೆಯ ।
ನೆಳೆಯಳ್ ನಳಿತೋಳ ತಳದೊಳಳವಡೆ ಪಿಡಿದಳ್ ॥ ೬೭ ॥

ಅನುಭವಿಸುವ ಶಶಿಕಳೆಗಳ ।
ನಿನಿಸಂ ಸವಿದೋಱಲೆಂದು ನೀಡಿದಪಳ್ ಮಾ ॥
ನಿನಿ ಗೆನೆ ಬಿಳಿಯಲೆಯಂ ಗಱು ।
ಸಿ ನೀಡುತಿರ್ಪಮರಿ ಪಡೆದ ಳೀಕ್ಷಣಸುಖಮಂ ॥ ೬೮ ॥

ಎಳೆಮಿಂಚುಂ ಸಿಡಿಲುಂ ಬಂ ।
ದಳಸಿದ ಘನಮಾಳೆ ರಂಜಿಪಂಜಿಪತಱಿನಂ ॥
ಲಳಿತೆಯ ರಕ್ಷಾಮರಿಯರ್ ।
ತಳೆದರ್ ಭೂಷಣದ ಬಾಳ ಪೊಳೆಪುಗಳಿಂದಂ ॥ ೬೯ ॥

ರಮಣಿಗೆ ಪಡಿಯಱವೆಸಗೆ ।
ಯ್ವಮರಿಯರ ವಿಚಿತ್ರವೇತ್ರದಂಡಂಗಳವೇ ॥
ನಮದುರ್ಗವೊ ಮದನಜಯಶ್ರೀ ।
ರಮಣಿಯ ಕೆಳದಿಯರ ಕೆಯ್ಯ ಕರ್ಕ್ಕಡೆಗಳವೋಲ್ ॥ ೭೦ ॥

ಅಂಗರುಚಿಭೂಷಣಾಂಶುವ ।
ನಂಗಪ್ರಭೆ ಮಿಸಿಸೆ ಮತ್ತೆ ಮಜ್ಜನವಿಧಿ ತ ॥
ನ್ವಂಗಿಗೆ ಪುನರುಕ್ತ ಮಿದೆಂ ।
ದೆಂಗೆ ಜನಂ ದಿವಿಜಯುವತಿಕೃತಮಜ್ಜನಮಂ ॥ ೭೧ ॥

ಯುವತಿಗೆ ನಿಱಿವಿಡಿದು ದುಕೂ ।
ಲವ ನುಡಿಸುವ ದಿವಿಜೆ ಕನಕನಗಮೇಖಳೆಯಂ ॥
ಧವಳಾಭ್ರಮಾಲೆಯಂ ಸು ।
ತ್ತುವ ವಾರಿದಲಕ್ಷ್ಮಿ ಯೆಸಕಮಂ ಪೊಸೆಯಿಸಿದಳ್ ॥ ೭೨ ॥

ಕಂ॥ ಜಿನಜನನಿಯ ಪದಸೇವೆಗೆ ।
ಘನಸಂಧ್ಯಾರಾಗಲಕ್ಷ್ಮಿಯಂ ತಂದೀಗಳ್ ॥
ದಿನಲಕ್ಷ್ಮಿ ಸಮರ್ಪಿಸಿದಪ ॥
ಳೆನಿಸಿದ ಳಡಿಯೂಡುವವರಿ [1]ಯಾವಕರಸದಿಂ ॥ ೭೩ ॥

ಅಳಿಮಾಳೆಯ ನರುಣಾಂಬುಜ ।
ದಳದೊಳ್ ತಂದಿರಿಸುವಂತಿರಿರಿಸಿದ ಳೊರ್ವಳ್ ॥
ಜಳಜಾಕ್ಷಿ ಯರುಣಚರಣದೊ ।
ಳೆಳವಡೆ ರಣಿತೇಂದ್ರನೀಲಮಣಿನೂಪುರಮಂ ॥ ೭೪ ॥

ಮೇಖಳೆ ಯಿದತನುಶೈಲದ ।
ಮೇಖಳೆ ಯೆನೆ ಸತಿಯ ಗುರುನಿತಂಬದೊ ಳೆಳ್ದೊರ್ವಂ ॥
ತಾಖಂಡಲವಧು ರತ್ನಮ ।
ಯೂಖೋಜ್ಜ್ವಳಕಾಂಚಿಯಂ ತೊಡರ್ಚಿದಳೊರ್ವಳ್ ॥ ೭೫ ॥

ವ॥ ಮತ್ತೊರ್ವಳ್.

ಕಂ॥ ಒಗೆದ ಪಯೋಧರತಟದೊಳ್ ।
ಸೊಗಯಿಪ ನಕ್ಷತ್ರಮಾಲೆ ಯೆನೆ ಬಾಲೆಯ ಮೇ ॥
ಲೊಗೆದ ಪಯೋಧರತಟದೊಳ್ ।
ಸೊಗಯಿಪ ನಕ್ಷತ್ರಮಾಲೆಯಂ ಯೋಜಿಸಿದಳ್ ॥ ೭೬ ॥

ನನೆಗಣ್ ಮಿಾಂಗಳೆ ನೊಪ್ಪುವ ।
ಮೊಗ ಮೆಂಬಲಗೋಳದ ತಡಿಯೊಳಿರಿಸಿದ ಳಿವಳಂ ॥
ಚೆಗಳ ನೆನೆ ಸತಿಯ ಕಿವಿಯೊಳ್ ।
ತಗುಳಿಸಿದಳ್ ಹಂಸರಚನೆಯೋಲೆಯ ನೊರ್ವಳ್ ॥ ೭೭ ॥

ಸ್ಮರಮೋಹನ ಮಂತ್ರಮನು ।
ದ್ಧರಿಸಿದ ಳಿವಳಮಳಕನಕಪಟ್ಟದೊಳೆನೆ ಸೌಂ ॥
ದರಿಯ ಕದಪುಗಳೊಳೊರ್ವಳ್ ।
ಸುರವಧು ಬರೆದಳ್ ವಿಚಿತ್ರಪತ್ರಾವಳಿಯಂ ॥ ೭೮ ॥

ಪೆಱೆಯಂ ಮುಸುಕುವ ಮುಗಿಲಂ ।
ಪೆಱಪಿಂಗಿಪ ಳೀಮರುತ್ಕುಮಾರಿಕೆ ಯೆನೆ ಚೆ ॥
ಲ್ವೆಱಗಿಸೆ ಸಮಱಿದ ಳರಸಿಯ ।
ಮಿಱುಗುವ ಪೆಱೆನೊಸಲ ಕುರುಳ ಬಂಬಲ ನೊರ್ವಳ್ ॥ ೭೯ ॥

[1] ಯಾವಲ.

ಕಂ|| ಮಿಱುಪಲಗರ್ೞಂಚಲಿ ನೊಪ್ಪುವ ।
ನಿಱಿದಳಿರ ತವಮಾಳಶೋಭೆ ಯೆನೆ ಬಾಸಿಗದಿಂ ||
ನಿಱಿಗೆ ಸಲೆ ಯೆಸೆಯೆ ಮುಡಿಸಿದ ।
ಳೆಱಕದಿ ನೊರ್ವಳ್ ಸುಪರ್ವವಧು ನೃಪವಧುವಂ || ೮೦ ||

ಉಡಿಸುವ ವಿಚಿತ್ರವಸ್ತ್ರಂ ।
ಮುಡಿಸುವ ಮಂದಾರಮಾಲೆ ತನುಲತೆಯೊಳ್ ನೀ ||
ರ್ಪಡಿಸುವ ನವಾಂಗರಾಗಂ ।
ತುಡಿಸುವ ತೊಡವರಸಿಗಮರ್ದು ಮಮರಿಯರಿಂದಂ || ೮೧ ||

ವ|| ಅದಲ್ಲದೆಯುಂ.

ಕಂ|| ಡೋಳಾಕೇಳಿಯು ಕಂದುಕ ।
ಕೇಳಿಯು ಪರಿಹಾಸಕೇಳಿಯು ತಿಕುಶಲಕಳಾ ||
ಕೇಳಿಯು ವನಕೇಳಿಯು [ಜಲ ।
ಕೇಳಿಯು] ಬಿನದದೊಳೆ ಸತಿಯು ನವರೊಸೆಯಿಸಿದರ್ || ೮೨ ||

ವ|| ಮತ್ತಂ.

ಚಂ|| ಅಮರ್ದಿನ ಸೋನೆ ಜೇನ ಮೞೆ ಕರ್ಣರಸಾಯನ ಮಿಂತಿದೆಂಬಿನಂ ।
ಗಮಕದುಪಾಂಗದೊಟ್ಟಜೆಯ ರೀತಿಯು ಕಾಕಿನ ನುಣ್ಪಿನೋಜೆಯಾ ||
ಕ್ರಮಣೆಯ ಭಂಗಿ ಸಂಗಳಿಸಿದಿಂಪಿನ ಸೊಂಪಿನ ಸುಪ್ರತೀತಗೀ ।
ತಮ ನನಿಶಂ ಜಿನಾಂಬಿಕೆಗೆ ಬೀಱಿದುದಿಂದ್ರನ ಗಾಯಿಕಾಜನಂ || ೮೩ ||

ಕಂ|| ಯುವತಿ ತತವಿತತಘನಸುಷಿ ।
ರವಾದ್ಯವಿದ್ಯಾವಿನೋದದಿಂ ಸುರವಧುವಿರ್ ||
ಸವಿಯಂ ಕಿವಿಗೀಯೆ ಸುಖಾ ।
ರ್ಣವದೊಳಗೋಲಾಡಲಾರ್ತಳಿರುಳುಂ ಪಗಲುಂ || ೮೪ ||

---

*ಕಂ| ಈಪರಿಯೊಳಮರಸ್ತ್ರೀಯರ್ ।
ತಾಪರಿತೋಷದೊ[ಳೆವರ]ಜಿನಾಂಬಿಕೆಪದನಂ ||
ಶ್ರೀಪೆಯುಕೆಱಗಿ ನುತಿಸುತೆ ।
ತಾಪರಿತೋಷದೊಳೆ ಭಕ್ತಿಯಿಂದಿರುತಾಗಳ್

* (ಈ ಪದ್ಯವು ೮೩ ನೆಯ ಪದ್ಯವಾಗಿ ಹಸ್ತಲಿಖಿತಪ್ರತಿಯಲ್ಲಿ ಬರೆದಿದೆ. ಗ್ರಂಥಕರ್ತೃನಿಬದ್ಧವಲ್ಲವೆಂದು ತೋಱುವುದಱಿಂದ ರೇಖೆಯ ಕೆಳಗೆ ಬರೆದಿದ.)

ಕಂ|| ಕರಣಾಂಗಹಾರಪರಿಣತಿ ।
ನಿರುಪಮರಸಭಾವ ಮಸಮ ಮಾಗಿರೆ ಚೆಲ್ವ ||
ತ್ತಿರಿಸೆ ನೃಪಸತಿಯ ಸಭೆಯೊಳ್ ।
ಸುರನಟಿಯರ್ ನರ್ತಿಪಂದ ಮೇನೊಪ್ಪಿದುದೋ || ೮೫ ||

ವ|| ಅವಲ್ಲದೆಯುಂ.

ಕಂ|| ಶ್ರುತದೇವಿಯ ಓಲಗಿಸಿದ ।
ಳತನುಹರಾಂಬಿಕೆಯ ನೆನಿಸಿ ಪುಸ್ತಕಹಸ್ತಾ ||
ನ್ವಿತೆ ಪುಣ್ಯಕಥೆಯ ನೊರ್ವಳ್ ।
ಚತುರಾಸ್ಯಪ್ರಿಯೆ ಸುರಾಗದಿಂ ವಾಚಿಸಿದಳ್ || ೮೬ ||

ವ|| ಮತ್ತಂ.

ಚಂ|| ಮಸದಿಗೆ ನೋನಮೆತ್ತು ಮಡೆಯಾಡುವ ಬಡ್ಡಿಪ ಸೋದಿಪೊಳ್ಳಿತಂ ।
ನುಡಿಸುವ ಕಂಚನುಷ್ಟ್ವಡಿವ ಕೆಯ್ಗೆಱಿವಾರತಿದೋರ್ಪ ಕೆಂದಳಂ ||
ದೊಡೆವನುಲೇಪನಂಗುಡುವ ವೀಳೆಯಮಂ ತೆಗೆದೀವ ದಂದುಗಂ ।
ತೊಡರೆ ಮನಂಗೊಳಲ್ ನೆರೆದರಿಂದ್ರಲತಾಂಗಿಯರನ್ನವಾಸದೊಳ್ || ೮೭ ||

ಕಂ|| ಅರುಣಮಣಿಕಂಕಣಪ್ರಭೆ ।
ಪರೆದಿರೆ ಪಚ್ಚಡಿಸುವಲ್ಲಿ ಕುಂಕುಮರಸದೊಳ್ ||
ಪೊರೆದುದು ಪಚ್ಚಡೆ ಮೆಂದೋ ।
ಸರಿಯಿಸಿದಳೆ ಸಜ್ಜೆವಳ್ತಿತನಮೇಂ ಮುದ್ದೋ || ೮೮ ||

ಅಮಳಾಂಗಪ್ರಭೆ ಮುನ್ನಮೆ ।
ತಮಮಂ ಬೆದಱಿಸೆಯು ಮರಸಿ ಗಿರುಳಾಸ್ಥಾನೀ ||
ಸಮಯೋಚಿತ ಮೆಂದು ತಟ ।
ತ್ಕುಮಾರಿಯರ್ ಪಿಡಿವರಂತೆ ಕೆಯ್ದೀವಿಗೆಯಂ || ೮೯ ||

ವ|| ಆ ಸಮಯದೊಳ್.

ಉ|| ಮಂಗಳಗರ್ಭಶೋಧನಮ ನಿಂದ್ರನಿವಾಸದ ದಿವ್ಯವಸ್ತುವ ।
ರ್ಗಂಗಳಿ ನಂದು ಮಾಡೆ ಸುರಸುಂದರಿಯರ್ ಪೆಱತೊಂದು ಚೆಲ್ವುತ ||
ನ್ನಂಗದೊಳಾಗೆ ಕಾಂತಿಯ ದಗುಂತಿಯ ನಾಂತವಲೋಹ ಮಾವಗಂ ।
ಪಿಂಗಿವ ಪೊನ್ನ ಪುತ್ತಳಿವೊಲೊಪ್ಪಿದಳಾವಧು ವಚ್ಚಭಾವದೊಳ್ || ೯೦ ||

ವ|| ಅಂತುಬಹುವಿಧವ್ಯಾಪಾರಪರಿಕರಪರಿಭ್ರಾಂತೆಯರುಂ, ವಿವಿಧವಿನೋದವಿರಚನೈಕತತ್ಪರಸ್ವಾಂತೆಯರು ಮಾಗಿ ದಿವಿಜಕಾಂತೆಯರ್ ಕಣ್ಣಱಿದು ಮನಮಱಿದು ಸಮಯಮಱಿದು ಇಚ್ಛೆಯನಱಿದು ಸಿಚ್ಚಮೋಲಗಿಸುತಿರ್ಪನಂ ಮತ್ತೊಂದು ಪುಣ್ಯದಿನದೊಳಂ.

ಚಂ॥ ನೆಳೆ ಬಿಸನಾಳ ವಾಗಿರೆ ತಳಂ ದಳ ವಾಗಿರೆ ಲೋಳನೀಳಕಂ ।
ತಳೆ ಮಳಿವಾಲೆ ಯಾಗಿರೆ ಪರಿಚ್ಛದವಾದರುಣಾಂಬರಂ ಸಮಂ ॥
ತೆಳಸಿದ ಬಾಳಭಾನುರುಚಿ ಯಾಗಿರೆ ಪುಷ್ಪಿತೆಯಾಗಿ ಪುಷ್ಪಕೋ ।
ಮಳೆ ಜಯರಾಮೆ ಕಾಮುಕಮಳಾಕರದಬ್ಜಿನಿಯಂತಿರೊಪ್ಪಿದಳ್ ॥ ೯೦ ॥

ಚಂ॥ ಕೃತಸಹಕಾರನಂದನವಿಳಾಸೆ ಲತಾರುಣಪಾದಪದ್ಮರಾ ।
ಜಿತೆ ಘನಸೌಪ್ಯನಿರ್ಗತಪಯೋಧರೆ ಪೂರ್ಣಹಿಮಪ್ರಭಾಸ್ಯೆ ಸಂ ॥
ಗತಮಹಿಕಾಂತೆ ಮಾಸದ ವಿಳಾಸಮೆ ಮೆಯ್ವಡೆಯಾದ ದೇವಿ ತಾಂ ।
ಋತುಮತಿ ಯಪ್ಪುದಚ್ಚರಿಯೆ ವತ್ಸರಲಕ್ಷ್ಮಿವೊಲಿರ್ಪ ದಾಸಱಿಂ ॥ ೯೧ ॥

ವ॥ ಎನಿಸಿರ್ದನಂತರಂ ನಿರ್ವರ್ತಿತಚತುರ್ಥಸ್ನಾನೆ ಯಾಗಿ.

ಚಂ॥ ವನಿತೆ ವಿಳಾಸದಿಂ ಸುಲಿದ ದಂತಚಯಂ ನಿಜರಾಗದಿಂ ಘನ ।
ಸ್ತನಕಳಶಾಗ್ರಿಮಕ್ಕರುಣಪಲ್ಲವಲೀಲೆಯ ನೀವುತಿರ್ಪ ಮು ॥
ನ್ನಿನ ಬೆಸನಂ ಬಿಸುಟ್ಟು ನವಚಂದನಚರ್ಚೆಯ ನಿತ್ತು ಮೇನವ ।
ಕ್ಕನುಪಮಮಂಗಳೋಪಕರಣಪ್ರತಿಹಾರನ ಕೇಳಿ ಸಾಜಮೋ ॥ ೯೨ ॥

ವ॥ ಅದಲ್ಲದೆಯುಂ.

ಮ॥ ಧೃತಮುಕ್ತಾಭರಣಂ ಪಯಃಕಣಗಣಂ ಶ್ರೀಖಂಡಲಿಪ್ತಾಂಗದೀ ।
ಧಿತಿ ತೋಯಪ್ರಸರಂ ದುಕೂಲವಸನಂ ಫೇನೋದ್ಗಮಂ ಮಲ್ಲಿಕಾ ॥
ಸ್ಮಿತದಾಮಂ ತೆರೆವಾಲೆ ಯಾಗೆ ವಿಮಳಕ್ಷೀರಾರ್ಣವಶ್ರೀಯ ನಾ ।
ಶತಪತ್ರಾನನೆ ಪೋಲ್ತು ಬೆಳ್ವಸದನಂಗೊಂಡೇಂ ಮನಂಗೊಂಡಳೋ ॥ ೯೪ ॥

ವ॥ ತದನಂತರಂ.

ಚಂ॥ ಅಳವಡೆ ತನ್ನ ಮೆಯ್ಯೊಳಭಿರಾಮತೆಯಿಂ ಧವಳಪ್ರಸಾಧನಂ ।
ಪಳಿಕಿನ ಪೆಣ್ಗೊ ಕರ್ಪುರ[ದಪೆಣ್ಗೊ]ಸುರೂಪ್ಯದ ಪೆಣ್ಗೊ ಮಲ್ಲಿಕಾ ॥
ಕಳಿಕೆಯ ಪೆಣ್ಗೊ ಮೌಕ್ತಿಕದ ಪೆಣ್ಗೊ[ಸುವಜ್ರದ ಪೆಣ್ಗೊ]ಪೇೞಿಮಾ ।
ವಳೊ ದಿಟ ಮಿಂಬಿನಂ ರಮಣಿ ರಂಜಿಸಿ ಭೂಪನ ನೋಟಕ್ಕೆವಂದಪಳ್ ॥ ೯೫ ॥

ಶಾ॥ ಮಾಳಾಭೃಂಗನಿನಾದದಿಂ ದಗುರುಧೂಪಾಮೋದದಿಂ ಸಾರತಾಂ ।
ಬೂಳಾಸ್ವಾದದಿ ನುದ್ಧವಾಕ್ಷದೆಲರಿಂ ದಾಹ್ಲಾದದಿಂ ಭಿತ್ತಿಚಿ ॥
ತ್ರಾಳೋಕೈಕವಿನೋದದಿಂ ದಿದು ಮೊದಲ್ ಪಂಚೇಂದ್ರಿಯಪ್ರೀತಿಗೆಂ ।
ಬಾಳೋಚಕ್ಕೆಡೆಯಾಗಿ ರಯ್ಯ ಮೆನಿಸಿತ್ತುರ್ವೀಶಶಯ್ಯಾಗೃಹಂ ॥ ೯೬ ॥

ವ॥ ಅಲ್ಲಿ.

ಚಂ|| ನವಮಣಿಮಂಚದಿಂದೆ ಮಿಸುಪಂಚೆಯ ತುಪ್ಪುಳ ತೂಳಿಯಿಂದೆ ಪ ।
ಚ್ಚವಡಿಸಿದಚ್ಚ ಸುಣ್ಣ ಗುಲದಿಂದೆ ವಿಚಿತ್ರವಿತಾನ[ದಿಂದ]ಮುಂ ॥
ಣ್ಮುವ ತೊಡೆವಿಂದೆ ಪೊನ್ನ ಪಳಿಪಾವುಗೆ ಯಿಂದೆಸೆದಿರ್ದ ಸೆಜ್ಜೆಯೊಳ್ ।
ಪವಡಿಸಿ ವಲ್ಲಭಂಬೆರಸು ಸಲ್ಲಲಿತಾಂಗಿ ನಿಶಾವಸಾನದೊಳ್ ॥ ೯೭ ॥

ಚಂ|| ನಿಜಗಮನಕ್ಕೆ ಮಚ್ಚರಿಪ ಮಂಥರಯಾನದ ದಾನದಂತಿಯಂ ।
ನಿಜಪತಿಕಂಥರಕ್ಕೆ ದೊರೆಯಾದುರುಕಂದದ ವೃಕ್ಷರಾಜನಂ ||
ನಿಜವಿಭುವಿಭ್ರಮಕ್ಕೆಡೆರುತಿರ್ಪ ತೊಡರ್ಪಿನ ಸಿಂಹಪೋತಮಂ ।
ನಿಜನೃಪವಕ್ಷದಿಂದಿರೆಗೆ ತಾಂ ದೊರೆಯಾದರವಿಂದವಾಸೆಯಂ ॥ ೯೮ ॥

ಉ|| ತನ್ನಯ ನೀಳ್ದ ತೋಳ್ಗಳ ವಿಳಾಸಮ ನಾಂತ ಲತಾಂತಮಾಲೆಯಂ ।
ತನ್ನಯ ವಕ್ತ್ರಕಾಂತಿಯ ದಗುಂತಿಯ ನಾಂತ ಸುಧಾಂಶುಬಿಂಬಮಂ ॥
ತನ್ನಯ ಭರ್ತೃತೇಜಮ ನುದಾಹರಿಪುದ್ಗತಭಾನುಬಿಂಬಮಂ ।
ತನ್ನಯ ಚೆಲ್ಲಗಣ್ಬೊಣರ ಲೀಲೆಯ ನೇಳಿಪ ಬಾಳಿವಿಮಾನ್ಗಳಂ || ೯೯ ||

ಚಂ|| ಬಿಗಿದೊಗೆದಾತ್ಮತುಂಗಕುಚಕುಂಭಮ ನೊಡ್ಡಿಪ ಪೂರ್ಣಕುಂಭಮಂ ।
ಸೊಗಯಿಸುವಾತ್ಮಕೇಳಿಕಮಳಾಕರಮಂ ನಗುವಬ್ಜಷಂಡಮಂ ॥
ಪೊಗಳಿಸುವಾತ್ಮಮಾನಸಗಭೀರತೆಯಂ ಮಿಗುವಂಬುರಾಶಿಯಂ ।
ಬಗೆಗೊಳಿಪಾತ್ಮಪೀನಕಟಿಯಂ ಸರಿಮಾಳ್ಪ ಮೃಗೇಂದ್ರಪೀಠಮಂ ॥ ೧೦೦ ॥

ಚಂ|| ತನತುವಿಚಿತ್ರಮಪ್ಪ ನಡೆಮಾಡದ ಗಾಡಿಯ ಸದ್ವಿಮಾನಮಂ ।
ತನತು ಸುರಮ್ಯಹರ್ಮ್ಯದ ವಿಳಾಸದ ರುಂದ್ರಫಣೀಂದ್ರಗೇಹಮಂ ॥
ತನತು ವಿಚಿತ್ರಶೀಲಗುಣರತ್ನವಿಭಾಸುರರತ್ನರಾಶಿಯಂ ।
ತನತು ಪತಿವ್ರತಾಪದದ ರೂಪದುದಗ್ರಶಿಖಾಮುಖಾಗ್ನಿಯಂ || ೧೦೧ ॥

ಕಂ|| ನಿಜಮುಖದೊಳ್ ಪುಗುವ ಮತಂ ।
ಗಜಪತಿವೆರಸಿಂತು ಕನಸುಪದಿನಾಱುಮ ನಂ ||
ಬುಜವದನೆ ಕಂಡೆಳಪಗತ ।
ವೃಜಿನಂಗಳ ನಖಿಳಮಂಗಳೋದ್ಭಾಸಿಗಳಂ || ೧೦೨ ॥

ವ|| ಆ ಪ್ರಸ್ತಾವದೊಳ್.

ಮ|| ಎಳಬಿಂದುಶ್ರೀಯ ನುಚ್ಚಾಟಿಸಿ ರತಿರಭಸಕ್ಲಾಂತಕಾಂತಾನುಲೇಪಂ ।
ಗಳೆ ಕಂಪಂ ಪೊತ್ತು ಪೊಂದಾವರೆಯೆಸಳ್ವೊರೆಯೊಳ್ ಸೊರ್ಕಿ ಸಿಲ್ಕಿರ್ದ ಭೃಂಗಂ ॥
ಗಳೆ ನಾಟಂದೆತ್ತಿ ನಿದ್ರಾಭರನಿರತಚಕೋರಂಗಳಂ ಸೋಂಕಿ ನೆಯ್ದಿ ।
ಲ್ಗೊಳದೊಳ್ ಮಿಂದಾಡಿ ತೀಡಿತ್ತಪಹೃತಜನತಾಸುಪ್ತಿಭಾರಂ ಸಮೀರಂ || ೧೦೩ ॥

ವ|| ಅನಂತರಂ.

ಕ॥ ನಿಖಿಳಸರೋರುಹಕುಟ್ಮಳ ।
ಮುಖಲಗ್ನಮಯೂಖಲೇಖೆಯಿಂ ಸುಪ್ತಶಿಳೀ ॥
ಮುಖಕುಳಮ ನುರ್ಚಿ ರವಿ ಶತ ।
ಮುಖದಿಙ್ಮುಖಶಿಖರಿಶಿಖರಶೇಖರ ನಾದಂ ॥ ೧೦೪ ॥

ವ॥ ಆಗಳ್.

ಕಂ॥ ಪಪ್ಪವರ ಮಂಗಳೋಕ್ತಿಯಿ ।
ನುಪ್ಪವಡಿಸಿ ನೀರೆ ಕೃತ್ಸ್ನಮಂಗಳಮಂ ಸೂ ॥
ಳ್ಪಿಪ್ಪದೆ ನಿರ್ವರ್ತಿಸಿ ಕ ।
ಣ್ಗೊಪ್ಪಿರೆ ಕೆಯ್ಗೆಯ್ದು ದೇವಿ ಪರಿಜನಸಹಿತಂ ॥ ೧೦೫ ॥

ತಿರುವಿಂ ಪೊಳಕಿದ ಕಾಮನ ।
ಸರಲಂತಿರೆ ಬಂದಳೆಸೆಯೆ ಪಕ್ಷ್ಮಾಳಿಯ ಮೆ ॥
ಯ್ಸಿರಿಯುಂ ಋಜುತ್ವಮುಂ ಗುಣ ।
ಪರಿಚಯಮುಂ ಧರ್ಮಸೇವ್ಯಮುಂ ಸಫಲತೆಯುಂ ॥ ೧೦೬ ॥

ಉ॥ ಆವಳೊ ರೂಪಿನಿಂ ಸೊಬಗಿನಿಂ ಗುಣದಿಂ ಪೊಣರ್ವನ್ನಳೀಮಹಾ ।
ದೇವಿಯೊಳೆಂದು ಕಾಳೆವಿಡಿಸುತ್ತುಱಸಲ್ಬಿರುದಿಂಗೆ ಕಂತು ಕೆ ॥
ಯ್ದಾವಿಗೆಯಂ ಪಗಲ್ವಿಡಿದು ಬರ್ಪವೊಲಾಯ್ತುಡೆನೂಲ ಕಿಂಕಿಣೀ ।
ರಾವಮು ಮಂಗಕಾಂತಿಯ ದಗುಂತಿಯು ಮಂಗನೆ ಬರ್ಪ ತಾಣದೊಳ್ ॥ ೧೦೭ ॥

ವ॥ ಅಂತುಬಂದು.

ಮ॥ ಧರಣೀಪಾಳಕದಂಡನಾಯಕಮಹಾಸಾಮಂತಮಂತ್ರಿವ್ರಜಂ ।
ಬೆರಸಾಸ್ಥಾನದೊಳಿರ್ದು ಪೇಂದ್ರನಿಭನಂ ರುಂದ್ರದ್ವಿಪದ್ವಿಪ್ಟವಿ ॥
ಷ್ಟರವಿಶ್ರಾಂತನ ನಾತ್ಮಕಾಂತನ ನುಪಾಂತೋದ್ದಾಮಸೀಮಂತಿನೀ ।
ಕರಚಾಮೀಕರಚಾಮರೋತ್ಕರಮರುದ್ವ್ಯಾಕೀರ್ಣಕರ್ಣಾಬ್ಜನಂ ॥ ೧೦೮ ॥

ವ॥ ಸಾರ್ತಂದು ತದರ್ಧಾಸನಪ್ರದೇಶಮ ನಳಂಕರಿಸಿ.

ಚಂ॥ ಇದು ವದನೇಂದುಬಿಂಬದಿ ನೊಸರ್ವಮರ್ದಂಬಿನ ಮುಣ್ಮಿಪೊಣ್ಮೆ ದಂ ।
ತದ ರುಚಿ ಕಾಮಕಾರ್ಮುಕಗುಣಧ್ವನಿ ಯೆಂಬಿನ ಮುಣ್ಮಿಪೊಣ್ಮೆ ಸ ॥
ನ್ಮೃದುರುತಿ ತನ್ನ ಕಂಡೆ ಕನಸೆಲ್ಲಮ ನಂಗನೆ ಪೇೞಿ ಕೇಳ್ದು ರಾ ।
ಗದಿ ನೞಿಂದೆಂದ ನಂದವಧಿಬೋಧದಿ ನಾವಿಭು ತತ್ಫಲಂಗಳಂ ॥ ೧೦೯ ॥

ವ॥ ದೇವಿ ನೀನಿಂದು ವಿದಿತರಜತಾಚಳೋಪಮಶೋಭಮಂ ಮಹಾಮದೇಭಮಂ ಕಂಡುದಱಿಂ ನಖಿಳಭದ್ರಲಕ್ಷಣಾಸ್ಥಾನನು, ಮನೂನದಾನನುಂ; ಹಿಮಧವಳೋದ್ದಾಮರುಂದ್ರನಂ ಗವೇಂದ್ರನಂ ಕಂಡುದಱಿಂ ನುನ್ನತಲಲಾಮನುಂ, ವೃಷಭಾಭಿರಾಮನುಂ; ಸ್ಫುರದರುಣಕೇಸರಪೀಠಾಗ್ರಮಂ

ಸಿಂಗಮಂ ಕಂಡುದದಱಿಂ ನನೇಕಪಾಪಹರಣನುಂ, ಮಹಾಮಹೀಭೃಚ್ಚರಣನುಂ; ನಿಜಕೃತಾಭಿಮತ ಕಮಳೆಯುಂ ವಿಮಳೆಯುಂ ಕಂಡುದದಱಿಂ ನಚ್ಯುತಸುಖೈಕಸದ್ಮನುಂ, ಪ್ರಶಸ್ತಪದ್ಮನುಂ; ಬಂಧುರ ಸುಗಂಧದಾಮಂಗಳಂ ಕುಸುಮದಾಮಂಗಳಂ ಕಂಡುದದಱಿಂ ನಮಳಸುಮನೋಗುಣಾನುಬಂಧಮಹಿತನುಂ, ಭ್ರಮರಹಿತನುಂ; ಶಿಶಿರಧವಳಚಂದ್ರಿಕಾಸಾಂದ್ರನಂ ಚಂದ್ರನಂ ಕಂಡುದದಱಿಂ ನುನ್ನತಲಕ್ಷ್ಮೀವಿಳಾಸಿಯುಂ, ದಿಗಂಬರಪ್ರಕಾಶಿಯುಂ; ಉದಯಗಿರಿಶಿಖರಾಭರಣನಂ ಸಹಸ್ರಕಿರಣನಂ ಕಂಡುದದಱಿಂ ನಪಗತಾಶೇಪದೋಷಾನುವೃತ್ತನುಂ, ಸಮ್ಯಗ್ದರ್ಶನನಿಮಿತ್ತನುಂ; ಜಲಕೇಳೀಲುಲಿತ ಸರಸೀಬಿಸಂಗಳಂ ಝುಷಂಗಳಂ ಕಂಡುದದಱಿಂ ನಮಳಾಪ್ಸರಗೀತಜನ್ಮೋತ್ಸವಪ್ರಸಂಗನುಂ, ಅನಿಮಿಷೋತ್ತುಂಗನುಂ; ಪುಣ್ಯಾಂಬುಪೂರ್ಣಸೌವರ್ಣಕಾಂತಿಸ್ಫುಟಂಗಳಂ ಘುಟಂಗಳಂ ಕಂಡುದದಱಿಂ ನನನ್ಯಸುಭಟಪ್ರಭಾವ ಭಾರನುಂ, ಜಾತರೂಪಸಾರನುಂ; ಲಾಲಿತಮೃಣಾಳದಂಡಮಂ ಕಮಳಷಂಡಮಂ ಕಂಡುದದಱಿಂ ನುದ್ದಂಡಪುಂಡರೀಕಲಕ್ಷ್ಮೀವಿಳಾಸಿಯುಂ, ಗುಣವಿಭಾಸಿಯುಂ; ವಿಲೋಲಕಲ್ಲೋಲಭದ್ರಮಂ ಸಮುದ್ರಮಂ ಕಂಡುದದಱಿಂ ನಶೇಷಭುವನಾಶ್ರಯಮಹತ್ವನುಂ, ಸಂತರ್ಪಿತಸಕಳಸತ್ವನುಂ; ಕನತ್ಕನಕರುಚಿವಿಲುರಮಂ ಸಿಂಹಪೀಠಮಂ ಕಂಡುದದಱಿಂ ರುಚಿರರಚನಾಪ್ರಚುರಕಲ್ಯಾಣಾನುವೃತ್ತಿಯುಂ, ಹರಿಪೂಜ್ಯಮೂರ್ತಿಯುಂ; ನಿರುಪಮನಿಳಿಂಪದಂಪತೀವಿಭಾವಮಂ ಸುರವಿಮಾನಮಂ ಕಂಡುದದಱಿಂ ನಖಿಲವೈಮಾನಿಕಸ್ತೋತ್ರಪಾತ್ರನುಂ, ಸತ್ಪಥಚರಿತ್ರನುಂ; ಪರಿಹಾಸಿತಕೈಳಾಸ ವಿಳಾಸನಗಮಂ ಫಣಿಪತಿನಿವಾಸಮಂ ಕಂಡುದದಱಿಂ ನಶೇಷಭೋಗಾನುಭವರಕ್ತನುಂ, ಕುಮ(ಸ)ತೋನ್ನತಿರಿಕ್ತನುಂ; ಸ್ಫುರಿತಕಿರಣಪ್ರಕಾಶಿಯಂ ರತ್ನರಾಶಿಯಂ ಕಂಡುದದಱಿಂ ನತಿಮಹಾಘ್ರ್ಯಾಯೋಜ್ಯನುಂ, ಸದಾಲೋಕಪೂಜ್ಯನುಂ; ನಿರ್ಧೂಮಶಿಖಾಳಿಯಂ ಜ್ವಾಳಿಯಂ ಕಂಡುದದಱಿಂ ನಾಶ್ರಿತ ಸಂತರ್ಪಣಪ್ರಚಂಡತೇಜಃಪವಿತ್ರನುಂ, ಜಗತ್ಪ್ರಾಣನು ಮಪ್ಪಂ.

ಕಂ॥ ತೀರ್ಥಕರಂ ಭವ್ಯಜನ ।
ಸ್ವಾರ್ಥಕರಂ ನಮಗೆ ಪುತ್ರನಾದಪ ನಿದು ಸ ॥
ತ್ಯಾರ್ಥಂ ಭಾವಿಸೆ ನಾಮೆ ಕೃ ।
ತಾರ್ಥರೆ ಮಿನ್ನಖಿಳಜಗದೊಳನುಪಮಚರಿತೇ ॥ ೧೧೦ ॥

ಸ್ವಾಗತಂ॥ ಅಲ್ಲದೊಂದು ನಿಜಸಸ್ಮಿತವಕ್ತ್ರೋ ।
ತ್ಫುಲ್ಲಪಂಕರುಹದೊಳ್ ಪುಗುತರ್ಪಿಂ ॥
ದ್ರೋಲ್ಲಸದ್ಗಜಮುಮಂ ಕನಸಿಂ ನೀ ।
ನಲ್ಲದಂಗನೆಗೆ ಕಾಣ್ಬುದು ಮೊಗ್ಗೇ ॥ ೧೧೧ ॥

ಎಂದು ಪೇೞ್ದು ನಿಜನಾಥನ ಮಾತಂ ।
ಬಿಂದುರೋಚಿ ಕುಡೆ ಹೃತ್ಕುಮುದಶ್ರೀ ॥
ಗೆಂದುಮಿಲ್ಲದ ಮಹೋತ್ಸವಮಂ ಕೇ ।
ಳ್ದಂದು ದೇವಿ ಪುಳಕಾಂಕಿತೆ ಯಾದಳ್ ॥ ೧೧೨ ॥

ವ॥ ಆಗಿ ಸಂತೋಷಂಬಟ್ಟನಂತರ ಮುಚಿತತಾಂಬೂಲದಾನಸಮನ್ವಿತೆ ನಿಜನಿವಾಸಕ್ಕೆ ಬಂದು ಸುಖದಿ ನಿರೆ.

ಮ॥ ನಿರುತಂ ಫಾಲ್ಗುಣಮಾಸಕೃಷ್ಣನವಮೀರಾತ್ರ್ಯಂತದೊಳ್ ಮೂಲಮಾ ।
ಗಿರೆ ನಕ್ಷತ್ರ ಮಮರ್ತ್ಯನಾಯಕಕೃತಸ್ವರ್ಗಾವತಾರೋತ್ಸವಂ ॥
ಪರಮಂ ಪ್ರಾಣತಕಲ್ಪದಾರುಣವಿಮಾನೋದ್ದೇಶದಿಂ ಬಂದು ಬಂ ।
ಧುರವಕ್ತ್ರಾಬ್ಜನಿವಿಷ್ಟ ನಾಶ್ರಯಿಸಿದಂ ರಾಮಾಂಬಿಕಾಗರ್ಭಮಂ ॥ ೧೧೩ ॥

ವ॥ ಅಂತಾಶ್ರಯಿಸಿ ಸುಗ್ರೀವನೆಂಬ ಧರ್ಮರತ್ನಾಕರಗರ್ಭಶುಕ್ತಿ ಸಂಪುಟದೊಳ್ ಸುವೃತ್ತ ಮೌಕ್ತಿಕರತ್ನದಂತೆಯುಂ,ಜಠರಜಾಹ್ನವೀಜಳದೊಳಮಳಕಮಳದಂತೆಯುಂ ಪ್ರವರ್ಧಮಾನ ನಾಗಿ ಬಳೆವಲ್ಲಿ.

ಕಂ॥ ನಿಳಯದ ದುಗುಲದ ಜವನಿಕೆ ।
ಯೊಳಗಣ ಮಾಣಿಕದ ಸೊಡರ ಕುಡಿ ಬೆಳಗುವವೋಲ್ ॥
ಬೆಳಗಿದುದು ತಾಯ ತೆಳ್ವಸಿ ।
ಱಿೊಳಗಣ ಘನದಿನನ ತೇಜ ಮಱುವಿನ ಬೀಜಂ ॥ ೧೧೪ ॥

ನಳಿನೀವನಕಿಂಜಲ್ಕದೊ ।
ಳೆಳಸಿಯು ಮೆಳನೇಸಱಂತೆ ಪೀಡೆಯ ನವ್ವಾ ॥
ಕುಳೆ ಮಾಯದಂತಿರೀಯನೆ ।
ಲಳಿತೆಯ ಗರ್ಭದೊಳಗಿರ್ದ ಮೂರ್ಜಿತತೇಜಂ ॥ ೧೧೫ ॥

ವ॥ ಅದಲ್ಲದೆಯುಂ.

ಮ॥ ತನುರೋಮಾವಳಿಗೊಯ್ಯನೊಯ್ಯನೆ ಪಸುರ್ಪಂ ಚೂಚಕಕ್ಕೊಯ್ಯನೊ ।
ಯ್ಯನೆ ಕರ್ಪಂ ವಳಿಗೊಯ್ಯನೊಯ್ಯನಱವಂ ಶಾತೋದರಕ್ಕೊಯ್ಯನೊ ॥
ಯ್ಯನೆ ಕೊರ್ವಂ ಮೊಗಕೊಯ್ಯನೊಯ್ಯನೆ ಬೆಳರ್ಪಂ ಕುಂತಳಕ್ಕೊಯ್ಯನೊ ।
ಯ್ಯನೆ ನೀಳ್ಪಂ ಮಿಗೆ ಮಾಡುವಾಸತಿಯ ಗರ್ಭಾಧಾನ ಮೇನೊಪ್ಪಿತೋ ॥ ೧೧೬ ॥

ವ॥ ಮತ್ತಂ.

ಕಂ॥ ತನುಬಡವಪ್ಪ ತೊಂಕಡಿಸು ವಾಗುಳಿ ಪುಟ್ಟ ಕನಲ್ದೊನಲ್ದು ಸುಯ್ ।
ಜನಿಯಿಸುವಂಘ್ರಿ ಝೊಮ್ಮಡರ್ವ ಪೊಂಗಿ ಬಸಿಱಿ ಬಿಗಿದನ್ಯಗರ್ಭಿಣೀ ॥
ಜನದ ವಿಕಾರ ಮಾಸತಿಯೊಳಾಗವೆ ತಾಂ ನೆಲಸಿರ್ಪ ತಾಣದೊಳ್ ।
ಜಿನನ ವಿಕಾರಿ ಜಾಡ್ಯದ ವಿಕಾರಮ ನೇಕಿರಲೀವ ನೆಂಬಿನಂ ॥ ೧೧೭ ॥

ವ॥ ಅದಲ್ಲದೆಯುಂ.

ಕಂ॥ ಸ್ಮರರಾಗೋದ್ರೇಕಂ ಮೀ ।
ತರಾಗ ನಿರ್ದೆಡೆಯೊಳೇಕೆ ಪುಟ್ಟುಗು ಮೆನೆ ತ ॥
ತ್ಪರತೆಯಿ ನಂತರ್ವರ್ತ್ತಿಯೊ ।
ಳರಸ ನಪೇಕ್ಷಿಸನೆ ರತಿರಹಸ್ಯೋತ್ಸವಮಂ ॥ ೧೧೮ ॥

ವ॥ ಮತ್ತಂ.

ಮ॥ ಘನಸಂಭೋಗಸುಖಂ ವಿರಾಮವಿರಸಂ ಭಾವಿಪ್ಪೊಡಿಂಬಿಲ್ಲದೆಂ ।
ದು ನೃಪಂ ಮಾಣ್ದಹಮಿಂದ್ರನಂತೆ ತಣಿವಂ ಕಾಯಪ್ರವೀಚಾರದಾ ॥
ರನೊಱಲ್ದೋಪಳ ರೂಪ ನೀಕ್ಷಿಪ ವಿದಗ್ಧಾಳಾಪಮಂ ಕೇಳ್ವ ಸಾ ।
ರ್ದನಿಸಂ ಚಾಯ್ವಿವಾನನಾಂಬುಜದ ಕಂಪಂ ಕೊಳ್ವ ಸಂಪ್ರೀತಿಯಿಂ ॥ ೧೧೯ ॥

ವ॥ ಆಸಮಯದೊಳ್.

ಮ॥ ಸುರಲೋಕೋದ್ಗತಸಾರವಸ್ತುಶತಮಂ ಶಕ್ರಾಂಗನಾಕೋಟಿಯುಂ ।
ನರಲೋಕೋದ್ಗತಸಾರವಸ್ತುಶತಮಂ ಸುಗ್ರೀವರಾಜೇಂದ್ರನುಂ ॥
ತರವೇೞ್ದಾಗಳೆ ತಂದು ಕೂಡೆ ನೆಱೆ ಸಾಫಲ್ಯಕ್ಕೆ ಪಕ್ಕಾದಳಾ ।
ಹರಿಣೀಲೋಚನೆ ಗರ್ಭದೊಳ್ ಬಳೆಯೆ ಭಾಸ್ವತ್ಪ್ರವ್ಯರತ್ನಾರ್ಣವಂ ॥ ೧೨೦ ॥



ಗದ್ಯಂ

ಇದು ಸಮಸ್ತ ಭುವನಜನಸಂಸ್ತುತಜಿನಾಗಮಕುಮುದ್ವತೀಚಾರುಚಂದ್ರಾಯಮಾಣ ಶ್ರೀಮದುಭಯಕವಿಕಮಳಗರ್ಭ ಮುನಿಚಂದ್ರ ಪಂಡಿತ ದೇವಸುವ್ಯಕ್ತಸೂಕ್ತಿಚಂದ್ರಿಕಾ ಪಾನಪರಿಪುಷ್ಟಮಾನಸಮರಾಳ

ಗುಣವರ್ಮನಿರ್ಮಿತಮಪ್ಪ

ಪುಷ್ಪದಂತಪುರಾಣದೊಳ್

ಗರ್ಭಾವತರಣಂ ನಾಮ

ನವಮಾಶ್ವಾಸಂ

ಶ್ರೀ

# ಪುಷ್ಪದಂತ ಪುರಾಣಂ

## ದಶಮಾಶ್ವಾಸಂ.

ಕಂ॥ ಶ್ರೀಜಯರಾಮೆ ಮನೋಜ ।
ಶ್ರೀಜಯರಾಮೆಯವೊಲೆಸೆದ ಳಿನಿಯಂ ಗುರ್ದ್ಯ ॥
ತ್ರೈಜಂ ಬಳೆದಿರೆ ಗರ್ಭಸ ।
ರೋಜಿನಿಯೊಳ್ ಪ್ರಭುಗುಣಾಬ್ಜಿನೀಕಳಹಂಸಂ ॥ ೧ ॥

ವ॥ ಅಂತಾವಿರ್ಭೂತಗರ್ಭನಿರ್ಭರವಿಕಾಸೆಯುಂ, ಸಫಲೀಕೃತಗರ್ಭದೋಹಳಪ್ರಕಾರೆಯುಮಾಗುತ್ತು ಮಿರ್ದ ತನ್ಮಹಾದೇವಿಯು ಪರಿಪೂರ್ಣಪ್ರಸವಸಮಯಂ ಮಾರ್ಗಶಿರಬಹುಳದಶಮಿಯಾಗೆ.

ಮ॥ ಒದವಂ ಭವ್ಯಮುಖಾಂಬುಜಕ್ಕೆ ಮುದಮಂ ಸದ್ಧರ್ಮಚಕ್ರಕ್ಕೆ ಸಂ ।
ಪದಮಂ ಲೋಕದ ದೃಷ್ಟಿಗಸ್ತಮದಮಂ ದೋಷಾವಕಾಶಕ್ಕೆ ಹೃ ॥
ದ್ಗದಮಂ ದುರ್ಮ[1]ತಕೌಶಿಕಕ್ಕೆ ಪಡೆಯುತ್ತಿಕ್ಷ್ವಾಕುವಂಶೇಂದ್ರಶೈ ।
ಲದಿ ನತ್ಯೂರ್ಜಿತತೇಜ ನುದ್ಭವಿಸಿದಂ ತ್ರೈಲೋಕ್ಯನಾಥಂ ಜಿನಂ ॥ ೨ ॥

ವ॥ ಆ ಪ್ರಸ್ತಾವದೊಳ್.

ಮ॥ ಕುಜವಲ್ಲೀ[2]ಫಲಪುಷ್ಪಸಂಪ್ರಯುತ ಮಾಯ್ತುರ್ವೀತಳಂ ಸ್ವಚ್ಛ ಮಾ ।
ಯ್ತು ಜಳಂ ಪ್ರಜ್ವಳಮಾಯ್ತು ವಹ್ನಿ ಹಿಮಗಂಧೋದ್ಗಾರಿ ಯಾಯ್ತೆಂದು ಗಾ ।
ಳಿ ಜಿತಾಂಭೋದಕಳಂಕ ಮಾಯ್ತು ನಭ ಮೆಂತುಂ ಸರ್ವಭೂತೋಪಕಾ ।
ರಿ ಜಿನಂ ಪುಟ್ಟಿದೊಡೊಳ್ಪು ಪುಟ್ಟುವುದು ಪಂಗೇ ಪಂಚಭೂತಂಗಳೊಳ್ ॥ ೩ ॥

ಕಂ॥ ಅಱಿಪಿಂದೆ ಬಱಿಯ ನುಱಿಯದೆ ।
ಸುಱಿದುಗುಳುವ? ತುಂಬಿವಿಂಡೆ ನೆಳೆತರುತುಂ ಪೊಂ ॥
ಪುಱಿವೋಗೆ ಕಂಪು ಪೂಮೞೆ ।
ಘುೞಿಲನೆ ದಱಿದಱಿಸಿ ಸುರಿಯೆ ದೆಸೆಗಳೊಳೆಲ್ಲಂ ॥ ೪ ॥

ವ॥ ಆಗಳಾ ಸೌಧರ್ಮೇಂದ್ರಂ ತನಗಾಸನಕಂಪ ಮಾಗಲೊಡಂ ಅವಧಿಬೋಧದಿಂ ತೀರ್ಥಕರೋತ್ಪತ್ತಿಯಂ ಜಲಕ್ಕನಱಿದು.

ಚಂ॥ ತಡೆದಿರದೆೞ್ದು ವಿಷ್ಟರದಿ ನಾನತಮಸ್ತಕ ನಾಗಿ ಮೂಱಡಿಸೂೞ್ ।
ಪೊಡೆವಡುವಲ್ಲಿ ಮಾಣಿಕದ ಮೌಳಿಮರೀಚಿ ಸಭಾವಿಭಾಗದೊಳ್ ॥
ಪೊಡರ್ದು ಪೊದೞ್ದು ಪಜ್ಜಳಿಸೆ ರಾಗರಸಾಪಗೆ ಬಂದು ನಿಂದ ಪೆ ।
ರ್ಮಡುವಿನೊಳಂದು ಮೂಡಿ ಮುೞುಗಿರ್ಪವೊಲೇನೆಸೆದಂ ಪುರಂದರಂ ॥ ೫ ॥

---

[1] ದುರ್ಮದ. [2] ಕುಜವೆಲ್ಲಂ (ಎಂದಿರಬಹುದು).

ವ॥ ಅನಂತರಂ ಪರಮೇಶ್ವರದ್ವಿತೀಯಕಲ್ಯಾಣಕರಣೋತ್ಸುಕಾಂತಃಕರಣ ನೈರಾವಣಾರೂಢಂ ಶಚೀಸಮೇತನುಂ, ಚತುರ್ವಿಧಾಮರಪರೀತನುಮಾಗಿ ಪೊಱಮಡುವುದುಂ (ನಿಜಮಹಾವಿಭೂತಿಯಂ).

ಕಂ॥ ಪ್ರಕಟಿಸೆ ನೆರೆದುದು ಸಾಮಾ ।
ನಿಕತ್ರಯತ್ರಿಂಶದಾತ್ಮರಕ್ಷಕ ದಿಕ್ಪಾ ॥
ಲಕ ಪರಿಷದಾಭಿಯೋಗ್ಯ ।
ಪ್ರಕೀರ್ಣಕಿಲ್ಬಿಷಕಭೇದ ಸುರಪರಿವಾರಂ ॥ ೬ ॥

ವ॥ ಮತ್ತಂ.

ಕಂ॥ ಘನಚಂದ್ರೋದಯದಬ್ಧಿಗ ।
ಳೆನಿಸಿದು ಮತಿರಭಸ ಮೆಸೆಯೆ ಕರಿತುರಗಸ್ಯಂ ॥
ದನಪತ್ತಿವೃಷಭಗಂಧ ।
ರ್ವನರ್ತಕೀಪ್ರಕರಯುತಸುರಾನೀಕಿನಿಗಳ್ ॥ ೭ ॥

ವ॥ ಅಂತು ನೆರೆದತಿಬಹುಳಕೋಳಾಹಳಕ್ಷೋಭಶೋಭಾವಳಂಬಿಯಾದಮರಸೇನಾಸಹಸ್ರಸಮಿತಿ ವೆರಸು.

ಸ್ರ॥ ವ್ಯೋಮಂ ಚಿತ್ರಾತಪತ್ರಂಗಳಿ ನತುಳಪತಾಕಾಪಟಶ್ರೇಣಿಯಿಂ ಪ್ರಾ ।
ಲೇಯಾದ್ರ್ಯಕ್ಕಂದ್ರಿಕಾಜಾಲದಿ ನಸಿಮಿಷಕಾಂತಾಂಗಶೃಂಗಾರದಿಂ ನಾ ॥
ನಾಮಾಂಗ[ಲ್ಯಾನ]ಕಧ್ವಾನದಿ ನಮರಗಜೋದ್ಯನ್ಮದಾಮೋದದಿಂ ದಿ ।
ಕ್ಸೀಮಾಪ್ರಾಂತಂಬರಂ ತಿಂತಿಣಿ ಯೆನಿಸಿರೆ ಕಾಕಂದಿ ಗೆಲ್ದಿಂದ ನಿಂದ್ರಂ ॥ ೮ ॥

ವ॥ ಅಂತು ಬಂದು ತತ್ಪುರಬಹಿರ್ಭಾಗದೊಳ್ ಸಕಳದೇವಕೋಟಿಯುಂ ನಿಱಿಸಿ ಬರೆ ಪೊಱಲೊಳ್.

ಕಂ॥ ಪಸರಿಪ ಪೂಮಱಿ ಯೊಡನೊಡ ।
ನೆಸೆವುತ್ಸವತೂರ್ಯನಿನದ ಮೊಡನೊಡನಲೆದಾ ॥
ಱಿಸುವ ಹಿಮಾನಿಳ ಮೊಡನೊಡ ।
ನೆಸೆದುದು ಜಯ ಜೀವ ನಂದ ವರ್ಧಸ್ವ ರವಂ ॥ ೯ ॥

ಪರಮೇಶ್ವರ ನುದಯಿಸಿದಂ ।
ನೆರೆದೆಲ್ಲರು ಮೆಱಗಿ ಮಾಗಳೆಂದು ಪುರಶ್ರೀ ॥
ಸುರನರಖಚರೋರಗರಂ ।
ಕರೆವಂತೊಪ್ಪಿದು ವಸಂಖ್ಯತೂರ್ಯರವಂಗಳ್ ॥ ೧೦ ॥

ವ॥ ಮತ್ತಮಾಸಮಯದೊಳ್.

ಮ॥ ತ್ರಿದಶರ್ ಬಾಜಿಪ ದಿವ್ಯತೂರ್ಯ್ಯರವಮಂ ನಿಷ್ಕಂಪಕರ್ಣಂಗಳಿಂ ।
ಗೆ ದಿಶಾದಂತಿಗಳಾಲಿಪಲ್ಲಿ ಮದಮಂ ಗಂಡಸ್ಥಳೋದೀರ್ಣಕಂ ॥
ಪದೊಳಂ ಸೇವಿಸಿ ತುಂಬಿಗಳ್ ತಣಿದು ವೇನುತ್ಸಾಹಮಂ ಮಾಡದಿ ।
ರ್ಪುದೆ ಸನ್ಮಾರ್ಗದೊಳಂ ಕ್ರಮಾಧಿಕರೊಳುದ್ಯದ್ದಾನಸಂಪ್ರೀತಿಯುಂ　　॥ ೧೧ ॥

ವ॥ ಅನ್ನೆಗ ಮಿತ್ತ ದೇವಲೋಕದೊಳ್.

ಹರಿಣೀ॥ ಅಮರಪಟಹಧ್ವಾನಂ ತನ್ನಿಂದೆ ತಾನೆ ವಿಘೂರ್ಣಿಸಿ ।
ತ್ತಮರಮಕುಟಾನೀಕಂ ತನ್ನಿಂದೆ ತಾನೆ ವಿನಮ್ರ ಮಾ ॥
ಯ್ತಮರಕುಸುಮಾಸಾರಂ ತನ್ನಿಂದೆ ತಾನೆ ಪೊದಳ್ದು ದಂ ।
ದಮರನುತ ನಪ್ಪರ್ಹತ್ಪುಣ್ಯಪ್ರಭಾವದಿ ನೆತ್ತಲುಂ　　॥ ೧೨ ॥

ಮ॥ ನಿರುತಂ ಭಾವನರುಂ ವನಾವಸಥರುಂ ಜ್ಯೋತಿಷ್ಕರುಂ ಕಲ್ಪವಾ ।
ಸರು ಮಾಗಿರ್ದ ಚತುರ್ವಿಧಾಮರರುದಾರರ್ ಸ್ತೋಮದೊಳ್‌ಕೂಡೆ ಭೋ ॥
ರ್ಗರೆಯುತ್ತಿರ್ದು ವನೇಕಶಂಖರವಭೇರೀಘೋಷಕಂಠೀರವ ।
ಸ್ವರಘಂಟಾರುತಿಗಳ್ ಯಥಾಕ್ರಮದಿ ನತ್ಯಾಶ್ಚರ್ಯ್ಯ ಮೆಂಬನ್ನೆಗಂ　　॥ ೧೩ ॥

ಕಂ॥ ಸ್ಮರಹರ ನುದಯಿಮ ನಱಿಪುವ ।
ಸುರವಿಷ್ಟರದೊಡನೆ ನಡುಗಿ ತಲರ್ವಿಲ್ಲ ಮಿದ ॥
ಚ್ಚರಿ ನೇಣ ಭೇದ ಮತನುವ ।
ಶರಾಸನಕ್ಕಂ ಸುರಾಸನಕ್ಕ ಮದೊಂದೇ　　॥ ೧೪ ॥

ವ॥ ಅಂತು ಸಮುಚಿತಾಮರೇಂದ್ರಸಮಿತಿವೆರಸು ಬಂದು ನಿಜನಿಳಯ ನಿರ್ವಿಶೇಷಲೀಲಾವಿಲಾಸಮಂ ವಿವಿಧಮಂಗಳಪರಂಪರಾಪರಿಕರವಿಭಾಸಮಂ ಸುಗ್ರೀವನಿವಾಸಮಂ ಪೊಕ್ಕು ನಿಯಮಿಸೆ.

ಕಂ॥ ಶತಮುಖನನುಮತಿ ದಿಗ್ಗಜ ।
ಪತಿಯಿಂ ದಿಱಿದುಚಿತದೇವಿಯುರ್ವೆರಸು ತಿರೋ ॥
ಹಿತದೇಹೆ ಯಾಗಿ [1]ವಿನಯನಿ ।
ಭೃತೆ ಪೊಕ್ಕಿಂದ್ರಾಣಿ ಸೂತಿಕಾಮಂದಿರಮಂ　　॥ ೧೫ ॥

ಉ॥ ಸ್ಫಾರಶರೀರಕಾಂತಿ ಜನನೀನಯನಾಬ್ಜಮ ನುಳ್ಳಲರ್ಚೆ ವಿ ।
ಸ್ತಾರಮನೋರಥಾಂಗಮ ನೊಣರ್ಚೆ ಬೆಳರ್ಪೆ ಳನೇಸಱಂತೆ ತೇ ॥
ಜೋರುಚಿರಾತ್ಮ ನಲ್ಲಿರೆ ಜಿನಾರ್ಭಕ ನೊಪ್ಪಮ್ಮಯೆ ಕಂಡು ನಿಂದು ಕ ।
ಣ್ಣಾರೆ ಪುಳೋಮಪುತ್ರಿ ನಡೆ ನೋಡಿದಳೞ್ಕಱ ನುಂಟುಮಾಡಿದಳ್　　॥ ೧೬ ॥

ವ॥ ಅಂತು ನೋಡಿ ತನಗದೃಷ್ಟಪೂರ್ವಮಪ್ಪ ಜಿನಾರ್ಭಕನ ಸರ್ವಾಂಗಸೌಂದರ್ಯಮುಮಂ, ಸರ್ವಲಕ್ಷಣಸಂಪತ್ತಿಯುಮಂ ಚಿತ್ತಮಂ ಕೌತುಕಂಗೊಳಿಸೆ ನಿಟಿಳತಟಘಟಿತಕರಸರೋಜೆ ಯಾಗಿ.

[1] ನಯವಿನಿಭೃತೆ.

ಕಂ|| ಜಿನನಿರ್ದ ಶಯನಸದನವು ।
ನನಿಮಿಷವಧು ಮೂಮೆ ಭಕ್ತಿಯಿಂ ಬಲಗೊಳುತಂ ||
ಕನಕಾಬ್ಜವೊಳಗೆ ಸರಸಿಯ ।
ನನುನಯದಿಂ ಬಳೆಸುವಂಚೆಯಂ ನೆನೆಯಿಸಿದಳ್ || ೧೭ ||

ವ|| ಅನಂತರಂ ತಾಯ ಮುಂದೆ ಮಾಯಾಶಿಶುವ ನಿರಿಸಿ.

ಕಂ|| ಅಂಜಿಯು ಮಂಜದೆ ತೆಗೆದಳ್ ।
ರಂಜಿಪ ಜಿನಶಿಶುವ ನಂದು ಶಚಿ ಶುಚಿ ತೆಗೆವಂ ||
ತಂಜಿಯು ಮಂಜದೆ ದಿವ್ಯವು ।
ನಂಜದರಾರ್ ಮುಟ್ಟುವಲ್ಲಿ ತೇಜಸ್ವಿಗಳಂ || ೧೮ ||

ವ|| ಅಂತು ತೆಗದೆತ್ತಿಕೊಂಡು ದೇವಾಂಗನಾಮಂಗಳರವಂಗಳುಂ, ಮಂಗಳಾನಕಂಗಳುಂ ಭೋರ್ಗರೆಯೆ ಪೊಱಮಟ್ಟು ಬರ್ಪಲ್ಲಿ.

ಉ|| ಭಾಸ್ವರಭಕ್ತಿಯಿಂ ದೆಱಗೆ ದೇವಗಣಂ ಜಯ ಜೀವ ನಂದ ವ ।
ರ್ಧಸ್ವ ಘನಸ್ವನಂ ನೆಗೞೆ ಬೀಸುವ ಸೀಗುರಿ ಸೋಗೆ ಯಾಗೆ ಕಾ ||
ರ್ತಸ್ವರಮೌಳಿಮಾಳೆ ಕುಡುಮಿಂಚಿನ ಗೊಂಚಲ ಕಾಂತಿಸಾರಸ ।
ರ್ವಸ್ವಮ ನೀಯೆ ಪೋಲ್ತೆಸೆದು ದಂದು ಘನಾಗಮಮಂ ಜಿನಾಗಮಂ || ೧೯ ||

ವ|| ಆಗಳತಿಭಕ್ತಿಯಿಂ ದೆಱಗುವಂತೆಱಗುವಿಭಪತಿಯ ಮೇಗಣ್ಗೆ ದಿಕ್ಕರಿಕರಾನುಕಾರಿ ನಿಜ ಭುಜಾದಂಡಂಗಳಂ ನೀಡಿ ಶಚೀದೇವಿಯಿಂ ತೆಗದು ತತ್ಕರಸರೋಜಂಗಳತ್ತಣಿಂದೆತ್ತಿಕೊಂಡು.

ಕಂ|| ತಲೆಯೊಳ್ ತಾಳ್ದುವ ನೊಸಲೊಳ್ ।
ನಿಲಿಪಿರ್ದ ಯೊಳ್ ತಳೆವ ಕುಳಿಶಿ ಚೂಡಾಮಣಿಗಂ ||
[1]ತಿಲಕಕ್ಕೆಕ್ಕಸರಕ್ಕಂ ।
ನಲಿನಲಿ ದಣಿಮಾಡಿದಂ ಜಿನೇಂದ್ರಾರ್ಭಕನಂ || ೨೦ ||

ವ|| ಅನಂತರಂ ತದಂಗಸಂಗಸಂಜನಿತಪರಮಾನಂದರೋಮಾಂಚಕಂಚುಕಿತಗಾತ್ರಂ ಸಹಸ್ರನೇತ್ರಂ ನಿಜೋತ್ಸಂಗತುಂಗಸಿಂಹಾಸನಸ್ಥಿತಂಮಾಡಿದಾಗಳ್.

ಕಂ|| ಇನ್ನೆವರ ಮಘಳ ಮೆನಿಸಿದು ।
ದೆನ್ನಕ್ಷಿಸಹಸ್ರ ದೊಂದುಜನ್ಮಮು[ಮ]ನಿಮೇ ||
[2]ಷೋನ್ನತಿ(ಯಿಾ)ಗಳ್ ಜಿನ (ತನು) ।
ವನ್ನೋಡುವ ಸಯ್ಪಿನಿಂದ ಮಾ(ದುದು)[3]ಸಘಳಂ || ೨೧ ||

ವ|| ಎಂದು ಪರಿತೋಷಪರಾಕಾಷ್ಠೆಯೊಳ್ ನಿಷ್ಠಿತಾತ್ಮ ನಾಗುತ್ತುಂ.

[1] ತಿಲಕಕ್ಕಮೆಕ್ಕಸರಕಂ. [2] ಷೋನ್ನತಿಯುಮಿಾಗಳ್ ಜಿನನನ್ನೋಡುವ. [3] ಮಾಯ್ತು.

ಚಂ॥ ತಳೆದು ನಿಜಾಂಗಪೀಠತಟದೊಳ್ ಜಿನನಂ ತನಿಸೋಂಕಿ ಹಸ್ತದಿಂ ।
ಪುಳಕಿತಗಾತ್ರ ನಾಗಿ ಮುಖಮಂ ಮುಱಿದಂ ಪೆಱಗೇಱಿ ಬರ್ಪ ನ ॥
ಲ್ಲಳ ಕುಚಕುಂಭದೊಂದು ತನಿಸೋಂಕಿನ ಸೌಖ್ಯ ಮದಿಂತೆನಲ್ ಮನಂ ।
ಗೊಳೆ ತವರಾಜದಿಂಪ ನಱಿದಿಂ ಬೞಿಕಂ ಪರಿಗಿಂಬು [1]ಸೇವ್ಯಮೋ ॥ ೨೦ ॥

ವ॥ ಆಗಳತ್ಯಂತಕಳಧೌತಶೈಲಸನ್ನಿಧಿಯು ಕುಳಗಿರಿಗಳೆನಿಸಿದ ನಿಜನಿಜಗಜಂಗಳಂ ಸೌಧ ರ್ಮೇಂದ್ರ ನೇಱಿದ್ಯೆರಾವತಕ್ಕೆ ಪಕ್ಕುಮಾಡಿ.

ಕಂ॥ ಮುತ್ತಿನ ಬಿಂಬದ ಜಾಳದೆ ।
ಮುತ್ತಿನ ವಿಭ್ರಮದಿ ನೆಸೆವ ಬೆಳ್ಗೊಡೆ ಭಗಣಂ ॥
ಸುತ್ತಿರೆ ಮಿಸುಗುವ ಶಶಿ ಯೆನಿ ।
ಸುತ್ತಿರೆ ಜಿನಪತಿಗೆ ಪಿಡಿದ ನೀಶಾನೇಂದ್ರಂ ॥ ೨೩ ॥

ವ॥ ನೆಗಳ್ದಿಸ್ಮಜ್ಜಳಮಂ ಜಿನಾಭಿಷವಣಕ್ಕೊಯ್ದಮ್ಮ ಜನ್ಮಕ್ಕೆ ಮಾ ।
ಡುಗೆ ಸಾಫಲ್ಯಮ ನಿಂದ್ರ ನೆಂದೆರೆದು ಗಂಗಾದೇವಿ ಪೇೞ್ದಿಟ್ಟಮಂ ॥
ಚಿಗಳೆಂಬಂತೆಸೆವಂತು ಚಾಮರಮ ನತ್ಯುತ್ಸಾಹದಿಂ ದಿಕ್ಕಿದರ್ ।
ಜಗದೀಶಂಗೆ ಸನತ್ಕುಮಾರಪತಿಯುಂ ಮಾಹೇಂದ್ರಕಲ್ಪೇಂದ್ರನುಂ ॥ ೨೪ ॥

ಕಂ॥ ಬಿತ್ತರದಿ ನಿಕ್ಕಿದರ್ ಭಗ ।
ವತ್ತೀರ್ಥಕರಂಗೆ ಕುಂಚಮಂ ಬ್ರಹ್ಮಬ್ರ ॥
ಹ್ಮೋತ್ತರಲಾಂತವಕಾಪಿ ।
(ಷ್ಠೋತ್ತ)ಮುಕಲ್ಪಮರೇಂದ್ರ ರಿಂದ್ರನ ಕೆಲದೊಳ್ ॥ ೨೫ ॥

ವ॥ ಮತ್ತಿತ್ತ ಮಿತರಕಲ್ಪಂಗಳಪ್ಪ.

ಕಂ॥ ನುತಶುಕ್ರಮಹಾಶುಕ್ರದ ।
ಶತಾರಸಹಸ್ರಾರದಾನತಪ್ರಾಣತದಾ ॥
ವಿತತಾರಣಾಚ್ಯುತೇಂದ್ರರ್ ।
ಪತಿಭಕ್ತಿಗೆ ಪಡೆ ಪಿಡಿದರಖಿಳಧಾಳಿಧ್ವಜಮಂ ॥ ೨೬ ॥

ವ॥ ಅಂತು ತಮತಮಗೆ ವೀತರಾಗಸೇವಾನುರಾಗರಸರಂಜನಾಯುತಚಿತ್ತರ್ ಸುತ್ತಿ ಮುತ್ತಿ ಸಮುಚಿತಯೋಗದಿಂ ನೆಗೆದು ನಿಂದನೇಕನಾಕನಾಯಕರ್ಬೆರಸು.

ಕಂ॥ ಜಿನವರನಂ ಮದುವೆಗೆ ಮು ।
ಕ್ತಿನಿತಂಬಿನಿ ಯತ್ತಲೊಯ್ವ ನಿಚ್ಚಣಿಗೆಗಳವೋಲ್ ॥
ಜನದೊಸಗೆ ನೆಗೞೆ ಪುಟ್ಟಿದ ।
ಮನೆಯಂ ಮುಂದಿಟ್ಟುಕೊಂಡು ಹರಿ ಪೊಱಮಟ್ಟಂ ॥ ೨೭ ॥

[1] ಫಬಿಗಬ್ಬರ್ (ಎಂದಿರಬಹುದು) ಪಬಿಗರ್ವ(ಹಳೆಗ).

ವ॥ ಆಸಮಯದೊಳ್.

ಕಂ॥ ಸಕಳಜಗ ಮಿಂದೆ ಶಬ್ದಾ।
ತ್ಮಕ ಮಾಯ್ತೆನೆ ಮೊೞಗೆ ಬಧಿರಿತಾಶಾಕರಿಗಳ್ ॥
ಪ್ರಕಟಿಸಿದು ವಮರತೂರ್ಯ।
ಪ್ರಕರಂಗಳ್ ಸಾರ್ಧಸಪ್ತಕೋಟಿಮಿತಂಗಳ್ ॥ ೨೮ ॥

ವ॥ ಅನಂತರಂ.

ಮ॥ ಜಗತೀವಿಶ್ರುತಮಂದರಕ್ಕೆ ನಡೆಯಲ್ ಪೇೞ್ದಿಂದ್ರ ನಾತ್ಮೀಯ ಸೇ।
ನೆಗೆ ಸಂರಂಭದೆ ಸನ್ನೆಗೆಯ್ಯೆ ಜಿನಯಾತ್ರಾಯೋಗ್ಯ ಮಾಗಧ್ವಶು ॥
ದ್ಧಿಗೆ ಗಂಗಾಂಬುಪವಿತ್ರಪಾಣಿತಳದಿಂ ದಭ್ಯುಕ್ಷಣಂಮಾಡುವಂ।
ತೊಗೆದಿಂಬಾದುದು ಕೆಯ್ಯ ಚಾಮರಚಳತ್ಪಾಂಡುಪ್ರಭಾಮಂಡಳಂ ॥ ೨೯ ॥

ವ॥ ಅಂತು ಸನ್ನೆಗೆಯ್ಯಲೊಡಂ.

ಕಂ॥ ಬಡಗಣ ದೆಸೆಗೆ ತೆರಳ್ದಾ।
ಗಡೆ ಮಂದರದತ್ತ ಮೊಗಸಿ ಗಗನಮ ನೋರಂ ॥
ತೆಡೆಗೊಂಡುದು ಗೆಡೆಗೊಂಡುದು।
ನಡೆಗೊಂಡುದು [1]ಹಾದಿಗೊಂಡು ದಮರಾನೀಕಂ ॥ ೩೦ ॥

ಚಂ॥ ತಳರ್ವ ವಿಮಾನಕೋಟಿ ನಡೆದೊಪ್ಪುವ ವಾರಣಕೋಟಿ ಬಾಜಿಪ।
ಗ್ಗಳಿಕೆಯ ತೂರ್ಯಕೋಟಿ ನೆಗೆವಾತಪವಾರಣಕೋಟಿ ಬೀಸುವು ॥
ಜ್ಜ್ವಳಚಮರೀಜಕೋಟಿ ಮಿಳಿರ್ವುಚ್ಚಮಹಾಧ್ವಜಕೋಟಿ ಮಿಂಚಿ ಸಂ।
ಚಳಿಸುವ ಶಸ್ತ್ರಕೋಟಿ ಬಗೆಗೊಂಡುದು ತಂಡದೆ ದೇವಕೋಟಿಯಾ ॥ ೩೧ ॥

ಚಂ॥ ಅನಿಮಿಷದೇಹದೀಪ್ತಿ ಜಳ ಮೆತ್ತಿದ ಸತ್ತಿಗೆ ಫೇನರಾಜಿ ಕೇ।
ತನಚಯ ಮೂರ್ಮಿಮಾಳೆ ಬಹುವಾಹನಸಂತತಿ ನಕ್ರಚಕ್ರ ಮಂ ॥
ಗನೆಯರ ಕಣ್ಬೊಣರ್ ಪೊಳೆವ ಮೀಂಬೊಣರೆಂಬಿನ ಮಾಗಳಿಂದ್ರವಾ।
ಹಿನಿಯವೊಲಿಂದ್ರವಾಹಿನಿ ಮನೋಹರ ಮಾಯ್ತು ನಭೋವಿಭಾಗದೊಳ್ ॥ ೩೨ ॥

ಉ॥ ಈ ನಿಖಿಳಾಮರರ್ಗೆ ಜಿನಯಾತ್ರೆಯೊಳಾಗದು ಪಾಱುಗೆಯ್ತು ಮ।
ಧ್ವಾನಮ ನಿಂಬುಮಾಡಿ ನಡಿಯಿಪ್ಪೆ ನೆನುತ್ತುಮೆ ಶಕ್ರವಿಕ್ರಿತಂ ॥
ಶ್ರೀ ನಿಱಿಸಿಟ್ಟ ನಿಚ್ಚಣಿಗೆ ಯೆಂಬಿನೆಗಂ ಸ್ಫಟಿಕೇಂದ್ರನೀಲಸೋ।
ಪಾನದ ಮಾಱುಪಙ್ತಿ ನಿಮಿರ್ದೇನೆಸೆದಿರ್ದುದೊ ಮಂದರಂಬರಂ ॥ ೩೩ ॥

[1] ಹಾರಿ.

ಕಂ॥ ಸ್ಫುರಯಿಪ ತಮಾಳವೀಥಿಗ ।
ಳೆರಡರ ನಡುವಲರ್ದ ಕುಂದವನದವೊಲೆನಿಸಿ ॥
ತ್ತಿರಡುಂ ನೀಲದ ಸೋಪಾ ।
ನರಾಜಿಗಳ ನಡುವಣಿಂದುಮಣಿಸೋಪಾನಂ ॥ ೩೪ ॥

ವ॥ ಅಲ್ಲಿ.

ಕಂ॥ ಅಂಚೆಯು ನಡೆಯು ಬೆಡಂಗಂ ।
ಮುಂಚಲ್ಪಿಡಿದಿರ್ದ ರಿವರ್ಗ ಳೆನೆ ಮೃದುಗತಿಯಿಂ ॥
ಕಾಂಚೀಕಳರುತಿ ನಿಮಿರ್ವಿನೆ ।
ಗಂ ಚೆಲ್ವಂ ಮೆಱೆದರಾಗಳಮರಾಂಗನೆಯರ್ ॥ ೩೫ ॥

ಚಂ॥ ಅಳಿಕುಳಕುಂತಳಂಗಳ ರಥಾಂಗಕುಚಂಗಳ ಕೋಕಿಳಸ್ವನಂ ।
ಗಳ ಕಳಹಂಸಮಂದಗಮನಂಗಳ ಚಾರುಚಕೋರಲೋಚನಂ ॥
ಗಳ ಶಶಿಮಂಡಲಾನನೆಯ ರೀಕೆಗ ಳೀಗುಣಪಕ್ಷದಿಂ ವಿಯ ।
ತ್ತಳಗಮನಕ್ಕೆ ತಕ್ಕರೆನೆ ಹಾರಿವೊಲೊಪ್ಪಿದರಿಂದ್ರನಾರಿಯರ್ ॥ ೩೬ ॥

ಚಂ॥ ಸುರುಚಿರ ವಿದ್ರುಮಾಧರದಿ ನುತ್ತಮಮೌಕ್ತಿಕದಂತದಿಂ ಮನೋ ।
ಹರಹರಿನೀಳಕುಂತಳದಿ ನುಜ್ವಳವಜ್ರನಖಂಗಳಿಂ ಸ್ಫುರ ॥
ನ್ಮರಕತವರ್ಣದಿಂ ದೆಸೆದುದಂದಮರೀತತಿ ಪಂಚರತ್ನದಿಂ ।
ವಿರಚಿಸಿ ಕೊಟ್ಟ ಬಣ್ಣಸರ ಮಂಬರಲಕ್ಷ್ಮಿಗಿದೆಂಬಿನಂ ಜನಂ ॥ ೩೭ ॥

ಚಂ॥ ಸ್ಫುರಿತಪಯೋಧರಂಗಳೆ ಪಯೋಧರಮಂ ಮರಲೊತ್ತಿ ಸತ್ಪ್ರಭಾ ।
ಚರಣಮೆ ಸತ್ಪ್ರಭಾಚರಣಶೋಭೆಯ ನೀಯೆ ಚಳದ್ವಿಚಿತ್ರತಾಂ ॥
ಬರಮೆ ವಿಚಿತ್ರತಾಂಬರ ಮದಾಗೆ ಮುಖಾಬ್ಜ ಮದಬ್ಜಲೀಲೆಯಂ ।
ತಿರೆ ಸುರಕಾಂತೆಯರ್ ಸಜಳಕಾಂತೆಯ ರೊಪ್ಪಿದರಾಪ್ರಯಾಣದೊಳ್ ॥ ೩೮ ॥

ಕಂ॥ ಮುಳಿವುಱುವ ಬಯ್ವ ಬಗ್ಗಿಸು ।
ವೆಳಸುವ ತಿಳಿವೆರೆವ ನೆರೆವ ಬಸನದ ಬಿನದಂ ॥
ಗಳನೆ ಮಱೆದಭವನೊಸಗೆಗೆ ।
ತಳರ್ದುದದೇಂ ಭಕ್ತಿ ಪಿರಿದೊ ಸುರದಂಪತಿಯಾ ॥ ೩೯ ॥

ವ॥ ಆಗಳ್.

ಕಂ॥ ಎಡವಕ್ಕದ ಬಲವಕ್ಕದ ।
ಪಡಿಯಱುದೆಡೆಯಱದು ನಡೆಯಿಪಿಂದ್ರನ ಪಲರುಂ ॥
ಪಡೆವಳರ ಜಡಿದು ನಡೆಯಿಪ ।
ಪಡಿಯಱರುಲಿ ಗೆಲಿದುದುಲಿವ ಜಲನಿಧಿಯುಲಿಯಂ ॥ ೪೦ ॥

ವ॥ ಮತ್ತಂ.

ಮ॥ ಪುದಿದಲ್ಲಲ್ಲಿ ಮನೋಜ್ಞವಾದ್ಯರವದಿಂ ದಲ್ಲಲ್ಲಿ ಮಾಂಗಲ್ಯಗೇ ।
ಯದಿ ನಲ್ಲಲ್ಲಿ ಸುರಾಂಗನಾಲಟಹದಿಂ ದಲ್ಲಲ್ಲಿ ಸದ್ವಂದಿಘೋ ॥
ಷದಿ ನಲ್ಲಲ್ಲಿ ನತಾಮರಸ್ತುತಿಗಳಿಂ ದಲ್ಲಲ್ಲಿ ಪುಷ್ಪೋಪಹಾ ।
ರದಿ ನಲ್ಲಲ್ಲಿ ವಿಕೀರ್ಣವರ್ಣರಜದಿಂ ಚೆಲ್ವಾಯ್ತು ದೇವಾಗಮಂ ॥ ೪೧ ॥

ಕಂ॥ ಪೊಟಿಲ ವಿಳಾಸಿಜನಂಗಳ ।
ನೆಟಿಲ್ ನಭೋಮುಕುರತಳದೊಳೆಸೆದವುದೆನೆ ಪೊಂ ॥
ಪುಟಿಯಿಂ ನಿಳಿಂಪಸೈನ್ಯಂ ।
ಕೆಳಗಿರ್ದೀಕ್ಷಿಪರ ಕಣ್ಗೆ ತೋಱಿದುದಿನಿಸಂ ॥ ೪೨ ॥

ಅಂತಂತೆ ನಡೆಯೆ ನಡೆಯೆ ನ ।
ಭೋಂತರದೊಳ್ ರೂಪುದೋರ್ಪ್ಪುದುಂ ಮಾಣ್ಬ ಮರು ॥
ತ್ಸಂತಾನದ ಕಳಕಳಮ ನಿ ।
ರಂತರಿತಂ ಕೇಳಲಾಗಿ ಭಾವಿಸಿತು ಜನಂ ॥ ೪೩ ॥

ವ॥ ಆಗಳುತ್ಸಾಹಗೇಹದಂತೆ ಧೃತಪೂರ್ಣಕುಂಭಮುಂ, ರವಿಮಧ್ಯಸಮಯದಂತೆ ನವಗ್ರಹ ವಿಭಾಸಿಯುಂ, ಪಿಪ್ಪಳಮಹೀಜದಂತೆ ಮದವತ್ಕರಟಮುಂ, ಜಿನಭವನದಂತೆ ಶ್ರವಣಸಂಗಿಯು, ವೈದ್ಯಜನದಂತೆ ಸಗರಾನುವರ್ತಿಯುಂ, ನರೇಂದ್ರಭವನದಂತಂತಃಪುರಪ್ರಭಾವಮುಂ, ಮುಕುರ ದಂತೆ ಸಂಗತಪ್ರತಿಮಾನಮುಂ, ಮದಿರಾಂಗವೃಕ್ಷದಂತೆ ಶುಂಡಾನುಬಂಧಿಯುಂ, ದೇವಮುಖದಂತೆ ಪುಷ್ಕರಸ್ಫುರಿತಮುಂ, ವಿಳಾಸಿನೀಕರ್ಣದಂತೆ ಕರ್ಣಿಕಾಕಳಿತಮುಂ, ಬಾಳಿಕಾ[ಸ್ಪದ]ವಿಳಾಸದಂತೆ ಸಲಿಲತಾಳುತಳಲಾಲಿತಮುಂ ? ಜಯರಾಮಾಮಹಾದೇವಿಯಂತೆ ಸುಗ್ರೀವಾವಳಂಬಿಯುಂ, ವನ ಪ್ರವೇಶದಂತೆ ವಿಪುಳಾಸನ ಪ್ರಭಾಸಿಯುಂ, ದ್ವಿಜನ್ಮನಂತೆ ಸಮುತ್ತುಂಗವಂಶಮುಂ, ಸುಕೇಶಿ ಯಂತೆ ಸಂಸ್ನಿಗ್ಧಜಾಲಮುಂ, ಹಿರಣ್ಯದಂತಜಕುಕ್ಷಿಲಕ್ಷ್ಮ್ಯಮುಂ, ಪ್ರವೀಣೇಶಭವನದಂತೆ ಸತ್ಕೋಶ ಭಾಸಿಯುಂ, ಪ್ರಭಾತದಂತೆ ನೂತನಖರಾಂಶುಸಲಿಲಪಾದಮುಂ, ರುದ್ರನಂತೆ ಶುಚಿರೋಮಾಂಗ ಸಂಗಿಯುಂ, ನಿಧಿಯಂತನಂತಪದ್ಮಾವಳಂಬಿಯುಂ ಬಲಭದ್ರನಂತೆ ದಾನವಾರಿಪ್ರಯುಕ್ತಮುಂ, ತಿಮಿರದಂತೆ ಬಹುಲಕ್ಷಣಾವಲಂಬಿತಮುಮೆನಿಸಿ.

[1] [ಭಾಳ]ಕಪೋಲಕರ್ಣಕರಚೂಚಕಲೋಚನಕೇಶರೋಮಕೂ ।
ಪಾಳಿಯಿ ನುಣ್ಮಿ ಪೊಣ್ಮುವ ಮದಪ್ರಸರಂ ಲವಲೀ ಲವಂಗ ತ ॥
ಕ್ಕೋಳ ತಮಾಳ ಸಪ್ತದಳ ಸೌರಭಮುಂಗರಸಾಳಿಗಂ ವಿಲೋ ।
ಳಾಳಿಗ ಮೊಪ್ಪಿತಲ್ಲಿ ಮಣಿಕುಂಡೆನಬಂಧುರ ವಿಂದ್ರಸಿಂಧುರಂ ॥ ೪೪ ॥

---

[1] ತೊಳಪ ಕಪೋಲಕರ್ಣಕರಚೂಚಕಲೋಚನ ರೋಮಕೂ ।
ಪಾವಳಿಗಳಿ ನುಣ್ಮಿ ಪೊಣ್ಮುವ ಮದಪ್ರಸರಂ ಲವಲೀಲವಂಗ ತ ॥
ಕ್ಕೋಳಿ (ತ) ತಮಾಲಸಪ್ತದಳ ಸೌರಭಮುಂಗರ ಸಾಳಿಗಂ ವಿಲೋ
ಳಾಳಿಗ ಮೊಪ್ಪಿತಲ್ಲಿ ಮಣಿನಿಕುಂಡೆನ ಬಂಧುರ ವಿಂದ್ರಸಿಂಧುರಂ
(೪೪) ಈ ಪದ್ಯದಲ್ಲಿ ಛಂದೋಭಂಗವಿರುವುದರಿಂದ ತಿದ್ದಿ ಮೇಲೆ ಮುದ್ರಿಸಿದೆ.)

ರಗಳೆ|| ಆನೆಗಟ್ಟಿ ನಿಳಿಂಪಮದದ್ವಿಪಕ್ಕೆ ।
ಪಕ್ಕನೆ ಮಣಿಘಂಟಾಗಣದ ಮಸಕ ।
ಮಸಕಱಿಂದ ರವಂಗಳಿ ನಂದೆಸೆಯೆ ।
ದೆಸೆಯೆಲ್ಲಂ ಬಧಿರಿತ ಮೆನಿಸುವನ್ನ ।
ವನ್ನಗ ಮಚ್ಚರದ ವಿವಿಧಶೋಭಿ ।
ಶೋಭಿಸೆ ಮೂವತ್ತೆರಡೊಗೆದುವಾಸ್ಯ ।
ವಾಸ್ಯದೊಳೋರೊಂದಱೊಳೆಂಟುಕೊಂಬು ।
ಕೊಂಬುಗಳೋರೊಂದಱೊ ಳೆರಡುಸರಸಿ ।
ಸರಸಿಗಳೋರೊಂದಱೊ ಳೋರೊಂದು ನಳಿನಿ ।
ನಳಿನಿಗಳೋರೊಂದಱೊ ಳಾದ ಮಲರ್ದು ।
ಮಲರ್ದಿರೆ ಮೂವತ್ತೆರಡೊಪ್ಪುವಬ್ಜ ।
ವಬ್ಜದೊಳೋರೊಂದಱೊ ಳೆಸಳ ರಾಜಿ ।
ರಾಜಿಸೆ ಮೂವತ್ತೆರಡೆದ [ಱ] ಮೇಲೆ ।
ಮೇಲೆನೆ ಚೆಲ್ವು ಮದರ್ಕೆ ಮತ್ತೆ ।
ಮತ್ತೆನಿಸದೆ ಮೂವತ್ತಿರ್ವರಾಗಿ ।
ರಾಗಿಸಿ ನಲಿದಮರಿಯರಾಡುವಲ್ಲಿ ।
ವಲ್ಲಿಗಳೆನೆ ನಳಿತೋಳ್ಗಳ್ ತುಱುಗೆ ।
ತುಱುಗೆವೆಗಣ್ಗಳ್ ಮಿಗೆ ತೊಳಗಿ ಬೆಳಗೆ ।
ಬೆಳಗೆಯ ರಸಭಾವಕ್ಕನಿಸೆ ಮಾರ್ಗ ।
ಮಾರ್ಗಂ ಮುದಮಂ ದೇಸಿ ಪಡೆಯೆ ।
ಪಡೆಯೆಲ್ಲಂ ಮೆಚ್ಚಿದು ದಮರಪತಿಯ ।
ಪತಿಯೊಸಗೆಯ ನೊದವಿಪ ವಿಮಳಮತಿಯ || ೪೫ ||

ಚಂ|| ಜಳರುಹಪತ್ರಪತ್ರಗಳ ಮೇಲೆನಸುಂ ಕುಣಿವಂಗನಾಜನಂ ।
ಗಳ ನಳಿತೋಳ ತಕ್ಕೆ ಬಿಸವಲ್ಲಿಗಳಂ ಪದಪಾಣಿ ಪಲ್ಲವಂ ||
ಗಳ ಮುಖ ವಂಬುಜಂಗಳೊದವಂ ತರಳಾಳಕಜಾಳಕಂಗಳು ।
ಚ್ಚಳದಳಿಮಾಳೆಯುಂ ದ್ವಿಗುಣಿಸಲ್ ನೆಱೆದಿರ್ದುವು ತತ್ಪ್ರದೇಶದೊಳ್ || ೪೬ ||

ಕಂ|| ಓವದೆ ತುೞಿದೇಕೇಂದ್ರಿಯ ।
ಜೀವಮ ನೀಜಳಜಕುಳಮ ನಳರಿಸೆ ಸಾರ್ಗಂ ||
ಸಾವದ್ಯ ಮೆಮ್ಮ ನೆಂಬವೊ ।
ಲಾವನಿತೆಯರೆಸಳ ನಿನಿಸು ಮುಟ್ಟದೆ ಕುಣಿದರ್ || ೪೭ ||

ವ|| ಅಂತು ಮಲ್ಲದೆಯುಂ.

ಚಂ|| ಅಮಳಜಿನೋತ್ಸವಾಗಮನದೊಳ್ ಸುಪವಿತ್ರೆಯರೇಕೆ ಮೆಟ್ಟುವರ್ ।
ಕಮಳೆಮ ನೀರಜೋಧಿಕಮ ನಾಱಿಡಿದಾಣಮ ನಪ್ರಶಸ್ತ್ರಜ ॥
ನ್ಮಮ ನಧರೀಕೃತಾರ್ಥಗುಣಮಂ ಮಧುಪಾತ್ರಮ ನುಗ್ರರುಕ್ಸಹಾ ।
ಯಮ ನುರುಕಂಟಕಾಂಗಮ ನೆನುತ್ತಿರೆ ಮೆಟ್ಟದರಿಲ್ಲ ನೃತ್ಯದೊಳ್ ॥ ೪೮ ॥

ಕಂ|| ಆಕೆಗಳಿಂ ತುಱುಗಿದ ತ ।
ನ್ನಾಕೃತಿ ಬರೆದಣ್ಕೆ[1]ಗೆಯ್ದು ರಸಚಿತ್ರಗತ ॥
ಸ್ತ್ರೀಕುಂಜರಮಂ ಪೋಲ್ತು ।
ತಾತ್ತು ಕುಂಜರ(ಮ)ಮಳಗಗನಫಳಕಸ್ಥಳದೊಳ್ ॥ ೪೯ ॥

ವ|| ಅದಲ್ಲದೆಯುಂ.

ಮ|| ಪಲವುಂ ಕಣ್ಗಳಿ ನೆಯ್ದೆ ನೋಟ್ಪಿ ಪಲವುಂ ಹಸ್ತಂಗಳಿಂ ದರ್ಪ್ಯಮಂ ।
ಗಲಮಂ ಮಾಱ್ಪನಿತಿಲ್ಲದಾಂತರಿಯೆ ನೀತೀರ್ಥೇಶನುತ್ಸಾಹದೊಳ್ ॥
ನಲಿದೆಂಬಂತಱುವತ್ತುನಾಲ್ಕುನಯನಂ ಮೂವತ್ತೆರಟ್ಕೆಯ್ ಕುತೂ ।
ಹಲಮಂ ಪುಟ್ಟಸೆ ತಾಳ್ದಿ ವಿಕ್ರಿಯೆಯ ನೇಂ ಶಕ್ರೇಭ ಮೊಪ್ಪಿರ್ದುದೋ ॥ ೫೦ ॥

ಕಂ|| ಆತತಮದನಿರತಂ ಪುರು ।
ಹೂತಗಜಂ ಕರ್ಣತಾಳಪವನಾಹತಿಯಿಂ ॥
ಜ್ಯೋತಿರ್ಲೋಕವಿಮಾನ ।
ವ್ರಾತದ ಜೀವಮೂತದೊಡ್ಡ ನಧರಿಸಿತೆನಸುಂ ॥ ೫೧ ॥

ವ|| ಅಂತು ಬರೆವರೆ.

ಕಂ|| ತಪನೀಯಶೈಲ ಮಮರಾ ।
ಧಿಪ ನಕ್ಷೆಗೆ ಲಕ್ಷ್ಯ ಮಾಗೆ ಸೊಗಯಿಸಿದುದು ರಾ ॥
ಜಿಪ ಋತುವಿಮಾನ ಮೆಂಬಾ ।
ತಪತ್ರದುದ್ದಾಮಹೇಮದಂಡಾಕೃತಿಯಿಂ ॥ ೫೨ ॥

ವ|| ಆ ಸಮಯದೊಳ್.

* ಮ|| ಪದುಳಂ ನಿರ್ಝರವಾರಿಯಂ ತಳಿಯುತುಂ ಮಂದಾರಕಾಗಂಧಮಂ ।
ಕೆದರುತ್ತುಂ ಮುಗಿಲಚ್ಚಮುತ್ತ ಸುಗುತಂ ಪುಷ್ಪಂಗಳಂ ಸೂಸುತುಂ ॥
ತ್ರಿದಶಾರಾಧ್ಯನ ನರ್ಘ್ಯಪೂರ್ವ ಮಿದಿರ್ಗೊಳ್ವಂತಾಗಿ ಬಂದಾನಗೇಂ ।
ದ್ರದ ಮಂದಾನಿಳ ನಾಱಿಸಿತ್ತು ನಯದಿಂ ದೇವಾಗಮಶ್ರಾಂತಿಯಂ ॥ ೫೩ ॥

ವ|| (ಅಂತು ಬಂದು (ತಣ್ಪಿಸಿ)ದ ಮಂದಪವನನಿಂದ ಮಖಿಳಬೃಂದಾರಕಬೃಂದಂಬೆರಸಾನಂದಿತಾಂಗನಾಗಿ) ತದನಂತರಂ ಪುರುಹೂತನಿಂದ್ರಾಣಿಗಾ ಗಿರೀಂದ್ರಮಂ ತೋಱಿ.

---

[1] ದಂಕೆ.

ಚಂ॥ ಬಹುತರಸಾನುಶಾಖೆಗಳಿ ನುನ್ಮುಖರತ್ನಮಯೂಖಮಂಡಳೀ ।
ಬಹಳವಿಚಿತ್ರಪತ್ರಚಯದಿಂ ಭಗಣೋಜ್ವಳಪುಷ್ಪದಿಂ ನವ ॥
ಗ್ರಹಫಳವೃಂದದಿಂ ದಿವಿಜಯುಗ್ಮವಿಹಂಗಮರಾವದಿಂ ಮಹೀ ।
ಮಹಿತ ಮಿದಲ್ತೆ ಮೇರುನಗ ಮೆಂಬ ನಮೇರುನಗಂ ಮೃಗೇಕ್ಷಣೇ ॥ ೫೪ ॥

ಕಂ॥ ಪವಣಿಸಿ ಜಿನೇಂದ್ರಮತದಿಂ ।
ನವನವತಿಸಹಸ್ರಯೋಜನೋಚ್ಛ್ರಾಯದಿಂ ಸಂ ॥
ಭವಿಸಿದ ಸಹಸ್ರಯೋಜನ ।
ದವಗಾಹದಿ ನೆಸೆವುದೀನಗಂ ಶಶಿವದನೇ ॥ ೫೫ ॥

ಜಿನಭವನಚತುಷ್ಟಯುನೀ ।
ವನವೊಂದೊಂದೆನಿಸಿ ಮಿಸುಪ ಮೇಖಳೆ ನಾಲ್ಕುಂ ॥
ತನಗಮರೆ ನಿಮಿರ್ದುದೀಶಾಂ ।
ಚನಶೈಳಂ ಋತುವಿಮಾನಚುಂಬಿತಚೂಳಂ ॥ ೫೬ ॥

ಮ॥ ವಿನುತೋದ್ಯತ್ಫಲಭದ್ರಶಾಲೆ ಯೆಸೆದತ್ತೀ ಭದ್ರಶಾಲಂ ಸುನಂ ।
ದನಮಾಗಿರ್ದುದು ದಿವ್ಯನಂದನ ವಿದಿಂತೊಪ್ಪಿರ್ದುದೀಸಾರಸೌ ॥
ಮನಸಂ ಸೌಮನಸಂ ವಿಕಾಸಿಕುಸುಮಶ್ರೀಪಾಂಡುಕಂ ಪಾಂಡುಕಂ ।
ಮನಕಿಂಬಾಯ್ತುದೆ ನೋಡೆ ತನ್ನ ಗಿರಿಗೀ ನಾಲ್ಕುಂಬನಂ ಜವ್ವನಂ ॥ ೫೭ ॥

ವ॥ ಅದಲ್ಲದೆಯುಂ.

ಮ॥ ವಿಳಸತ್ಪಾಂಡುಕ ಪಾಂಡುಕಂಬಳಶಿಲಾಪಟ್ಟಂ ಶಿಲಾಪಟ್ಟಕಂ ।
ಬಳಸತ್ಕಾಂತ್ಯತಿರತ್ನಸಂಚಳಶಿಲಾಪಟ್ಟಂಗಳಂ ನಾಲ್ಕುಕೋ ॥
ಣ್ಗಳೊಳೊಪ್ಪಿರ್ಪುವು ಭಾರತಾಪರವಿದೇಹೈರಾವತಪಾಗ್ವಿದೇ ।
ಹಲಸದ್ಭೂತಜಿನವ್ರಜಕ್ಕೆ ಸವನಸ್ಥಾನಂಗಳೀಶೈಳದೊಳ್ ॥ ೫೮ ॥

ವ॥ ಎಂದು ವಸ್ತುಕಥನಂ ಮೆಱೆದು.

ಕಂ॥ ಈನಗದ ನಿಶಿತವಜ್ರದ ।
ಸಾನುಗಳಿಂ ದೊಗೆದ ಚಂದ್ರಬಿಂಬದಿ ನಮೃತಂ ॥
ಸೋನೆ ಸುರಿವಂತು ಸುರಿತರೆ ।
ಮಾನವರುಂತಮರ ರಕ್ಕು ಮೆಂದಪೆ ನಬಳೇ ॥ ೫೯ ॥

---

* ಮ॥ ವಿಳಸನ್ನಿರ್ಝರನೀರಸಾರ ಮುಪಕಂಠಾಂಭೋಜಿನೀಗಂಧಸಿಂ ।
ಧುಳತಾಕುಟ್ಮಳಜಾಳಶಾಳಿನಿಕಟೋದ್ಯಾನಪ್ರಸೂನಾನ್ವಿತಂ ॥
ಜಳಗಂಧಾಕ್ಷತಪುಷ್ಪದಿಂದ ಮಿದಿರ್ಗೊಂಡಿಂದ್ರಾರ್ಚಿತಂಗರ್ಘ್ಯಮಂ ।
ಗಳಮಂ ಮಾಳ್ಪವೊಲಾಯ್ತು ಮಂದರನಗೇಂದ್ರಾಯಾತಶೀತಾನಿಳಂ ॥

* ೫೭ ನೆಯಪದ್ಯವೂ ಈ ಪದ್ಯವೂ ಸಮಾನಾರ್ಥಕವಾಗಿರುವುದರಿಂದ ಈ ಪದ್ಯವನ್ನು ಕೆಳಗೆ ಬರೆದಿದೆ.

ಕಂ|| ಮೆಚ್ಚಿ ಜಿನಜನ್ಮದೊಸಗೆಯ ।
ನಚ್ಚರಿವಟ್ಟೀಸುರಾದ್ರಿ ತಲೆದೂಗುವವೋಲ್ ||
ನಿಚ್ಚ ಮೆಸೆದಪುದು ನೋಡ ಮ ।
ರುಚ್ಚಂಚಳಮೇಘಪಟಳಪರಿವೃತಶಿಖರಂ || ೬೦ ||

ಮ|| ಪರಮಶ್ರೀಪತಿ ಬಂದೊಡಿಂದೊಸಗೆಯೊಳ್ ಸೇಸಿಕ್ಕುತುಂ ಪಾಡುತುಂ ।
ಪರಸುತ್ತುಂ ನಲಿದಾಡುತುಂ ನಗುತು ಮಿರ್ಪಂತಲ್ಲಿಗುತ್ತಿರ್ಪ ಪೂ ||
ಮರದಿಂ ತುಂಬಿಯ ಗೇಯದಿಂ ಬಹುವಿಹಂಗಾಳಾಪದಿಂ ಲೋಲವ ।
ಲ್ಲರಿಯಿಂ ಪುಷ್ಪವಿಕಾಸದಿಂ ಸೊಗಯಿಕುಂ ನೋಡೀನಗೋಪತ್ಯಕಂ || ೬೧ ||

ವ|| ಎಂದು ಪೊಗಟ್ಟಿನಂತರಂ.

ಮ|| ಕ್ಷಮೆಯುಂ ತಾಳ್ದಿದ ಪೆಂಪು ಗೋತ್ರನುತ ಮಪ್ಪುತ್ಕೋದಯುಂ ಮಂದರಾ ।
ಗ ಮೆನಿಪ್ಪುನ್ನತಿ ಜಾತರೂಪಧರ ಮಾಗಿರ್ಪ್ಪೇಳ್ಪ ಲೋಕತ್ರಯಾ ||
ಪ್ತಮಹತ್ವಂ ಹರಿವಿಷ್ಟರಾರ್ಹಮಹಿಮಾವಷ್ಟಂಭ ಮೊಪ್ಪಲ್ಕದೇಂ ।
ಸಮನಾದತ್ತೊ ಜಿನಂಗೆನುತ್ತೆಱಗಿದಂ ಲೇಖಾದ್ರಿಗಾಖಂಡಳಂ || ೬೨ ||

ವ|| ಅನಂತರಂ.

ಕಂ|| ಅಭಿಷವಮಂಗಳಪೀಠಂ ।
ತ್ರಿಭುವನಗುರುಗಿಂತೆಂದು ಮಂದರಕ್ಕೆ ಶಚೀ ||
ಪ್ರಭು ಮಾಡೆ ಭಕ್ತಿಯಿಂದೇಂ ।
ಪ್ರಭವಿಸಿತೋ ತ್ರಿಃಪ್ರದಕ್ಷಿಣೈಕವಿಧಾನಂ || ೬೩ ||

ಭೂಷಾಂಶುರುಚಿರ ಮಪ್ಪನಿ ।
ಮೇಷಗಣಂ ಬಲಗೊಳುತ್ತು ಮಿರ್ಪೆಡೆಯೊಳ್ ಲಂ ||
ಬೂಷನಗ ಮೊಪ್ಪಿದುದು ಪರಿ ।
ವೇಷಂಗೊಂಡರುಣತರಣಿಬಿಂಬದ ತೆಱದಿಂ || ೬೪ ||

ವ|| ಅಂತು ಬಲಗೊಂಡು ತದನಂತರಂ.

ಮ|| ಗುರುಪಾದಂ ಕಳಧೌತಗೌರರುಚಿರಚ್ಛಾಯಂ ಕರಕ್ರಾಂತವು ।
ಷ್ಕರದೇಶಂ ಪೃಥುಚೂಳಿಕಾವಿಳಸಿತಂ ನಕ್ಷತ್ರಮಾಳಾವೃತಂ ||
ಧರಣೀಂದ್ರಂ ಬಹುಕುಂಜರಾಜಿತವಿಳಾಸಂ ತನ್ಮರುದ್ದಂತಿ ಮಂ ।
ದರಮಂ ಮಂದರಮೇಱಿದಪ್ಪುದಿದು ಬೇಱಿಂಬಂತದೇನೇಱಿತೋ || ೬೫ ||

ವ|| ಅಂತು ಮಲ್ಲದೆಯುಂ.

ಕಂ॥ ಕಾಂಚನಘಂಟಾದ್ಯುತಿ ಕುಡು ।
ಮಿಂಚೆನೆ ಬೃಂಹಿತದ ಮೊಳಗು ಮೊಳಗೆನೆ ಭೂ ॥
ಷಾಂಚಿತರುಚಿ ಸುರಧನು ವೆನೆ ।
ಸಂಚಿತಶರದಭ್ರ ಮೆನಿಸಿ ತಡೆರ್ದಭ್ರಗಜಂ ॥ ೬೬ ॥

ಉ॥ ಲೋಲಲತೆಯುಂ ಸುರಾಗದ ಸುರಾಗದ ಪೂವ ನುದಿರ್಴್ತಂ ಲತಾ ।
ಜಾಳಕಜಾಳಕಂಗಳನೆಱಲ್ಚುತ ವಳ್ಳಿಱಿದಭ್ರದಭ್ರಮಂ ॥
ಚಾಳಿಸುತುಂ ಮದಾಳಿಯ ಮದಾಳಿಯ ನೋವದೆ ಸೋವುತುಂ ಸುರ ।
ವ್ಯಾಳಗಜಂ ವಿನೋದಿತ ವಿನೋದಿತಸಮ್ಮದ ವೇಱಿತದ್ರಿಯಂ ॥ ೬೭ ॥

ಕಂ॥ ವಾಸವಗಜದೊಡನಡರ್ದ ವಿ ।
ಳಾಸದ ಸುರಜನದ ಹಾರಿ ಪೋಲ್ತುದು ಗಿರಿಗ ॥
ಬ್ಜಾಸನನೆ ಪಂಚರತ್ನದ ।
ಸೂಸಕಮಂ ಮಾಲೆವೂವ ನೆಱಲಿಕ್ಕಿದವೋಲ್ ॥ ೬೮ ॥

ಚಂ॥ ಸ್ಫುರಿಪ ನಿತಂಬದಿಂ ಗುರಪಯೋಧರದಿಂ ಸುಮನೋವಿಳಾಸದಿಂ ।
ಪರಿಚಿತರಾಜಹಂಸಗತಿಯಿಂ ನುತಪಾದದಿ ನುದ್ಘಮೇಖಳಾ ॥
ಭರಣದಿ ನೆಮ್ಮೆಳೊಡ್ಡಿಪು ದಿದೆಂದುಱದೀಕೆಗಳೆಕ್ಕಿ ಮೆಟ್ಟಿದರ್ ।
ಪುರುಡಿನೊಳೀನಗೇಂದ್ರಮ ನೆನಲ್ಕಡರ್ದೇಱಿದ ರಿಂದ್ರಕಾಂತೆಯರ್ ॥ ೬೯ ॥

ಅನಿಮಿಷಕಾಂತೆಯರ್ ಪರಿದಸುಕ್ರಮದಿಂದಮೆ ಭದ್ರಶಾಲದೊಳ್ ।
ನನೆಗಳ ನಾಯ್ದು ನಂದನದ ಕೆಂದಳಿರಂ ತಳವಾರೆ ಕೊಯ್ದು ಸೌ ॥
ಮನಸದ ಪೂಗಳಂ ತಿಱಿದು ಪಾಂಡುಕದೊಳ್ ಮಿಡಿಯಂ ತೆರಳ್ಚಿ ಮಂ ।
ಡನಕೆ ವಿನೋದಮಂ ಮೆಱೆದು ತೀರ್ಚಿದ ರಾತ್ಮಮನೋರಥಂಗಳಂ ॥ ೭೦ ॥

ವ॥ ಆಗಳಾಸುಪರ್ವಪರ್ವತದ ನಾಲ್ಕನೆಯ ಮೇಖಳೆಗೆ ಮೇಖಳೆಯಂತಿರ್ದ ಪಾಂಡುಕವನ ಪ್ರದೇಶಮಂ ವಾಸವಂ ಮುಟ್ಟಿವರ್ಪುದುಂ ಅದಱ ಪೂರ್ವದಿಗ್ಭಾಗದೊಳ್ ಭರತಕ್ಷೇತ್ರಜನಿತಜಿನ ಜನದ ಜನನಸವಕ್ಕೆ ಯೋಗ್ಯಮಾಗಿರ್ದು.

ಕಂ॥ ತನಗೆಸೆಯೆ ನೂಱುಯೋಜನ ।
ದ ನೀಳ್ಪು ಮದಱರ್ಧ ಮೆನಿಸಿದಗಲಮು ಮರೆಯೋ ॥
ಜನ ಮೆನಿಪುನ್ನತಿಯುಂ ಚೆ ।
ಲ್ವೆನಿಸಿತು ಪಾಂಡುಕಶಿಳಾತಳಂ ಸಮುಪಟ್ಟಂ ॥ ೭೧ ॥

ಅದು ಶರದಭ್ರದ ಶಶಿಬಿಂ ।
ಬದ ಶಂಖದ ರಸದ ಬಿಸದ ಬೆಳ್ಳಿಯ ಬೆಳ್ಪಿಂ ॥
ಬಿದಿ ಸಮೆದಂತಿರೆ ಥಳಥಳಿ ।
ಪುದು ವಿಮಳದ್ಯುತಿಯಿ ನರ್ಧಚಂದ್ರಾಕೃತಿಯಿಂ ॥ ೭೨ ॥

ಚಂ॥ ಪೊಳೆವಲರ್ಗಣ್ಗಳುನ್ನತಕುಚಂಗಳೆ ಮುದ್ದುಮೊಗಂಗಳೊಳ್ಗುರು ।
ಳ್ಗಳ ನಳಿತೋಳ್ಗಳಚ್ಚರಿಯರಿಂ ಪ್ರತಿಬಿಂಬಿತಮಾಗಿ ಬಾಳಮೀಾಂ ॥
ಗಳ ಪೊಣರ್ವಕ್ಕಿವಿಂಡುಗಳ ತಾವರೆವೂಗಳ ತುಂಬಿವೆಣ್ಗಳು ।
ದ್ವಳಿಗಳ ಸಂಗದಿಂ ದೆಸೆವ ಗಂಗೆವೊಲೊಪ್ಪಿದು ದಾಕಿಳಾತಳಂ ॥ ೩೩ ॥

ವ॥ ಅಲ್ಲಿ.

ಮ॥ಸ್ರ॥ ಅತುಳಶ್ರೀದಂಡಿಕಾಮಂಡಿತ ಮಮರಮಣಿಸ್ತಂಭಸಂಭಾರಮಾಳಾಂ ।
ಚಿತಘಂಟಾಜಾಳಲೀಲಂ ರುಚಿನಿಚಿತವಿಚಿತ್ರಾಂಬರೋದ್ಯದ್ವಿತಾನಂ ॥
ನುತಮುಕ್ತಾಲಂಬಚುಂಬಂ ಧೃತವಿತತಪತಾಕಾಳಿ ಸೌಧರ್ಮನಿರ್ಮಾ ।
ಪಿತ ಮುತ್ತುಂಗಂ ಬೆಡಂಗಾಯ್ತು ಭಿಷವಣಮಹಾಮಂಡಪಂ ದಿವ್ಯಸೇವ್ಯಂ ॥ ೩೪ ॥

ಕಂ॥ ಆಮಂಡಪಮಧ್ಯದೊಳು ।
ದ್ದಾಮಮೃಗೇಂದ್ರಾಸನಂ ಕನನ್ಮಣಿಕಿರಣ ॥
ಶ್ರೀಮಸೃಣ ಮೆಸೆದುದಚ್ಛಸ ।
ರೋಮಧ್ಯದೊಳಲರ್ದ ಮಲರ್ದ ಪೊಂದಾವರೆವೋಲ್ ॥ ೩೫ ॥

ಹರಿಪೀಠಕನಕರುಚಿಯುಂ ।
ವರಪಾಂಡುಕಪಾಂಡುರುಚಿಯು ಮೊಂದೊಂದರ್ಕ್ಕೀರ್ ॥
ಸರಿಸದೆ ಮಲೆದು ಪಳಂಚುವ ।
ಪರಿ ಪೋರ್ಕುಳಿಯಾಡುವರ್ಕಶಶಿರುಚಿ ಯೆನಿಕುಂ ॥ ೩೬ ॥

ಅದಱಿರೊಳ್ ಸುರಪತಿ ತಂದಿರಿ ।
ಸಿದೊಡತಿತೇಜಸ್ವಿ ಪೂರ್ವಮುಖ ನಾಗಿರ್ದೊ ॥
ಪ್ಪಿದ ನಾಗಳುದಯಗಿರಿಶಿಖ ।
ರದ ತರುಣದಿನೇಶನಂತೆ ತರುಣಜಿನೇಶಂ ॥ ೩೭ ॥

ಮ॥ ಜಯರಾಮಾಂಗನೆಯುಂ ಸುರದ್ವಿಪಮು ಮಾನುಂ ನೋಂತೆ ಪೆಮ್ಮಂತು ಪೆ ।
ರ್ಮೆಯಿ ನಿಂತಾಂತುಮೆ ಬೇಱಿ ಮತ್ತಿನ ಪಥೂಗಭಾರ್ಶಯುಂ ಮತ್ತಿನಾ ॥
ನೆಯ ಬೇಮತ್ತಿನ ಪೀಠ ಮೀಜಿನನ ನೆಂದಕ್ಷೂಣಮಾಣಿಕ್ಯರ ।
ಶ್ಮಿಯಿ ನಾವಿಷ್ಕೃತರಾಗ ಮಾದುದೆನಿಸಿತ್ತುತ್ತುಂಗಸಿಂಹಾಸನಂ ॥ ೩೮ ॥

ಕಂ॥ ಅದಱಿರ್ಕ್ಕೆಲದೊಳ್ ನಸುದ ।
ಗ್ಗಿ ದಲಿರೆ ಭದ್ರಾಸನಂಗ ಳುನ್ಮುಖರುಚಿಗಳ್ ॥
ಮುದದಿಂ ನೆಲಸಿದ ರದಱಿರೊಳ್ ।
ಪದುಳಂ ಪ್ರಥಮದ್ವಿತೀಯಕಲ್ಪಾಧೀಶರ್ ॥ ೩೯ ॥

ವ॥ ಅವರೊಡನೆ ಮತ್ತ ಮಿತರಕಲ್ಪಾಧಿನಾಯಕರ್ ಬೆಸಸೆ.

ಕಂ॥ ಸುತಸುರಪತಿಯುಂ ಸ್ವಾಹಾ ।
ಪತಿಯುಂ ಪಿತೃಪತಿಯು ಮಸುರ ಯಾದಃ॥
ಪತಿಯುಂ ರಯುಪತಿಯುಂ ಧನ ।
ಪತಿಯುಂ ಪಶುಪತಿಯು ಮೆನಿಸಿದಾಶಾಪತಿಗಳ್ ॥ ೮೦ ॥

ತಂತಮ್ಮ ವಾಹನಾಯುಧ ।
ಕಾಂತಾಜನಪರಿಜನಪ್ರಸಾಧನಚಿಹ್ನಾ ॥
ನಂತವಿಭೂತಿಯಿ ಸುಚಿತದಿ ।
ಗಂತದೊಳುಚಿತಾಸನಪ್ರದೇಶದೊಳಿರ್ದರ್ ॥ ೮೧ ॥

ವ॥ ಮತ್ತಂ.

ಕಂ॥ ಪರಿಚಾರಕರೆಸೆದಂದಿ ।
ರ್ದರಮರವೈರೋಚನಾದಿ ಸತ್ಪುರುಷಮಹಾ ॥
ಪುರುಷಾದಿ ಚಂದ್ರಸೂರ್ಯಾ ।
ದಿ ರೂಢಭಾವನವನಾಶ್ರಯು ಜ್ಯೋತಿಷ್ಕರ್ ॥ ೮೨ ॥

ಜಿನಸಭೆಯೊಳಗನ್ಯೋನ್ಯಂ ।
ಮುನಿಸಿಕ್ಕರ್ಮೆ ನೋಡೆ ಬಿಸಿಲ ಬೆಳ್ದಿಂಗಳ ಮ ॥
ಬ್ಬಿನ ನೆರವಿ ನೆರೆದುದೆನಿಸಿದು ।
ವನೇಕಮಣಿಮಕುಟರುಚಿಗಳಮರಾಧಿಪರಾ ॥ ೮೩ ॥

ವ॥ ಮತ್ತಮಲ್ಲಿ.

ಮ॥ ಕಳಶಂ ಪೆರ್ವೊಲೆ ರನ್ನಗನ್ನಡಿ ಕಪೋಲಂ ಲಾಜೆ ದಂತಾಂಶು ಕೋ ।
ಮಳದೂರ್ವಾಲತೆ ಪುರ್ಬು ದೀಪ ಮಧರಂ ಪೂಮಾಲೆ ದೃಗ್ದೀಪ್ತಿ ಕೆಂ ॥
ದಳಿರ್ಗಳ್ ಕೆಂದಳ ಮಾಗೆ ಮಂಗಳ (ಮೆ) ಮೆಯ್ವೆತ್ತಂತೆ ಬಂದಿರ್ದ್ದ ಮಂ ।
ಗಳವಸ್ತುಪ್ರಕರಂಗಳಂ ಪಸರಿಸುತ್ತಿಂದ್ರಾಣಿ ಕಣ್ಗೊಪ್ಪಿದಳ್ ॥ ೮೪ ॥

ವ॥ ಆಗಳಾಸಭೆಯ ಸನ್ನಿಧಿಯೊಳುಚಿತಪರಿಚಾರಿಕಾನಿಯೋಗದೊಳ್ ನೆರೆದು.

ಮ॥ ಕುಮುದಂ ದೃಷ್ಟಿ ಶಿರೀಷಮಾಲೆ ನಳಿತೋಳ್ ಬಂಧೂಕ ವೋಷ್ಠಂ ಮುಖಂ ।
ಕಮಳಂ ಸಂಪಗೆ ಮೂಗು ಕೇದಗೆ ನಖಂ ಕುಂದೋದ್ಗಮಂ ದಂತವಿ ॥
ಭ್ರಮ ಮಂಗಚ್ಛವಿ ಕರ್ಣಿಕಾರ ಮೆನೆ ಮೆಯ್ಯಾಂತಿರ್ದ ಸೌಂದರ್ಯದಿಂ ।
ಸುಮನಸ್ತ್ರೀಯ ರೆನಿಪ್ಪು ದಪ್ಪುದವರ್ಗಂಬಂತೊಪ್ಪಿದರ್ ದೇವಿಯರ್ ॥ ೮೫ ॥

ಕಂ॥ ಕಳಶಂ ಕನ್ನಡಿ ಸೊಡರೆಳ ।
ದಳಿರಚ್ಚಗಱಿಂಕೆ ಲಾಜೆ ಪೂಮಾಲೆ ಮೊಸರ್ ॥
ಘಳ ವಕ್ಷತೆ ಚಾಗಂ ಮಂ ।
ಗಳಪರಿಕರ ಮೆಸೆದುವಿಂದ್ರಸತಿಯರ ಕೆಯ್ಯೊಳ್ ॥ ೮೬ ॥

ಉತ್ಸಾಹಂ|| ಚಾರುಚಾಮರಾತಪತ್ರಪಾಳಿಕೇತುಕಳಶಭೃಂ ।
ಗಾರಮುಕುರಸುಪ್ರತಿಷ್ಠತಾಳವೃಂದಮೆಂಬ ವಿ ||
ಸ್ತಾರಿತಾಷ್ಟಮಂಗಳಂಗಳೆಸೆದು ಮಷ್ಟಕರ್ಮಕಾಂ ।
ತಾರದಾವದಹನ ಮಪ್ಪ ದೇವನೊಸಗೆ ಯೆಸಕದೊಳ್ || ೮೭ ||

ಕಂ|| ಅಷ್ಟೋತ್ತರದಶ[ಸ]ಮಿತಿಗ ।
ಳಷ್ಟೋತ್ತರಮೂರ್ತಿಗಷ್ಟಯೋಜನಗಾಹ ||
ಕ್ಕಷ್ಟಾರ್ಧಕೋಣಶೋಭೆಗೆ ।
ವಿಷ್ಟರ ಮಾದೇಕಯೋಜನಾಸ್ಯಘಟಂಗಳ್ || ೮೮ ||

ಮಂಗಳಜಲಪೂರ್ಣಂಗಳ್ ।
ಸಂಗತಮಣಿಭೂಷಣಂಗ ಳುರುಚಂದನಚ ||
ರ್ಚಂಗಳ್ ಪಲ್ಲವವಿಹಿತಮು ।
ಖಂಗಳ್ ಸೊಗಯಿಸಿದು ವಮಳಸೂತ್ರವೃತಂಗಳ್ || ೮೯ ||

ಮ|| ಅಮರೀಬಂಧುರದೇಹಗಂಧ ಮಮಳಶ್ರೀಖಂಡಕರ್ಪೂರಕಮಂ ।
ಕುಮುಸೌರಭ್ಯ ಮನಲ್ಪಕಲ್ಪಲತಿಕಾಪುಷ್ಪಸ್ರಜಾಮೋದ ಮು ||
ತ್ತಮಕೃಷ್ಣಾಗರುಧೂಪಧೂಮಪಟಳೀಸೌಗಂಧ್ಯಮಂದೀಕೃತ ।
ಭ್ರಮರಂ ತೆಕ್ಕನೆ ತೀವೆ ಗಂಧಮಯ ಮಾಯ್ತಂದಾಮಹಾಮಂಡಪಂ || ೯೦ ||

ಕಂ|| ಕಾಳಾಗರುವಿನ ಹೊಗೆ ಹರಿ ।
ನೀಳಸ್ತಂಭದ ಮರೀಚಿಯಿಂ ಸುಟಿವಳಿಸೀ ||
ಜಾಳದ ಕರ್ಪಿಂ ಕೊರ್ವಿ ತ ।
ಮಾಳದ ಲತೆಯೆನಿಸಿ ಪರ್ವಿತಾಮಂಡಪಮಂ || ೯೧ ||

ಶಾ|| ನಾನಾಮಂಗಳವಸ್ತ್ರಭೂಷಣಶುಚೀಭೂತಂ ಶಚೀನಾಥ ನೀ ।
ಶಾನೇಂದ್ರಂಬೆರಸಿರ್ದು ಪಾವನಪಯೋಗಂಧಾಕ್ಷತೋತ್ಫುಲ್ಲಪು ||
ಷ್ಪಾನೀಕಂಗಳೆ ನಂದು ಮಾಡಿದ ನುದಂಚನ್ಮಂತ್ರಪೂತಾನನಂ ।
ತಾ ನರ್ಘ್ಯೋದ್ಧರಣೋಚಿತಕ್ರಿಯೆಯ ನಾದಂ ಭವ್ಯರತ್ನಾರ್ಣವಂ || ೯೨ ||

ಗದ್ಯಂ

ಇದು ಸಮಸ್ತಭುವನಜನಸಂಸ್ತುತಜಿನಾಗಮಕುಮುದ್ವತೀ
ಚಾರುಚಂದ್ರಾಯಮಾಣಮಾನಿತ ಶ್ರೀಮದುಭಯಕವಿಕಮಳಗರ್ಭ
**ಮುನಿಚಂದ್ರಪಂಡಿತದೇವ**
ಸುವ್ಯಕ್ತಸೂಕ್ತಿ ಚಂದ್ರಿಕಾಪಾನಪರಿಪುಷ್ಟಮಾನಸಮರಾಳ
**ಗುಣವರ್ಮನಿರ್ಮಿತಮಪ್ಪ**
**ಪುಷ್ಪದಂತ ಪುರಾಣದೊಳ್**
**ದೇವಾಗಮವರ್ಣನಂ**
**ದಶಮಾಶ್ವಾಸಂ.**

ಶ್ರೀ

# ಪುಷ್ಪದಂತ ಪುರಾಣಂ

## ಏಕಾದಶಾಶ್ವಾಸಂ.

ಕಂ॥ ಶ್ರೀ ಸಕಳಮಂಗಳಾನಕ ।
ಮಾಸಮಯದೊಳೆಸೆಯ ಲೆಸಗಿದಂ ಮುಕ್ತಿರಮಾ ॥
ವಾಸಂಗರ್ಘ್ಯಾದಿಯ ನು ।
ರ್ವೀಸೇವ್ಯಂ ಪ್ರಭುಗುಣಾಬ್ಜಿನೀಕಳಹಂಸಂ ॥ ೧ ॥

ವ॥ ಅನಂತರಮಾಪ್ರಥಮದ್ವಿತೀಯಕಲ್ಪಾಮರೇಂದ್ರರಿರ್ವರುಂ ಸರ್ವಜ್ಞನುಭಯಪಾರ್ಶ್ವದೊಳುತ್ತರದಕ್ಷಿಣಾಭಿಮುಖರಾಗಿ ಸಜ್ಜೀಕೃತಮಜ್ಜನೋಪಕರಣರಿರ್ದು ಮಜ್ಜನಕುಜ್ಜುಗಂಗೆಯ್ದು.

ಉ॥ ಮಂಗಳತೂರ್ಯಕೋಟಿ ಮೊೞಗುತ್ತಿರೆ ಮಂಗಳಗೇಯಮುಣ್ಮೆ ದೇ ।
ವಾಂಗನೆಯರ್ ಪಲರ್ ಪರಸೆ ಮಂಗಳವಾಕ್ಯಮ ನೋದೆ ಪಾಠಕರ್ ॥
ಮಂಗಳಮಂ ಸಮಂತು ಕಳಶೋದ್ಧರಣೋಚಿತಮಂತ್ರಪೂರ್ವಕಂ ।
ಪೊಂಗಳಸಂಗಳಂ ನೆಗಪಿ ಸಪ್ರಣವೋಚ್ಚರಣಾನನಾಂಬುಜರ್ ॥ ೨ ॥

ಕಂ॥ ಬೇರ್ವರಿವ ಪುಣ್ಯವಿಟಪಿಗೆ ।
ನೀರ್ವೊಯ್ವಂತನಘಜಿನನ ಮಸ್ತಕದೊಳ್ ಪೊ ॥
ಯ್ದರ್ ವಿಪುಳಹರ್ಷದಿಂ ನಲಿ ।
ದಾರ್ವಮರರ ಬೊಬ್ಬೆ ಮಿಗೆ ಪಯೋಧಾರೆಗಳಂ ॥ ೩ ॥

ಜಯಜಯ ಜಿತದುರಿತ ಜಗ ।
ತ್ರಯವಲ್ಲಭ ದೇವದೇವ ಪರಮೇಷ್ಠಿ ದಯಾ ॥
ಶ್ರಯ ಶರಣ ಮೆಂಬ ಸುರಕೋ ।
ಟಿಯ ಕಳಕಳ ಮೆಸೆದುದೆಸೆಯೆ ನೊಸಲೊಳ್ ಕೆಯ್ಗಳ್ ॥ ೪ ॥

ಮ॥ ಇದು ಮುಕ್ತಿಪ್ರಮದಾಸ್ವಯಂವರದ ಮಲ್ಲೀಮಾಲೆ ಮೇಣಿಂತಿದಾ ।
ಸುದತೀಕೇಕರಕಾಂತಿಜಾಳ ಮಿದು ಮೇಣ್ ತತ್ಕಾಂತೆ ಲಂಚಂಗುಡಲ್ ॥
ಪದೆಪಿಂದಟ್ಟಿದ ಹಾರಯಷ್ಟಿ ಸುಭಗಂಗೀಸ್ವಾಮಿಗೆಂಬಂತಿರೊ ।
ಪ್ಪಿದು ದಿಂದ್ರಚ್ಯುತದುಗ್ಧಧಾರೆ ಸವನಪ್ರಾರಂಭಸಂರಂಭದೊಳ್ ॥ ೫ ॥

ವ॥ ಅನಂತರಂ ಶಂಖಕಾಹಳಾಮೃದಂಗಝುಲ್ಲರೀದುಂದುಭಿಗಭೀರತೂರ್ಯಸ್ವನಂಗಳು, ಮುಖರ್ವಗೀರ್ವಾಣಗಂಧರ್ವಗಾಯಿನೀಶ್ರುತಿಸುಖಾಧೇಯಗೇಯನಾದಂಗಳು, ಮನೇಕಲೋಕಪಾಳಕನಿಕಾಯಜಯಜಯಾನಂದಸಂದರ್ಭಿತಾಶೀರವಂಗಳು, ಮಶೇಷಾನಿಮಿಷಮುಖಮುಖರೀಜನಿತಜಿನಗುಣಸ್ತವಾಲಾಪಕಳಾಪಕೋಳಾಹಳಂಗಳುಂ ಬಧಿರಿತಬ್ರಹ್ಮಾಂಡದಿಙ್ಮಂಡಳಂಗಳಾಗೆ.

ಮ॥ ವರಪದ್ಮಾದಿಪವಿತ್ರತೀರ್ಥಸರಸೀಪುಣ್ಯೋದಕಸ್ನಾನಮುಂ ।
ನಿರವದ್ಯಾಮಳನಾಳಿಕೇರಫಲತೋಯಸ್ನಾನಮುಂ ನಿರ್ಮಳೇ ॥
ಕ್ಷುರಸಸ್ನಾನಮು ಮತ್ಯುದಾರಸಹಕಾರೋದ್ಯತ್ಫಳವ್ರಾತಜಾ ।
ತರಸಸ್ನಾನಮು [1]ಮಾಯ್ತು ಪೊತ್ತಸುರಸೇನಾಚಕ್ರನಿಂ ಶಕ್ರನಿಂ ॥ ೬ ॥

ವ॥ ಅನಂತರಂ.

ಕಂ॥ ಪಂಚಮಜಲನಿಧಿ ಯಲ್ಲದೆ ।
ಪಂಚಮಗತಿಪತಿಯ ಸವನಕೆಯ್ದಿಸವು ಪಯಃ ॥
ಸಂಚಯಮ ನುೞಿದ ತೊಱೆ ಕೆಱೆ ।
ಬೆಂಚೆ ಕೊಳಂ ಕೂಪ ಮೊಂದು ಹರಿ ಬೆಸಸುವುದುಂ ॥ ೭ ॥

ಎಱವೆಸ ನಾದೊಡ ಮಕ್ಕೆಮ ।
ಗೆಱವೆಸ ನೆನೆ ಜಿನನ ಸವನ ಮಿಂದ್ರನ ಬೆಸನಿ ॥
ತ್ತೆಱದಿಂ ನಿಷ್ಫಲ ಮಲ್ತೆಮ ।
ಗುಱುವುದಿದೆಂದುಲಿದು ನಲಿದು ದೇವಸಮೂಹಂ ॥ ೮ ॥

ಅಮೃತಾರ್ಣವಮನೆ ಮೇರುವಿ ।
ನ ಮೇಖಳಾವನಕೆ ತಿರ್ದಿ ಪರಿಯಿಸಲಿಂದ್ರಂ ॥
ಸಮೆವೇಱೆವೊಲೆತೆರದೋಳಿಯೆ ।
ನಿಮಿರ್ದೆಸೆದುದು[2]ಹಾರಿಗೊಂಪು ಕೇಗರ್ಗಟ್ಟಿದವೋಲ್ ॥ ೯ ॥

ಮ॥ ಚಳಬಾಹಾಲಹರೀಸಹಸ್ರಲಲಿತಂ ದೃಜ್ಮೇನಸಂತಾನಸಂ ।
ವಳಿತಂ ಕುಂಭಕುಳಾದ್ರಿಕೋಟಿಕಳಿತಂ ಭೂಷಾಮಣಿಶ್ರೇಣಿರು ॥
ಜ್ಮಿಳಿತಂ ಸ್ಫಾರಗಭೀರಘೋಷಲುಳಿತಂ ದೇವಾಳಿ ಕಣ್ಗೊಪ್ಪಿತಾ ।
ಗಳಿದೊಂದಿಂಗಡಲಿಂಗಡಲ್ಗೆ ಬಳೆನಂದತ್ತೊಯ್ಯನೆಂಬನ್ನೆಗಂ ॥ ೧೦ ॥

ವ॥ ಆಪ್ರಸ್ತಾವದೊಳ್.

ಮ॥ಸ್ರ॥ ಅತುಳಸ್ವಚ್ಛಾಂಬುವಿಂ ವಾಃಕಣಗಣಸಿತಶೇಷಾಕ್ಷತ ಶ್ರೇಣಿಯಿಂ ಘೀ ।
ನತತಿಶ್ರೀಖಂಡಪಿಂಡದ್ರವದಿ ನಖಿಳರತ್ನಾಂಶುಪುಷ್ಪಂಗಳಿಂ ನಿ ॥
ರ್ವೃತಿನಾಥಂ ಗರ್ಘ್ಯಮಂ ತತ್ಸವನವಿಧಿಯೊಳೀವಂತುಟಾಯ್ತುತ್ತರಂಗಾ ।
ಯತಹಸ್ತಂ ಸ್ತೋತ್ರಮಂತ್ರಸ್ವನ ಮೆನಿಸೆ ಘನಧ್ವಾನ ಮಂಭೋನಿಧಾನಂ ॥ ೧೧ ॥

[1] ಯಾಯ್ತು ಪೊತ್ತ. [2] ಹಾದಿಗೊಂಡು.

ಮ॥ ಭಗವನ್ಮಜ್ಜನಯೋಗ್ಯಮಾದ ಕಡಲೆನ್ನಂತಾವುದೆಂದುರ್ವಿ ಭೂ ।
ರಿಗಭೀರಸ್ವನದಿಂದೆ ಪೆರ್ಚಿ ನುಡಿವಂತಾಶುಕ್ತಿಮುಕ್ತಾಂಶುವಿಂ ॥
ನಗುವಂತುನ್ಮುಖಪದ್ಮರಾಗರುಚಿಯಿಂ ರಾಗಾರ್ಥಮಾದಂತೆ ವೀ ।
ಚಿಗಳಿಂ ಕೆಯ್ನೀಡಾಡುವಂತೆಸೆದುದೀಸುಸ್ನಿಗ್ಧದುಗ್ಧಾರ್ಣವಂ ॥ ೧೦ ॥

ವ॥ ಮತ್ತಂ.

ಚಂ॥ ಕವಿದು ನಿಳಿಂಪಕೋಟಿ ಮೊಗೆಯುತ್ತಿರೆ ಶಂಖದ ಬಳ್ಳಿ ತಳ್ತುದೋ ।
ಪವಳದ ಬಳ್ಳಿ ಪರ್ವಿದುದೊ ಪಾವಸೆ ಬಳ್ಳಿ ಮಗಿಲ್ತುದೋ ಸಮು ॥
ದ್ರವ ನೆನೆ ಚಂದ್ರಕಾಂತಕಲಶಾಂಶುಗಳುಂ ಕಿಸುಗಲ್ಲ ಕರ್ಕರ ।
ಚ್ಛವಿಗಳು ಮಶ್ಮಗರ್ಭಘಟರಶ್ಮಿಗಳುಂ ಪುದಿದಿರ್ದ ವಬ್ಧಿಯುಂ ॥ ೧೩ ॥

ಕಂ॥ ತುಂಗಘಟಕೋಟಿ ಮೊಗೆಯೆ ತ ।
ರಂಗಪರಂಪರೆ ಪೊದಟಿಪ್ಪ ನಿಮಿರ್ದುದು ಯುಕ್ತಂ ॥
ಭಂಗಂ ನಿಮಿರ್ವುದು ಕಡಲೊಳ್ ।
ಸಂಗತ ಮೆನೆ ಕುಂಭಸಂಭವವ್ಯತಿಕರದಿಂ ॥ ೧೪ ॥

ಮ।ಸ್ರ॥ ಕಡಲೊಳ್ ನೀರ್ದರ್ಪ್ಪುದಭ್ಯಾಸಿಗಳಿವು ನೆರವಕ್ಕೆಂದು ಶಕ್ರಂ ಬೆಸಂಬೇ ।
ಱಿಪ್ಪೊಡೆ ನಾನಾವರ್ಣದಭ್ರಾವಳಿ ನೆರೆದು ನಿಜಾಧೀಶನಾದೇಶದಿಂ ತಂ ॥
ಮ್ಮೊಡನರ್ಧ್ಯಕ್ಷಂ ಬರಲ್ಕೀನಡೆದಪುವೆನೆ ಚೆಲ್ವಾದು ವಾಕಾಶದೊಳ್ ನೇ ।
ರ್ಪಡೆ ದೇವರ್ ತರ್ಪ ನಾನಾಮಣಿಕನಕಘಟಂಗಳ್ ಪಯಃಪೂರಿತಂಗಳ್ ॥ ೧೫ ॥

ಮ॥ ಪಗೆಗೊಂಡಾಡದೆ ದೇವನಿರ್ದ ಸಭೆಯೊಳ್ ಕಾರುಣ್ಯಮಂ ವಜ್ರಿ ಮಾ ।
ಡುಗು ಮಾಂ ಸಂಧಿಪೊಡಿಂದಿನೀಮದನೆ ಲೇಸೆಂದಬ್ಧಿ ತನ್ನಾಶ್ರಿತಾ ॥
ದ್ರಿಗಳಂ ಕಾಣಿಸಲಿಂದ್ರನಲ್ಲಿಗೆ ತರುತ್ತಿರ್ದಪ್ಪುದಂಬಂತೆ ಮೇ ।
ರುಗಿರೀಂದ್ರಾಗ್ರಗತದೇವಕೋಟಿಘಟಕೋಟೀಯೂಥ ಮೇನೊಪ್ಪಿಱೋ ॥ ೧೬ ॥

ಚಂ॥ ಸದಮಳಚಂದ್ರಕಾಂತಮಣಿಕುಂಭದ ರುಂದ್ರಮಹೇಂದ್ರನೀಲಕುಂ ।
ಭದ ನುತಶಾತಕುಂಭಮಯಕುಂಭದ ಮೊತ್ತದ ಮಾಲೆ ಲೀಲೆವೆ ॥
ತ್ತುದು ಬಹುರಾಜರಾಹುರವಿಮಂಡಳ ಮಂಡಳಿ ನಣ್ಪುಗೊಂಡು ತಂ ।
ಡವೆ ನಡೆಗೊಂಡು ದೀಗಳೆನೆ ನಿಂದಮರಾವಳಿ ನೀಡೆ ಹಾರಿಯೊಳ್ ॥ ೧೭ ॥

ವ॥ ಅದಲ್ಲದೆಯುಂ.

ಮ॥ ಕೆಲರೋರೊರ್ವರೆ ಪೋಪ ಪೋಗಿ ಕಡಲಂ ಕೆಯ್ಕೊಳ್ವ ಕೆಯ್ಕೊಂಡು ತ ।
ಜ್ಜಲಮಂ ತೀವುವ ತೀವಿ ಪೊಂಗೊಡನ ನಣ್ಮಿಂದೆತ್ತಿ ಕೊಳ್ವೆತ್ತಿ ಕೊಂ ॥
ಡೊಲವಿಂ ಮೇರುಗೆ ಬರ್ಪ ಬಂದು ಮುಖಮಂಗೀವಿತ್ತು ಮತ್ತಾಗಳಂ ।
ತೊಲೆಹಲ್ಲಿಂ ಮಗುಟಿಪ್ಪೊಂದು ಹಂದುಗವಿ ನಾಟಂಪರ್ ಮನೋವೇಗದಿಂ ॥ ೧೮ ॥

ಚಂ|| ಉದಧಿಯ ನೆಯ್ದುವಲ್ಲಿ ಪೊಗೆವಲ್ಲಿ ಘುಟಂಗಳ ನೆತ್ತುವಲ್ಲಿ ನಿ ।
ಲ್ಲದೆ ಮಗುಳ್ವಲ್ಲಿ ಪೊತ್ತು ಪರಿವಲ್ಲಿ ಸುರಾದ್ರಿಯ ನೇಱುವಲ್ಲಿ ತಂ ॥
ದಿದಿರೊಳಿಟಿಪ್ಪುವಲ್ಲಿ ಕುಡುವಲ್ಲಿ ಕೆಲರ್ ಮನದಿಂದೆ ಮುಂಚುವರ್ ।
[1]ತ್ರಿದಶರಿ ನಿಂದ್ರಜಾಲ ಮನೆ ತನ್ಮಯಮಾಗಿರೆ ರೂಪುದೋಱುತುಂ ॥ ೧೯ ॥

ಕಂ|| ಎಸೆವಭವಸವನವಿಭವಮು ।
ನುಸಿರ್ದ್ದೇವಣ್ಣಿಪುದೊ ನೆರೆಯೆ ಬಳೆದಪುದೆನಿಸಿ ॥
ತ್ತೊ ಸೆದಡಕು ಮಮರರರಿಂ ಕ್ಷೀ ।
ರಸಮುದ್ರಂ ದಧಿಸಮುದ್ರ ಮಾಜ್ಯಸಮುದ್ರಂ ॥ ೨೦ ॥

ಅಂತಮರಸೇನೆ ತಂದು ನಿ ।
ರಂತರ ಮನೆ ನೀಡೆ ಕನಕಘುಟಕೋಟಿಯ ನೊ ॥
ಲ್ದಾಂತ ನನಿತರ್ಕ್ಕ ಮನಿತೆ ಭು ।
ಜಾಂತರಮ ನಗುರ್ವಿನಿಂ ವಿಗುರ್ವಿಸೆ ಶಕ್ರಂ ॥ ೨೧ ॥

ಚಂ|| ತೊಳಗುವ ಜಂಘೆ ಜಂಘೆಗೆ ಮುಖಂ ಮುಖಶೋಭೆಗೆ ತಾರಹಾರ ಮು ।
ಜ್ಜ್ವಳಮಣಿತೋರಣಕ್ಕೆ ಶಿಖೆ ತಾಂ ಶಿಖರಕ್ಕೆ ಚಳತಾಂಚಳಂ ಧ್ವಜಾಂ ॥
ಚಳಕೆಣೆಯಾಗೆ ಸತ್ಕಳಶವೃಂದಮ ನಾತ್ಮಭುಜಾಸಹಸ್ರದೊಳ್ ।
ತಳೆದು ಸಹಸ್ರಕೂಟಜಿನಮಂದಿರದಂತೆಸೆದಂ ಪುರಂದರಂ ॥ ೨೨ ॥

ವ|| ಅಂತೆಸೆದು.

ಕಂ|| ನಿರ್ಝರಜಲವೃಷ್ಟಿಯ ನಾ ।
ವಿರ್ಭೂಷಣವಿದ್ಯುದುಜ್ಜ್ವಳಂ ಪರ್ಜನ್ಯಂ ॥
ಭೋರ್ಭೋರೆನೆ ಸುರಿಯಲ್ಕೆ ಜಿ ।
ನಾರ್ಭಕ ನೊದವಿದ ನಗಣ್ಯಪುಣ್ಯಕ್ಷೇತ್ರಂ ॥ ೨೩ ॥

ವ|| ಆಗಳಖಿಳಮಜ್ಜನೋಪಕರಣಸರಣಿಯುರಪ್ಪ ಸುರಪುರಂಧ್ರಿಕಾಜನಪುರಸ್ಸರೆಯಾಗಿದ್ದು.

ಉ|| ಕೆಂದಳಿರೆನ್ನ ಕೆಂದಳಕೆ ಪೊಂಗೊಡ ನೆನ್ನ ಘನಸ್ತನಕ್ಕೆ ಜಿ ।
ಲ್ವಿಂದೆಣೆಯಾಗಲಾರ್ತಪುವೆ ನೋಡೆನುತಂ ಪಡಿಗಟ್ಟಿ ತೋರ್ಪವೋಲ್ ॥
ಕೆಂದಳದಿಂದ ಮೆತ್ತಿ ಕುಚಕುಂಭದೊಳಾಂತು ವಿಳಾಸದಿಂ ಶಚೀ ।
ಸೌಂದರಿ ಪಲ್ಲವಾಂಚಿತಘುಟಂಗಳ ನಿಂದ್ರನ ಕೆಯ್ಗೆ ನೀಡಿದಳ್ ॥ ೨೪ ॥

ಕಂ|| ಪೊಂಗಳಸಂಗಳ ರುಚಿಯಿಂ ।
ಪಿಂಗಳರುಚಿವಡೆಯೆ ಪಾಲಧಾರೆ ಜಿನೇಂದ್ರಂ ॥
ಗೇಂ ಗಳ ಘೃತಾಭಿಷೇಕದ ।
ಮಂಗಳ ಮಿದು ಮೊದಲೊಳೆನಿಸಲಾರ್ತುದೊ ಸುರರಿಂ ॥ ೨೫ ॥

[1] ತ್ರಿದಶ ಮಹೇಂದ್ರಜಾಲ.

ಚಂ॥ ಪಳಿಕಿನ ಕುಂಭದಿಂ ಕುಳಿಶಿ ಪೊಯ್ವ ಪಯೋರಸಧಾರೆ ಚಂದ್ರಮಂ ।
ಡಳದಿ ಸುದೀರ್ಣಮಾಗಿ ನಿಮಿರ್ವುಜ್ಜ್ವಳಚಂದ್ರಿಕೆ ಯೆಂಬಿನಂ ಸುರ ॥
ರ್ಕಳ ನಯನೋತ್ಪಳಂಗಳಲರ್ವಂತು ಸುಖಾಂಬುಧಿ ಕೊರ್ವುವಂತು ಕೋ ।
ಮಳಕರಕಂಜಕೋಟಿ ಮುಗಿವಂತೆಸೆದತ್ತು ಜಿನಾಭಿಷೇಕದೊಳ್ ॥ ೧೬ ॥

ಕಂ॥ ಅರುಣಮಣಿಕಳಶದಿಂ ಹರಿ ।
ಸುರಿವ ಸುಧಾಧಾರೆ ತನ್ಮಯೂಖಾಹತಿಯಿಂ ॥
ತರುಣಾರ್ಕಬಿಂಬದಿಂ ಬಿ ।
ತ್ತರಿಪೆಳಬಿಸಿಲೆನಿಸಿ ಕಳೆದು ದಘುತಾಮಸಮಂ ॥ ೧೭ ॥

ತುಂಗಹರಿನೀಳಕಳಶಮು ।
ಖಂಗಳ ಜಳಧಾರೆ ಧಾರ್ತರಾಷ್ಟ್ರಮರಾಳಂ ॥
ನುಂಗಿ ಮಗುೞ್ದುಗುಳ್ವ ಬಿಸದಂ ।
ಡಂಗಳ ನಭಿನಯಿಸಿ ತಭವನಭಿಷವವಿಧಿಯೊಳ್ ॥ ೧೮ ॥

ವ॥ ಆಗಳ್.

ಚಂ॥ ತ್ರಿದಶಗಣಾಧಿಪರ್ ಸುರಿಯುತಿರ್ಪತಿನಿರ್ಮಳದುಗ್ಧವಾರಿಪೂ ।
ರದೊಳಚಳಾತ್ಮನುಂ ಸಹಜಭದ್ರನು ಮಪ್ಪ ವಿಶುದ್ಧಮೂರ್ತಿ ತಾಂ ॥
ಪುದಿದ ತುಷಾರಪುಂಜದೊಳಗಿರ್ಪ ಹಿಮಾದ್ರಿವೊ ಲಿಂದ್ರಸಿಂಧುಪೂ ।
ರದೊಳವಗಾಹ ಮಿರ್ಪ್ಪ ಸುರದಂತಿವೊ ಲೊಪ್ಪಿದ ನಿಂದ್ರವಂದಿತಂ ॥ ೧೯ ॥

ವ॥ ಅಂತು ಮಲ್ಲದೆಯುಂ.

ಕಂ॥ ಇಂದ್ರಕರಕಳಿತಕಳಶದೆ ।
ರುಂದ್ರತರಕ್ಷೀರಪೂರ ಮಾವರಿಸೆ ಶರ ॥
ಚ್ಚಂದ್ರಿಕೆಯ ಬಳಸಿನೊಳಗಣ ।
ಚಂದ್ರಮನಂತಿರ್ದ ನನುಪಮಂ ಜಿನಚಂದ್ರಂ ॥ ೨೦ ॥

ವ॥ ಆಸಮಯದೊಳ್.

ಚಂ॥ ಅಱಿಯ ನನಂತಕುಂಭಶತಮಂ ಪಸುಗೂಸಿನ ಮೇಲೆ ಪೊಯ್ದಪಂ ।
ನೆಱೆ ಮರುಳಿಂದ್ರ ನೆಂದೊಣರ್ವ ಮುಗ್ಧನಿಳಿಂಪರ ಶಂಕೆ ಚಿತ್ತದಿಂ ॥
ಪಱಿಪಡುವಂತು [1]ಬಾಲ ನಿನಿಸಂ ತಱಸಂದೊಡೆ ವಕ್ತ್ರವಾಯುವಿಂ ।
ತಱಗೆಲೆಯಂತೆ ಪಾಱಿದುವು ರುಂದ್ರಸುರೇಂದ್ರವಿಮಾನಕೋಟಿಗಳ್ ॥ ೨೧ ॥

ವ॥ ಅನ್ನೆಗಂ.

---

[1] ಬಾಲನಿನಿಸೀಂತೆಡೆಸಂದೊಡೆ. (ಎಂದು ಇರಬಹುದು).

ಕಂ॥ ಆಕಾಶಕ್ಕುಚ್ಚಳಿಪಭಿ ।
ಷೇಕದ ಜಲಬಿಂದುಮಾಲೆ ಮುಕ್ತಾ ॥
ನೀಕದ ತೆಱದಿಂ ಜ್ಯೋತಿ ।
ರ್ಲೋಕವಿಮಾನಕ್ಕೆ ಪಡೆದು ದಿರ್ಮ್ಮಡಿಚೆಲ್ವಂ ॥ ೨೧ ॥

ಮ॥ ಅಮರಶ್ರೇಣಿಗೆ ಮುತ್ತಿನಾಭರಣಮಂ ದಿಗ್ದಂತಿಯೂಥಕ್ಕೆ ಚಿ ।
ಬ್ಬಮ ನುದ್ಯಾನವನಕ್ಕೆ ಪೂದುಱುಗಲಂ ವ್ಯೋಮಕ್ಕೆ ತಾರಾಸಮೂ ॥
ಹಮ ನಭ್ರಾವಳಿಗಾಲಿಗಲ್ಲ ಸಿರಿಯಂ ಮೆಯ್ವೆರ್ಚಿಸಲ್ ಸಾಲ್ದು ತ ।
ಳ್ತಮುದೊರ್ಪ್ಪಿದುರ್ದುದೀರ್ಣಕೀರ್ಣಪವನಾಂಭಃಶೀಕರಂ ಶ್ರೀಕರಂ ॥ ೨೨ ॥

ವ॥ ಅಂತುಮಲ್ಲದೆಯುಂ.

ಕಂ॥ ಸ್ವೇದಾಂಬುಬಿಂದು ಪುಟ್ಟಿದು ।
ವೀದಿವಿಜರ್ಗ್ಗದು ವಿಚಿತ್ರ ಮೆನೆ ಕಿಱುಮುತ್ತಂ ॥
ಕೋದಂತೆ ಸಿಡಿಲ್ದಡರ್ದಿಂ ।
ಬಾದುವು ಜಿನಸವನಜನಿತಜಲಲವ ಮವರೊಳ್ ॥ ೨೪ ॥

ವ॥ ಅನ್ನೆಗಂ.

ಚಂ॥ ಕಡೆದು ಕಲಂಕಿ ಮುನ್ನಖಿಳವಸ್ತುಗಳಂ ಪೊಱಗಿಕ್ಕಿ ಸಂಪದಂ ।
ಗಿಡಿಸಿದ ಮೇರು ದೈವದಿ ನಿದಿಂದೊಳಗಾಯ್ತ್ತನಗೆಂದು ಬಂದು ಪಾ ॥
ಲ್ಗಡೆಲಮರಾದ್ರಿಯಂ ಮುಳಿದು ಮುತ್ತಿದು ದೆಂಬಿನ ಮೊಪ್ಪಿತೆತ್ತ ನೋ ।
ೞ್ಪೊಡೆ ಮಭವಾಭಿಷೇಕವಿಧಿಯೊಳ್ ಪೊಱಸೂಸುವ ಪಾಲ ಕಾೞ್ಪ್ಪರಂ ॥ ೨೫ ॥

ಕಂ॥ ಗಲ್ಗಲನೆ ಪರಿವ ಪಾಲ ಪೊ ।
ನಲ್ಗಳೊಳೊಳಗಾಗಿ ನಗದ ನಾಲ್ದೆಸೆಗಳ ತ ॥
ೞ್ಪಿಲ್ಗಳೊಳೆಸೆದುವು ತೇಂಕುವ ।
ರಲ್ಗಳ ಸಂಕರ ಮಿದೆನಿಸಿ ತಾರಾವಳಿಗಳ್ ॥ ೨೬ ॥

ಜಿನಮಜ್ಜನಾಂಬುವಿಂದಂ ।
ಕನಕಾಚಳತಳದೊಳಿರ್ದ ಬಿಸುಪೞಿದು ಬೆಳ ॥
ರ್ಪಿನಬಿಂಬ ಮಾಗಳಾಗಳೆ ।
ವನಧಿಯೊಳೊಗೆವಿಂದುಬಿಂಬ ಮೆನಿಸಿದು ದೆನಸುಂ ॥ ೨೭ ॥

ಪೊನಲೊಳ್ ಮುೞುಗಿಸಿ ಹಿಮಕರ ।
ದಿನಕರರಂ ಮಸುಳಿಸಿತ್ತು ಜಿನಸವನಪಯೋಂ ॥
ಬುನಿಕಾಯಂ ದೋಷಾಕರ ।
ನೆನಿಪನ ಭೂತಾಪಕಾರಿ ಯೆನಿಪನ ಸಿರಿ ಯೇಂ ॥ ೨೮ ॥

ವ॥ ಅಹಲ್ಲದೆಯುಂ.

ಕಂ|| ಜಿನಸವನಸಲಿಲದಿಂ ಬೆ।
ಳ್ಪನಾಳ್ದ ವರ್ಜುನಕುಜಂಗಳೆನಿಸವೆ ಚಿತ್ರಂ ||
ನನೆವಡೆದು ಪಾಂಡುಕದ ಸೌ।
ಮನಸದ ನಂದನದ ಭದ್ರಶಾಲದ ತರುಗಳ್ || ೩೯ ||

ಮುಗ್ಧಜನದಱಿತ ಮೆನಿಸಿ ವಿ।
ದಗ್ಧರು ಮಿದು ಕನಕಗಿರಿಯೊ ರಜತಾದ್ರಿಯೊ ಸಂ ||
ದಿಗ್ಧ ಮೆನಿಸಿದುದು ಸುರಗಿರಿ।
ದುಗ್ಧಪ್ರಸರೋಪದಿಗ್ಧ ಮಥಿಕಸ್ನಿಗ್ಧಂ || ೪೦ ||

ವ|| ಅದಲ್ಲದೆಯುಂ.

ಕಂ|| ಆಹೇಮಗಿರಿಯ [1] ಸಿಕಟಸ।
ಮೂಹದೊಳಿರ ದೋಡಿದುವು ಪೊನಲ್ಗಳ್ ದಿಕ್ಸಂ ||
ದೋಹಕ್ಕೆ ನಿತಾದೊಡೆ ಮೇಂ।
ವಾಹಂಗಳ್ ಕುಂಜರಾಜಿಯೊಳ್ ನಿಂದವುವೇ || ೪೧ ||

ವ|| ಮತ್ತಂ.

ಕಂ|| ನೊರೆವಾಲ ಮೊಸರ ತುಪ್ಪದ।
ಪರಿವೊನಲಾಗಿರಿಯ ಪಿರಿಯ ಸಾನುಗಳೊಳ್ ನಿ ||
ರ್ಝರ ಮೆಂಬ ನೆವದಿ ನಿನ್ನುಂ।
ಪರಿದವು ವೇಂ ಪಿರಿದೊ ಜಿನನ ಜನ್ಮಸ್ನಾನಂ || ೪೨ ||

ವ|| ಆಗಳ್.

ಮ|| ಅಕಳಂಕಾಕೃತಿವರ್ತನಂಗೆ ಘನಕಲ್ಯೋದ್ವರ್ತನಂ ವೀತಸ।
ರ್ವಕಷಾಯಂಗೆ ಕಷಾಯತೋಯಸವನಂ ದೇಹೋಲ್ಲಸದ್ದಿವ್ಯಗಂ ||
ಧಕದಂಬಂಗೆ ಸುಗಂಧಬಂಧುರಜಳಸ್ನಾನಂ ಸ್ಫುರದ್ವರ್ಣಪೂ।
ರ್ಣ ಕನನ್ಮೂರ್ತಿಗೆ ವರ್ಣಪೂರವಿಳಸನ್ನೀರಾಜನಂ [2]ಮಾಱ್ಕುಮೇ || ೪೩ ||

ವ|| ಆದೊಡಂ ಮಂಗಳೋಪಚಾರ ಮಿಲ್ಲಿಗವಸರೋಚಿತಂ ಬೇೞ್ಕು ಮೆಂದು ವಿವಿಧನವವರ್ಣ ಚೂರ್ಣ [3]ಪಿಷ್ಟೋಪಪುಷ್ಪಿಯುಮು, ನಕ್ಷರೀಕ್ಷೀರವೃಕ್ಷವಲ್ಕಸಂಸ್ಕಾರವಾರಿಸವನಮುಮು ನವನವ್ನ ಭುವನಂಗೆ ಮಾಡಿದಿಂಬಱಿಯುಂ.

---

[1] ವಿಟಪಸಮೂಹ (ಎಂದಿರಬಹುದು). [2] ಬೇೞ್ಕುಮೇ (ಎಂದಿರಬಹುದು). [3] ದಿಷ್ಟೋ.

ಕಂ|| ನಂದನವನಸಂಭವಹರಿ ।
ಚಂದನಸಂತಾನಪಾರಿಜಾತಕವಿಲಸ ॥
ನ್ಮಂದಾರನಮೇರುದ್ರುಮ ।
ಸಂದೋಹದ ಕುಸುಮಕೋಟಿಯಂ ವಾಸಿತಮಂ ॥ ೪೪ ॥

ಮಲಯಜಕುಂಕುಮಜಾತೀ ।
ಫಳಜಾತೀಪತ್ರ[ಕಂ]ತುರುಷ್ಕತುಷಾರೋ ॥
ಪಳಕಾಳಾಗುರುತಕ್ಕೋ ।
ಳೆಲವಂಗಪ್ರಮುಖಸುರಭಿಪರಿಕರಯುತಮಂ ॥ ೪೫ ॥

ಮ|| ಜಳಮುಂ ಶೀತಳಮುಂ ನಿರಸ್ತಮಳಮುಂ ತೀವಿರ್ದ ಕುಂಭಂಗಳಾ ।
ಗಳೆ ಗಂಧಾಂಧಮದಾಳಿಗಳ್ ಮುಸುಱಿ ನೀಲೀವಸ್ತ್ರಸಂಛಾದಿತಂ ॥
ಗಳವೋಲ್ತೋರ್ಪಿನ ಮೆತ್ತಿ ಬಿತ್ತರಿಸಿದರ್ ಗಂಧೋದಕಸ್ನಾನಮಂ ।
ಗಳಮಂ ತೀರ್ಥಕರಂಗೆ ಮಂಗಳರವಂ ಕೆಯ್ಗಣ್ಮೆ ಕಲ್ಪೇಶ್ವರರ್ ॥ ೪೬ ॥

ವ|| ಆಗಳ್.

ಮ|| ನವಗಂಧೋದಕಪೂರದೊಳ್ ಪುದಿದು ಪೂವುಂ ತುಂಬಿವಿಂಡುಂ ತೆರ ।
ಳ್ದವು ಪೇಟ್ ಪುಷ್ಪಶಿಳೀಮುಖಂ ಮಧುಯುತಂ ಭಂಗಕ್ಕೆ ಪಕ್ಕಕ್ಕುವ ॥
ಲ್ಲವಱಿಳ್ [1]ಕೂಡವು ಕಾಂತಿಗುಂದವು ಪರಾಗೋದ್ಭಾಸಿಯರ್ ಪಾಡಿ ತೇಂ ।
ಕುವ ಜಾಡ್ಯಕ್ಕೆಡೆಯಾಗದೊಡ್ಡುಗುಮೆ ಮೋಹಧ್ವಂಸನಾಸ್ಥಾನದೊಳ್ ॥ ೪೭ ॥

ಕಂ|| ಬಂಧುರಸವನೋತ್ಸವಸುರ ।
ಸಿಂಧುವಿನೊಳ್ ಪುಟ್ಟಿ ಜಗಮನಾಱಿಪ ಪೂರ್ಣೋ ॥
ದ್ಗಂಧಿಯ ನೇರ್ವೊಗಱ್ವುದೊ ಜಿನ ।
ಗಂಧೋದಕಮಂ ಭವಾಗ್ನಿವಿಚ್ಛೇದಕಮಂ ॥ ೪೮ ॥

ಉ|| ಆದುದು ಕರ್ಮಘರ್ಮದ ಪೊಡರ್ಪ ನಡಂಗಿಸ ಲತ್ಯಗಣ್ಯಪು ।
ಣ್ಯೋದಯಸಸ್ಯಮಂ ಬೆಳೆಯಿಸಲ್ ಕುಚರಿತ್ರಕಳಂಕಪಂಕಮಂ ॥
ಛೇದಿಸ ಲಿಂತಿದೆಂದು ದಿವಿಜರ್ ನೆರೆದೀಱ್ಕೊಳಿಗೊಂಡು ಕೊಂಡ ಗಂ ।
ಧೋದಕ [2]ದಿಂದೆ ತಮ್ಮ ತನುವಂ ಶುಚಿ ಮಾಡಿದ ರಿಂಡೆಯಾಡಿದರ್ ॥ ೪೯ ॥

ಕಂ|| ಅಗವೆಲ್ಲಂ ನಗವೆಲ್ಲಂ ।
ಮೃಗವೆಲ್ಲಂ ನದಿಗಳೆಲ್ಲ ಮುದಧಿಗಳೆಲ್ಲಂ ॥
ಖಗಮೆಲ್ಲಂ ದೆಸೆಯೆಲ್ಲಂ ।
ಭಗವಜ್ಜಿನಸವನಜಲದಿ ನಾಯ್ತು ಪವಿತ್ರಂ ॥ ೫೦ ॥

ವ|| ಅಂತು.

[1] ಕೂಡುವ. [2] ವಿಂತಮುತ್ತುತನು.

ಉ॥ ಕೊಡೆ ಪವಿತ್ರ ಮಾಯ್ತು ಜಲ ಮೊಂದೆಡೆಮಾಡುವ ವಜ್ರಪಾಣಿ ಕೆ ।
ಯ್ಯೊಡಿದ ವಸ್ತು ನೀಡಿದಮರಾವಳಿ ನೋಡಿದ ಲೋಕಪಾಲರೋ ॥
ಲಾಡಿದ ಮೇರು ಪಾಡಿದಮರೀಜನ ಮೆಯ್ದೆ ಪವಿತ್ರವೃತ್ತಿಯೊಳ್ ।
ಕೊಡುವುದಾವ ಪಂಗೆನಿಸಿ ತೀವ್ರೊಗಟಿರ್ದ್ದಂ ಜಿನಪಾಭಿಷೇಕಮಂ ॥ ೫೧ ॥

ವ॥ ಆಗಳಿಂದ್ರಂಗಿಂದ್ರಾಣಿ ಮುಂದೆ ತಂದವಟಯ್ಸುವುದುಂ.

ಕಂ॥ ಬಹುಕುಸುಮಬಹುಫಳಾನ್ವಿತ ।
ಬಹುತಂಡುಳವರ್ಣಹಾರದಿಂ ದವತಾರಂ ॥
ವಿಹಿತಕ್ರಮಸಹಿತಂ ಮಳೆ ।
ರಹಿತಂ ಗೆಸೆವಂತು ಮಾಡಿದಂ ಸುರಮಹಿತಂ ॥ ೫೨ ॥

ವ॥ ಅದಱಿಂಕೊಡನೆ.

ಕಂ॥ ಆರಾಜನ ಪಕ್ಕದೆ ನುತ ।
ರಾರಾಜಿಪ ಭಗಣಮೆನಿಸೆ ಮಂಗಳದೀಪಂ ॥
ನೀರಾಜನಮುಂ ಮುಕ್ತಿ ।
ಶ್ರೀರಾಜನ ಮುಂದೆ ನೆಗಟಿರ್ದ್ದ ದಮರಾಧಿಪನಿಂ ॥ ೫೩ ॥

ವ॥ ಅಂತಘಶಾಸನಂಗೆ ಪಾಕಶಾಸನಂ ಮಾಟ್ಪಿ ಜನ್ಮಾಭಿಷೇಕವಿಧಾನಮಂ ನಿರ್ವರ್ತಿಸಿ ತದನಂತರಂ.

ಮ॥ ಹರಿಣಾಂಕದ್ಯುತಿಹಾರಿ ವಾರಿ ಸುರಭಿಶ್ರೀನಂದನಂ ಚಂದನಂ ।
ಪರಿಮುಕ್ತಾಕ್ಷತ ಮಕ್ಷತಂ ಪರಿಮಳಾಸ್ಥಾನಂ ಪ್ರಸೂನಂ ಮನೋ ॥
ಹರರೂಪಂ ಹಿಮಧೂಪ ಮುದ್ಧೃತಕಳಾಪಂ ರತ್ನದೀಪಂ ಸುಧಾ ।
ಗುರು ಭಾಸ್ವಚ್ಚರು ನಿರ್ಮಳಂ ಪಳ ಮೆನುತ್ತೀಮಂಗಳದ್ರವ್ಯದಿಂ ॥ ೫೪ ॥

ಕಂ॥ * ಅಷ್ಟಾರ್ಥಘಾತಿಮಥನಂ[1] ।
ಗಷ್ಟಾಪದಶಿಖರಿಶಿಖರಶೇಖರರೂಪಂ ॥
ಗಷ್ಟಾಪದರಿಪುಪೀಠಂ ।
ಗಷ್ಟವಿಧಾರ್ಚನೆಗಳೆಸೆಯೆ ಪದೆದರ್ಚಿಸಿದಂ ॥ ೫೫ ॥

ಮ॥ ಕ್ರಮದಿಂ ಪೂಜಿಸುವಂ ಶತಕ್ರತುವೆ ಪೂಜಾವಸ್ತು ಕಲ್ಪದ್ರುಜಾ ।
ತಮೆ ಪೂಜ್ಯಂ ಭುವನತ್ರಯೇಶ್ವರನೆ ಪೂಜಾಲಭ್ಯ ಮಕ್ಷೂಣಮೋ ॥
ಕ್ಷಮೆ ತಾ ನೆಂದೆನಲಾವ ನಿಂನದಱ ಪೆಂಪಂ "ಸಾಗರಂ ಸಾಗರೋ ।
ಪಮ"ಮೆಂದೆಂದಿರಲಲ್ಲದೆಯ್ದೆ ಪೊಗಟಲ್ಕಂತಾಗರ್ಗ ಮೇಂ ತೀರ್ಗುಮೇ ॥ ೫೬ ॥

* ಈ ಪದ್ಯವು ಒಂದು ಪ್ರತಿಯಲ್ಲಿ ಮಾತ್ರ ಈ ಸ್ಥಳದಲ್ಲಿದೆ. [1] ದಮನಂ.

ವ|| ಎಂದು ಬಣ್ಣಿಸುತ್ತ ಜಯಜಯಘೋಷಮುಖರಮುಖದ ದೇವಕೋಟಿ ವೆರಸು ನಿಟಿಲಘ ಟಿತ ಕರಸರೋಜನಾಗಿ.

ನಮೋ ಜಿನಾಯ ತೇ ತಸ್ಮೈ ಸರ್ವಸತ್ವಾಶ್ರಯಾತ್ಮನೇ ।
ಸನ್ಮತಾಂಭೋಧಯೇ ಯಸ್ಮಾದ್ಧತ್ತೇ ಧರ್ಮಾಮೃತಂ ಜಗತ್ ॥ ೧ ॥

ನಮೋ ಜಿನಾಯ ತೇ ತಸ್ಮೈ ಸತ್ಪಾತ್ರಸ್ನೇಹವರ್ತಿನೇ ।
ಸುತಪೋದೀಪ್ರದೀಪಾಯ ಯತ್ರಾನಂಗಃ ಪತಂಗವತ್ ॥ ೨ ॥

ನಮೋಜಿನಾಯ ತೇ ತಸ್ಮೈ [1]ದೋಷಾದೋಷವಿಲೋಪಿನೇ ।
ಕಾಳವ್ಯಾಳೇಭಸಿಂಹಾಯ ಭಾತಿ ಯತ್ ಸೂಕ್ತಿವರ್ಜಿತಃ ? ॥ ೩ ॥

ನಮೋ ಜಿನಾಯ ತೇ ತಸ್ಮೈ ಕಾಂತಾರಾಗಕ್ಷಯಾತ್ಮನೇ ।
ಸದ್ಜ್ಞಾನಭಾನವೇ ಯಸ್ಯ ಪ್ರಕಾಶೇ ನಿಸ್ತಮೋ ಜಗತ್ ॥ ೪ ॥

ನಮೋ ಜಿನಾಯ ತೆ ತಸ್ಮೈ ಸರ್ವಾಶಾಂಬರಭಾಸಿನೇ ।
ಭವ್ಯೋತ್ಪಲೇಂದವೇ ಯೇನ ಕರ್ಮಘರ್ಮಾತಪೋ ಹೃತಃ ॥ ೫ ॥

ಕಂ|| ಜಿನ ನಿನ್ನ ಮೂರ್ತಿ ಜಿನ ನಿ ।
ನ್ನ ನಯಂ ಜಿನ ನಿನ್ನ ಸಮತೆ ಜಿನ ನಿನ್ನೆಸಕಂ ॥
ಜಿನ ನಿನ್ನ ಮಹಿಮೆ ಜಿನ ನಿ ।
ನ್ನನಘತೆ ಜಿನ ನಿನ್ನ ಕಾಣ್ಕೆ ವರ್ಣಿಸಲಳವೇ ॥ ೫೭ ॥

ವ|| ಎಂದು.

ಕಂ|| ಇವು ಮೊದಲಾಗಿರೆ ವಸ್ತು ।
ಸ್ತವರೂಪಸ್ತವಗುಣಸ್ತವಂಗಳಿ ನಿಂದ್ರಂ ॥
ಭವರಿಪುವಂ ಸ್ತುತಿಯಿಸಿ ಮುಕು ।
ಟವಿಘಟ್ಟಿತಪಾದ ನಾದ ನಸುನಯದಿಂದಂ ॥ ೫೮ ॥

ವ|| ತದನಂತರಂ.

ಕಂ|| ಚಂದನಲತೆ ಕಿಸಲಯಚಯ ।
ದಿಂದಂ ತೊಡೆದಪುದು ಮಲಯನಗನಿರ್ಝರನಿ ॥
ಷ್ಯಂದಮ ನೆನೆ ದಿವ್ಯಾಂಬರ ।
ದಿಂ ಶಚಿ ತೊಡೆದ ಳಭವಸವನದ್ರವಮಂ ॥ ೫೯ ॥

ವ|| ಆಗಳ್.

[1] ಒಂದು ಪ್ರತಿಯಲ್ಲಿ ೩-೪ ನೆಯ ಪದ್ಯಗಳ ಎರಡನೆಯ ಪಾದಗಳು ವ್ಯತ್ಯಸ್ತಗಳಾಗಿವೆ.

ಕಂ॥ ಜಿನತನುಬಿಂಬಿತನೀರಾ ।
ಜನದೀಪಕಳಾಪರುಚಿಗಳೊಪ್ಪಿದುವು ಜಲ ॥
ಕ್ಕನೆ ಚಿತ್ತದೊಳಗೆ ಬೆಳಗುವ ।
ಘನಧರ್ಮಧ್ಯಾನದೀಪ್ತಿ ಪೊಱಪೊಣ್ಮುವವೋಲ್ ॥ ೬೦ ॥

ವ॥ ಅನಂತರಂ ಶಿರೀಷಧಾಮಕೋಮಳಂಗಳಪ್ಪ ನಿಜಭುಜಂಗಳ್ಗೆ ರೋಮಾಂಚಸಂಚಯಂ ನೆಗೆಯೆ ನೆಗಪಿಕೊಂಡು

ಮ॥ ಉದಯಾದ್ರೀಂದ್ರದೊಳಿಂದ್ರದಿಗ್ವಧು ಲಸದ್ಬಾಳಾರ್ಕನಂ ತಾಳ್ದುವಂ ।
ದದಿ ನಿಂದ್ರಾಣಿ ಜಿನೇಂದ್ರಬಾಳಕನ ನಾತ್ಮೋತ್ಸಂಗದೊಳ್ ತಾಳ್ದಿ ರಾ ॥
ಗದಿ ನಿರ್ದಂದಿನ ಪ್ಯೆಮೆಗಂದಿನ ವಿಳಾಸಕ್ಕಂದಿನಾನಂದದೊಂ ।
ದೊದವಿಂ ಗಂದಿನ ಪುಣ್ಯಕಂದಿನೆಸಕಕ್ಕಂತಾವಳುಂ ನೋಂತಳೇ ॥ ೬೧ ॥

ವ॥ ಎನಿಸಿರ್ದನಂತರಂ.

ಕಂ॥ ಪರಮಜಿನದಿವ್ಯಗಂಧದ ।
ಪರಿಚಯದಿಂ ಸಕಳಸಾರಸೌರಭ್ಯಮ ನಾ ॥
ಳ್ದಿರಲಿವು ನೋಂತುವೆನು ।
ತ್ತಿರೆ ವಿರಚಿಸಿದಳ್ ಶಚಿ ಸುಗಂಧಲೇಪನವಿಧಿಯಂ ॥ ೬೨ ॥

ವ॥ ಮತ್ತಂ ಮುಕ್ತಿಲಲನಾಲಲಾಟತಿಲಕನುಂ, ಪಂಚಮಭೂಮಿಭಾಮಿನೀವಶ್ಯಾಂಜನನುಂ, ಅಪವರ್ಗಸಂಪದ್ವಿಳಾಸಿನೀಲಲಾಮನುಂ, ಅಕ್ಷಯರಮಾಂಗನಾಸುವರ್ಣಕುಂಡಲನುಂ, ಆತ್ಯಂತಿಕಗತಿಗ್ರೈವೇಯಕನುಂ, ಅಮೃತಕಾಮಿನೀಕನಕಕಂಕಣನುಂ, ನಿಶ್ರೇಯಸಶ್ರೀಪ್ರಿಯಾರತ್ನಕೇಯೂರನುಂ, ಮೋಕ್ಷಲಕ್ಷ್ಮೀಕರಾಂಗುಲೀಯಕನುಂ, ನಿರ್ವೃತಿವಧೂಪದವಿಲಾಸನೂಪುರನುಂ, ನಿರ್ವಾಣನಿತಂಬಿನೀನಿತಂಬಸೂತ್ರನು ಮೆನಿಸಿದೀತ್ರಿಭುವನೈಕಭೂಷಣವಿಳಾಸಂಗೆ ಭೂಷಣವಿಳಾಸ ಮಖಿಳಲೋಕಲೋಚನಲೋಭನೀಯಸಹಜಾಂಗಸೌಂದರ್ಯಸಂಪತ್ತಿಯಂಪುಱಿಯಿಸಲಲ್ಲದೆಮೆಱೆಯಿಸಲ್ ನಿಮಿತ್ತ ಮಲ್ತು, ಆವೆಡೆಗಂ ಮಂಗಳೋಪಚಾರ ಮಿಲ್ಲಿ ಕರಣೀಯಂ. ಎಂದು ಸಂಕ್ರಂದನಂ ಬೆಸಸೆ.

ಚಂ॥ ತಿಳಕಮ ನಿಟ್ಟು ಕಜ್ಜಳಮ ನೆಚ್ಚಿ ಲಲಾಮಮ ನಪ್ಪುಕೆಯ್ಸಿ ಕುಂ ।
ಡಳಮ ನಮರ್ಚಿ ಕಂಠಿಕೆಯ ನರ್ಪಿಸಿ ಕಂಕಣಮಂ ತಗುಳ್ಚಿ ದೋ ॥
ರ್ವಳಯಮ ನಿಕ್ಕಿ ಮುದ್ರಿಕೆಯ ನೇಱಿಸಿ ನೂಪುರಮಂ ತೊಡರ್ಚಿ ಮಂ ।
ಜುಳಕಟಿಸೂತ್ರಮಂ ತುಡಿಸಿ ಕೆಯ್ಗೆಯೆ ಕಣ್ಗೆಸೆದಂ ಜಿನಾರ್ಭಕಂ ॥ ೬೩ ॥

ಕಂ|| ಸುರನೇತ್ರ ಪ್ರತಿಬಿಂಬಂ ।
ಸ್ವರುಚಿಯೊಳಾವರಿಸಿ ತಾನೆ ತನ್ನಂ ನೋಡಲ್ ॥
ಪರಮನ ತನು ಕಣ್ದೆಱೆದಂ ।
ತಿರೆ ನೊಗಯಿಸಿ ಪೋಲ್ತು ದಲರ್ದ ತಾವರೆಗೊಳನಂ || ೬೪ ||

ವ|| ಅಗಳ್.

ಮ|| ವರಭೂಷಾಬಲದಿಂದೆ ಶೋಭೆವಡೆದನ್ಯಾಕಾರದಂತಲ್ಲದಾ ।
ಭರಣಕ್ಕಾಭರಣಂ ಜಿತಸ್ಮರನ ರೂಪೆಂದೀಕ್ಷಿಸಲ್ ತನ್ನ ಸಾ ||
ಸಿರ ಕಣ್ಣೆಯ್ದದೆ ಕೋಟಿ ಕಣ್ಗೆ ಬಯಸುತ್ತುಳ್ಕುರ್ತು ತಳ್ಕಿಯ್ಯಿತು ।
ಧ್ಧರಿಸಿರ್ದಂ ಹರಿ ಕಾಂಕ್ಷಿಸುತ್ತುಲವಿನಿಂ ಶ್ರೀ ಭವ್ಯರತ್ನಾಕರಂ || ೬೫ ||

ಗದ್ಯಂ

ಇದು ಸಮಸ್ತ ಭುವನಜನಸಂಸ್ತುತಜಿನಾಗಮಕುಮುದ್ವತೀಚಾರುಚಂದ್ರಾಯಮಾಣ ಮಾನಿತ ಶ್ರೀಮದುಭಯಕವಿಕಮಳಗರ್ಭ ಮುನಿಚಂದ್ರ ಪಂಡಿತ ದೇವಸುವ್ಯಕ್ತಸೂಕ್ತಿಚಂದ್ರಿಕಾ ಪಾನಪರಿಪುಷ್ಪಮಾನಸಮರಾಳ

ಗುಣವರ್ಮ ನಿರ್ಮಿತಮಪ್ಪ
ಪುಷ್ಪದಂತಪುರಾಣದೊಳ್
ಜನ್ಮಾಭಿಷೇಕೋತ್ಸವಸಂಪದ್ವರ್ಣನಂ
ಏಕಾದಶಾಶ್ವಾಸಂ



ಶ್ರೀ

# ಪುಷ್ಪದಂತಪುರಾಣಂ

## ದ್ವಾದಶಾಶ್ವಾಸಂ.

ಕಂ॥ ಶ್ರೀಪೃಥುಳೈಶ್ವರ್ಯನಗತ ।
ಲೇಪನ ದರ್ಶನದೊಳಾದ ಪರಮಾನಂದ ॥
ಶ್ರೀಪದದೊಳ್ ರಂಜಿಸಿದ ನಿ ।
ಳಾಪೂಜ್ಯಂ ಪ್ರಭುಗುಣಾಬ್ಜವನಕಳಹಂಸಂ ॥ ೧ ॥

ವ॥ ಅಂತು ಜನ್ಮಾಭಿಷೇಕೋತ್ಸವವ್ಯಾಪಾರಮಂ ತೀರ್ಚಿ ಮಾರಮದವಾರಣಂ ಬೆರಸು ಮದವಾರಣಸ್ಕಂಧಮ ನಲಂಕರಿಸಿ ಸರ್ವಗೀರ್ವಾಣ ಸೈನಿಕಸಹಸ್ರಪರಿವೃತಂ ಸಹಸ್ರಲೋಚನಾಮರಂ ಧರಾಮರನಂತೆ ದಕ್ಷಿಣಾಭಿಮುಖ ನಾಗಿ ತಳರೆ.

ಕಂ॥ ನೆಲಸಿರ್ದ ಪಕ್ಕಿಪಿಂಡುಗ ।
ಳುಲಿದೆಟ್ದು ವಿಭಾತಸಮಯದೊಳ್ ಪೋಗಲೊಡಂ ॥
(ಸ)ಲೆ ಬಿನ್ನನಪ್ಪ ವೃಕ್ಷಂ ।
ಬೊಲಿರ್ದುದಮರಾದ್ರಿ ದಿವಿಜಕಳಕಳಶೂನ್ಯಂ ॥ ೨ ॥

ವ॥ ಆಗಳ್.

ಮ॥ ಭುವನಾಭೋಗಮ ನೆಯ್ದೆ [1]ತೀವಿದಳಿದರ್ಹನ್ಮಜ್ಜನಕ್ಷೀರಪೂ ।
ರ ಮೆನಲ್ಕಭ್ರಗಜೇಂದ್ರಶುಭ್ರರುಚಿಯುಂ ದೇವೀದೃಗಾಲೋಕಮುಂ ॥
ಧವಳಚ್ಛತ್ರಚಯಾಂಶುವುಂ ಜಿನತನುಪ್ರದ್ಯೋತಿಯುಂ ಪರ್ವೆ ತ ।
ತ್ಪ್ಲವದೊಳ್ ವಾಸವ ನೀಸುವಂತೆ ತಳರ್ದೆಟ್ತಂದಂ ತದದ್ರೀಂದ್ರದಿಂ ॥ ೩. ॥

ವ॥ ಅಂತು.

ಮ॥ ಅಮರಾನೀಕವಿಮಾನವಿಸ್ತೃತವಿಯಚ್ಚಕ್ರಂ ಶಚೀಲೋಚನ ।
ಭ್ರಮರಾನಂದಜಿನೇಂದ್ರವಕ್ತ್ರಕಮಳಾಲೋಕೈಕಲಗ್ನಂ ದಿಶಾ ॥
ರಮಣೀಕರ್ಣವಿಹಾರಿ ತೂರ್ಯರಭಸಂ ಮಾಂಗಲ್ಯಸಾಕಲ್ಯಸಂ ।
ಭ್ರಮಿ ಕಾಕಂದಿಯ ನೆಯ್ದೆ ಪೊಕ್ಕ ನವನೀಶಾವಾಸ(ಮಂ) ವಾಸವಂ ॥ ೪ ॥

ವ॥ ಅಂತು ಪೊಕ್ಕು.

ಉ॥ ತನ್ನ ನಿಯೋಗದಿಂ ದಿವಿಜಶಿಲ್ಪಿಗಳಿರ್ದು ಸಮಸ್ತವಸ್ತುಸಂ ।
ಛನ್ನ ಮತಿಪ್ರಶಸ್ತರಚನಾಂಚಿತ ಮುರ್ವಿಗಪೂರ್ವ ಮೆಂಬಿನಂ ॥
ಮುನ್ನಮೆ ನಿರ್ಮಿಸಿಟ್ಟ ಮಣಿಮಂಟಪಮಧ್ಯದ ಸಿಂಹಪೀಠದೊಳ್ ।
ಸನ್ನುತಲೀಲೆಯಿಂ ದಿರಿಸಿ ಬಾಲಕನಂ ಸುರಲೋಕಪಾಲಕಂ ॥ ೫ ॥

---

[1] ತೀವಿದಣಿದ.

ಕಂ॥ ಚಂದ್ರನ ಪಕ್ಕದ ಭಗಣ ಮು ।
ಗೇಂದ್ರನ ಪಕ್ಕದ ಕುಳಾದ್ರಿಕುಳ ಮೆನಿಸಿರೆ ಕ ॥
ಲ್ಪೇಂದ್ರತತಿ ಜಿನನ ಪಕ್ಕದೊ ।
ಳಿಂದ್ರಾಣಿಸಹಿತ ಮಿರ್ದುದುಚಿತಾಸನದೊಳ್ ॥ ೬ ॥

ವ॥ ಆಗಳತಿಬಹಳಕೋಳಾಹಳಕುಳನಿಳಿಂಪಜನ ದನೇಕಮಂಗಳಾನಕಸಮುದ್ರಸದ್ರಭಸದಿಂದ ಮುನ್ನಿದ್ರೆಯಾದ ಮಹಾದೇವಿವೆರಸು ಪುತ್ರಮುಖದರ್ಶನೋತ್ಕಂಠ ಸುಕಂಠರಾಜ ನೆರಡನೆಯ ದಿವಿಜರಾಜನಂತೆ ಮಹನೀಯಮಹಿಮ ನಾಮಹಾಮಂಟಪಕ್ಕೆ ವಂದು ಸಮುಚಿತಾಸನಾಸೀನ ನಾದಲ್ಲಿ.

ಕಂ॥ ನರಪತಿಯುಂ ಸುರಪತಿಯುಂ ।
ನರೇಂದ್ರವಧುವುಂ ಸುರೇಂದ್ರವಧುವುಂ ನರರುಂ ॥
ಸುರರು ಮಣ ಮುಱಿಯಲಾಗದೆ ।
ಸಿರಿಯೊಳ್ ಮೆಯ್ಸಿರಿಯೊ ಳೆವರದೇನನುಪಮರೋ ॥ ೭ ॥

ವ॥ ಆಸಮಯದೊಳ್.

ಕಂ॥ ಭುವನತ್ರಯಸಾಮ್ರಾಜ್ಯ ಮು ।
ದಿವರ್ಗೆಕಚ್ಛತ್ರ ಮಾದುದೆನಿಪನಿತು ಮಹೋ ॥
ತ್ಸವ ಮಾದುದವರ್ಗೆ ಲೋಚನ ।
ಕುವಳಯಮ ನಲರ್ಚೆ ಪುತ್ರಮುಖಶಶಿಬಿಂಬಂ ॥ ೮ ॥

ಬಾಳಕನಂ ವಿಲುಳಿತಲಂ ।
ಬಾಳಕನಂ ನೋಡುವಲ್ಲ ಸುಗ್ರೀವನ ತ ॥
ದ್ಬಾಳೆಯ ನಿಡುನಿಡುಗಣ್ಗಳ್ ।
ಬಾಳೆಯ ನಿಟಿಸಿದುವು ಹರ್ಷರಸಮಗ್ನಂಗಳ್ ॥ ೯ ॥

ವ॥ ಅನಂತರಂ.

ಆಜಂಪತಿಗಳ ವದನಾಂ ।
ಭೋಜಂಗಳ ನಾತ್ಮದೃಕ್ಸಹಸ್ರಭ್ರಮರೀ
ರಾಜಿಗೆಡೆಮಾಡಿ ನೋಡಿ ಬಿ ।
ಡೌಜಂ ದಶನಾಂಶುರಾಜಿ ರಾಜಿಸೆ ನುಡಿದಂ ॥ ೧೦ ॥

ಹರಿಣಿ॥ ನಿಮಗೆ ತನಯಂ ತ್ರೈಲೋಕ್ಯಾಧೀಶ ನೀಜಿನನಾಥ ನಾ ।
ನಮರಗಿರಿಗೊಯ್ದಾಗಳ್ ಜನ್ಮಾಭಿಷೇಕ ವಿಭೂತಿಯಂ ॥
ನಮೆದು ಸುಕೃತಂಬೆತ್ತೆಟ್ಟಿಂದೆಂ ಕೃತಾರ್ಥನೆ ನಾದೆ ನಿ ।
ನ್ನಿಮತು ದೆಸೆಯಿಂದನ್ಯರ್ ನಿಮ್ಮಂತು ಮಾನ್ಯರೆ ಧನ್ಯರೇ ॥ ೧೧ ॥

ಕಂ। ಗುರುಗಳ್ ನೀ ಮೆತ್ರಿಭುವನ ।
ಗುರುಗದಱಿಂ ದೇವಗೆ ಗುರುಗಳಖಿಳಜನಕ್ಕಂ ॥
ಗುರುಗಳ್ ನೀಮೆ "ಗುರೋರಪಿ ।
ಗುರು" ವೆಂಬೀನುಡಿಯ ಪೆಂಪ ನಾಂತಿರ್ ನೋಂತಿರ್ ॥ ೧೦ ॥

ವ॥ ಎಂದು ವಿನಯೋಕ್ತಿಪೂರ್ವಕ ಮಿರ್ವರುಮಂ ಸ್ತುತಿಯಿಸಿ.

ಮ॥ ಇದು ಸರ್ವೋರ್ವಿಗಮತ್ಯಪೂರ್ವ ಮೆನೆ ಗೀರ್ವಾಣವ್ರಜಂ ತಂದು ನೀ ।
ಡಿದ ವಸ್ತ್ರಾಂಗವಿಭೂಷಣಾಂಗವಿಕಸನ್ಮಾಲ್ಯಾಂಗದೀಪಾಂಗವೃ ॥
ಕ್ಷದ ದಿವ್ಯಾಂಬರದಿಂ ದಲಂಕರಣದಿಂ ಪೂಮಾಲೆಯಿಂ ದಂಗರಾ ।
ಗದಿ ನುದ್ಭ್ರಾಜಿಸುವಂತು ಪೂಜಿಸಿದ ನಿಂದ್ರಂ ತತ್ಪಿತೃದ್ವಂದ್ವಮಂ ॥ ೧೩ ॥

ಕಂ॥ ಪುರದೊಳಗಿನ್ನುಂ ರನ್ನದ ।
ಸರಿ ಸುರಿದಪುದಿಂದ್ರ ನಿಂತು ಬಂದೋಲಗಿಪಂ ॥
ನರಲೋಕದೊಳಿವರ್ಗಳೆ ನೋಂ ।
ತರಿಂತು ಪಡೆದನ್ನರಾರೊ ಕುಳದೀಪಕನಂ ॥ ೧೪ ॥

ಚಂ॥ ಕರಿರಿಪು ಪುಟ್ಟೆ ವಿಂಧ್ಯಗಿರಿ ತಾವರೆ ಪುಟ್ಟೆ ಸರೋವರಂ ಮನೋ ।
ಹರಮಣಿ ಪುಟ್ಟೆ ರೋಹಣಮಹಾದ್ರಿ ಸುಧಾರುಚಿ ಪುಟ್ಟೆ ಪಾಲ್ಕಡಲ್ ॥
ಸುರತರು ಪುಟ್ಟೆ ನಂದನ ವಭಿಷ್ಟುತ ಮಪ್ಪವೊಲಾದುದೀಗಳೀ ।
ಸ್ಮರರಿಪು ಪುಟ್ಟೆ ಧಾರಿಣಿಗೆ ಕಾಶ್ಯಪಗೋತ್ರ ವಿದೇಂ ಪವಿತ್ರಮೋ ॥ ೧೫ ॥

ವ॥ ಎಂದು ಸುರಜನಂಗಳುಂ ಪುರಜನಂಗಳುಂ ಪೊಗೞೆ ಪರಮಾನಂದ ಪರವಶೀಭೂತ ಚೇತಸ್ಕರಾಗಿರ್ದು ಜಾತಕರ್ಮಕಲ್ಯಾಣದೊಸಗೆಯುಂ ಮಾಡಿಸಿ.

ಕಂ॥ ನಗರದ ಮನೆಮನೆದಪ್ಪದೆ ।
ಸೊಗಯಿಸೆ ಬಹುವರ್ಣವಿವಿಧಪಟದೊಳ್ಗುಡಿಗಳ್ ॥
ನೆಗೞ್ದಿರೆ ಬಹುಪ್ರಕಾರದ ।
ಮುಗಿಲೊಗೆದಪುವೆನಿಸಿತಾಗಳಾಕಾಶತಳಂ ॥ ೧೬ ॥

ಒಸೆದು ದಿಗಧೀಶ್ವರರ್ ಜಿನ ।
ನೊಸಗೆಗೆ ಬರ್ಪಲ್ಲಿ ತಚ್ಚಮೂಪದಹತಿಯಿಂ ॥
ಮುಸುಕಿದ ಕೆಂಧೂಳಿ ಯಿದೆನೆ ।
ಪಸರಿಸಿ ಪಟವಾಸಚೂರ್ಣಮೆಸೆದುವು ದೆಸೆಯೊಳ್ ॥ ೧೭ ॥

ಎಡೆವಱಿಯದಂತ ಪುರದೊಳ್ ।
ಕಡೆಯಿಕ್ಕುವ ತೋರಮುತ್ತು ಕಟ್ಟುವ ಗುಡಿ ನೇ ॥
ರ್ಪಡೆ ಚೆಲ್ವೆತ್ತುವ ತೋರಣ ।
ವಡಿಗಡಿಗುತ್ಸವದೆ ತಳೆವ ಪಟವಾಸಚಯಂ ॥ ೧೮ ॥

ಕಂ॥ ಆವರಿಸುವ ಪೂವಲಿ ತ ।
ಳ್ತಾವಗ ಮಿರದುಣ್ಮು ವುಚಿತಮಂಗಳರುಚಿ ಸ ॥
ದ್ಭಾವದೊಳೆ ಕುಣಿವ ಪೆಕ್ಕಣ ।
ಮಾವೃತಶುಭನಿಧಿಗಳೀವ ಬಾಯಿನ ಮೊಸೆಗುಂ ॥ ೧೯ ॥

ಚಂ॥ ಸುದತಿಯರಾಸ್ಯಗಂಧಮ ನಪೂರ್ವಮ ದೆಂದು ನಮೇರುಪುಷ್ಪವ ।
ರ್ಷದ ಬಳಿಸಂದು ಬಂದ ಸುರಲೋಕದ ತುಂಬಿಗಳಾಸೆಗೆಯ್ದು ಮ ॥
ಚ್ಚಿದುವು ತದಾನನಾಂಬುಜದ ತುಂಬಿಗಳಂ ಸುರಪುಷ್ಪ ವೃಷ್ಟಿ ತಾಂ ।
ಪವನಿಸಲಾರ್ತುದಿಲ್ಲ ನಿಜಗಂಧದಿ ನೇನದಱಿಕೊಳ್ವಳುಂಬಮೋ ॥ ೨೦ ॥

ಚಂ॥ ಸುರವನಿತಾಜನಂಗಳೆ ಸುರೂಪವಿಳಾಸೆಯ ರೆಂದು ಬೀಗಿ ಧಿ ।
ಕ್ಕರಿಸುವ ನಿಂದ್ರ ನೆಮ್ಮುಮ ನಮಂದಿರುಮಂ ಪಡಿಗಟ್ಟಿ ನೋಡುಗೀ ॥
ಬರವಿನೊಳಾದ ಚೆಲ್ವು ಮಿಗಿಲಿಲ್ಲಿಯೆ ಕಂಡಪ ನೆಂದು ತೋರ್ಪವೋಲ್ ।
ನೆರೆದುದು ಪೆಂಡವಾಸದೆಳವೆಂಡಿರ ತಂಡ ಮದಿಂಡೆಯಾಟದೊಳ್ ॥ ೨೧ ॥

ಕಂ। ಒಸಗೆಮರುಳ್ಗೊಂಡಾಡುವ ।
ರಸಭಾವಾತ್ಮೆಯರ ನೂಪುರಂಗಳ ದನಿಯುಂ ॥
ಕುಸುಮೋಪಹಾರದಳಿಗಳ ।
ರಸಿತಮು ಮೊದವಿಸಿತು ಮದನಚಾಪಧ್ವನಿಯಂ ॥ ೨೨ ॥

ವ॥ ಅಂತಶೇಷಪುರಜನಾಂತಃಪುರಜನಪ್ರಮೋದಸಮುದ್ಗೀರ್ಣಘೂರ್ಣಿತಾರ್ಣವಕ್ಷೋಭಶೋಭಾವಳಂಬಿಯಾದ ತನ್ಮಹೋತ್ಸವದೊಳ್.

ಕಂ॥ ಆಡುವರಂ ಕಂಡಾಡುವ ।
ಪಾಡುವರಂ ಕಂಡು ಪಾಡುವಂದಾನಂದ ॥
ಕ್ರೀಡೆಗೆ ಮಘವನ ಬಗೆಯುಂ ।
ತೀಡಿದುದೇಂ ಪಿರಿದೊ ಜಿನನ ಪುಣ್ಯಾತಿಶಯಂ ॥ ೨೩ ॥

ವ॥ ಅಂತು ಜಗತ್ತ್ರಯಪವಿತ್ರಸುಕೃತಸೂತ್ರಧಾರನಮುಂದೆ ಸುತ್ರಾಮ ನುದ್ದಾಮಸಂಗೀತಕಪ್ರಸಂಗಮಂ ಮೊಱೆಯಲ್ ಮನಂದಂದು ತಮ್ಮ ಮೊಗಮಂ ನೋಲ್ಪುದುಂ ಕಲ್ಪಾಮರಮುಖರಿಗಳ್ ತಮಗವಸರಂಬಡೆದು ಸಂಕ್ರಮಿಸೆ.

ಮ॥ ಸ್ವರವರ್ಣಶ್ರುತಿಮೂರ್ಛನಾಗತಿಯತಿಸ್ಥಾನಪ್ರಯೋಗಕ್ರಿಯಾ ।
ನಿರತಂ ತಾಳಲಯಾಶ್ರಯಪ್ರಣಯನಾನಾವೇಣುವೀಣಾನುಗಂ ॥
ಸರಸಂ ಸಂಗತಮಾರ್ಗದೇಸಿ ಯೆನೆ ರಾಗಪ್ರೌಢಿಯಂ ಬೀಱೆ ಬಿ ।
ತ್ತರದಿಂ ಪಾಡಿದರೋಜೆಯಿಂ ಶ್ರುತಿಸುಖಶ್ರೀದಾಯಕರ್ ಗಾಯಕರ್ ॥ ೨೪ ॥

ಉ॥ ಇಂತಿದು ಕಾಮುಕಾಮರ್ಪುಕಲತಾಗುಣದಿಂಚರ ಮೆಂಬ ಕಾಂತಿಮೆ ।
ತ್ರಿಂತಿದು ವಿಶ್ವಲೋಕಜನಮೋಹನಮಂತ್ರನಿನಾದ ಮೆಂಬ ಮ ॥
ತ್ರಿಂತಿದು ಕಾಟಿಪ್ಪುರಂಬರಿವ ಕರ್ಣರಸಾಯನ ಮೆಂಬ ನುಣ್ಪಿನಿಂ ।
ಪಿಂತಲೆ ತೂಗಿಸಿತ್ತು ರಸತುಷ್ಟನರಾಮರರೊಂದು ಗಾಮರಂ[1] ॥ ೨೫ ॥

ವ॥ ಅದಱಿತೊಡನೆ.

ಚಂ॥ ಬಹುಲಯಭೇದದೋಜೆ ಗತಿಭೇದದೊಡಂಬಡು ಚಾರಿ ಭೇದದು ।
ರ್ವಹಿತೆ ತಗುಳ್ದಳಂಕರಣಭೇದದಮರ್ಕೈ ನಿಮಿರ್ಕೆಯಿಂ ರಸಾ ॥
ವಹ ಮೆನೆ ಕೆಯ್ಗೆ [2]ನಾಲಗೆ ಕವಲ್ತುವೊಲಾಗಿರೆ ಹೃದ್ಯವಾದ್ಯಮಂ ।
ಬಹಳಿಕೆವೆತ್ತು ಬಿತ್ತರಿಸಿ ಬಾಜಿಸಿದರ್ ದಿವಿಜೇಂದ್ರವಾದಕರ್ ॥ ೨೬ ॥

ಕಂ॥ ಕಂಕರಿಯ ಸಿಮಿಱಿ [3]ಪೆಂಪಿನ ।
ಝುಂಕಟ [4]ಬೊಂಬುಟಿೞಿಯು ಪಟಿಮದುಳಿಕೆಯ ಥಕ್ಕಾ ॥
ಸಂಕುಳದ ತಾಳದುಲಿ ನೆಗ ।
ೞಿರ್ದೆಂ ಕರ್ಣಾಮೃತಸಮುದ್ರಘೂರ್ಣನಮಾಗೆ ॥ ೨೭ ॥

ವ॥ ಅಂತು ವಸ್ತುಗೀತಂ ವಿಸ್ತರಿಸೆಯುಂ, ನಿರವದ್ಯವಾದ್ಯಂ ಚೋದ್ಯ ಮಾಗೆಯುಂ ರಾಗರಸ ರಂಜಿತಾಂತರಂಗ ನಾಗಿ.

ಮಾಲಿನಿ॥ ರಚಿತರುಚಿರನೇಪಥ್ಯಂ ಬಡಂಗಾಗೆ ಮಂತ್ರೀ ।
ಪಚಿತಬಲಿವಿಧಾನಂ ಪೂರ್ವರಂಗಪ್ರಸಂಗಂ ॥
ರುಚಿರ ಮೆನಿಸೆ ನಾಂದೀಪೂಜೆಯಂ ಮಾಡಿ ಚೆಲ್ವಂ ।
ಶಚಿಪತಿ ಕೃತ[ಸ] ತ್ಪುಷ್ಪಾಂಜಲಿಕ್ಷೇಪನಾದಂ ॥ ೨೮ ॥

ವ॥ ಆಗಿ ರಂಗಂಬೊಕ್ಕು.

ಕಂ॥ ಆಖಂಡಳಂ ಸಹಸ್ರಮ ।
ಯೂಖನ ತೆಱದಿಂ ಪ್ರಕೀರ್ಣಪಾದನ್ಯಾಸಂ ॥
ವ್ಯಾಖಂಡಿತ ಮೆನಿಸಿದ ವೈ ।
ಶಾಖಸ್ಥಾನದೊಳಳುರ್ಕೆವೆತ್ತೆಸೆದಿರ್ದಂ ॥ ೨೯ ॥

ಕಟಿಸೂತ್ರ ಮೆಸೆದು ದಿಂದ್ರನ ।
ಕಟಿತಟವಿನ್ಯಸ್ತಹಸ್ತನಖರುಚಿಯಿಂ ನದಂ ॥
ತುಟಿ ಪುಣ್ಯಾತ್ಮಕರಾಶ್ರಯ ।
ಘಟನೆಯಿಂ ನೆಸೆದಿರ್ಕು ಮತ್ತೆ ಮಧ್ಯಸ್ಥಗುಣಂ ॥ ೩೦ ॥

ವ॥ ಆಗಳ್.

[1] ರಾಗಮಂ, ಗಾಮರಂ. [2] ನಾಲಗೆಯುಕಲ್ತು. [3] ಸಿಪ್ಪಿನ. [4] ದೂಂದುಱಿ (ಎಂದರಬಹುದು).

ಕಂ॥ ದೇವೇಂದ್ರ ನಿಱಿಯಿಸಿದ ನು ।
ದ್ಭಾವವಿಭ್ರಮ ವಿಕಚಕುಂಚಿತಾಲಸದೃಷ್ಟಿ ॥
ಶ್ರೀ ವಿಭವದಿ ನೊಳ್ಗಾವಿನ ।
ಪೂವಿನ ಬಿರಿಮುಗುಳ ನೆಲೆಯ ನೆಯ್ದಿಲ್ಗೊಳನಂ ॥ ೨೧ ॥

ಭಾವಂಗಳ ವಿಭವಮ ನನು ।
ಭಾವಂಗಳ ತುಱುಗಲಂ ವಿಭಾವಂಗಳ ಸ ॥
ದ್ಭಾವಮ ನಖಿಳರಸಂಗಳ ।
ಜೀವನಗಳಿವೆನಿಸಿ ಮೆಱೆದ ನಿಂದ್ರ ನತಂದ್ರಂ ॥ ೨೨ ॥

ಶತಮುಖನ ಸಂಯುತಾಸಂ ।
ಯತಂಗಳಱುವತ್ತು ನಾಲ್ಕು ಹಸ್ತಂಗಳು ಮಾ ॥
ಯತಭುಜದೊಳೆಸೆಯೆ ಕುಣಿವ ।
ಲ್ಲಿ ತಳಿರ್ತ ಮಡಲ್ತಶೋಕತರುವಂ ಪೋಲ್ತಂ ॥ ೨೩ ॥

ಉರಚಲ್ಲಿಯ ಕಟಿಚಲ್ಲಿಯ ।
ಕರಣದ ರೇಚಕದ ಕಣ್ಣ ಕಾಲ್ದುಱುಗಲ ಕಂ ॥
ಧರವಳೆಯದ ಭುಜಚಳನದ ।
ಪರಿಣತಿಯಿಂ ನಾಟ್ಯವೇದಮೂರ್ತಿವೊಲೆಸೆದಂ ॥ ೨೪ ॥

ಮ। ಸ್ರ॥ ಜಿನಪೂಜಾನಂದಮಂದಾನಿಲನಲೆಪದಿ ಸಂದಾಡುತಿರ್ಪೊಂದುಸಂಕ್ರಂ ।
ದನಕಲ್ಪೋರ್ವೀಜದೊಳ್ ರಾಜಿಸಿದುದು ವಿಲಸದ್ಬಾಹುಸಂದೋಹಶಾಖಾ ॥
ವನನಂ ಪಾಣಿಪ್ರವಾಳಪ್ರಚಯವಿಚಳನಂ ಸ್ಪಷ್ಟದೃಷ್ಟಿಪ್ರಭಾಪು ।
ಷ್ಪನಿಕಾಯೋಲ್ಲಾಸ ಮುದ್ಯನ್ಮುಕುಟಮಣಿಫಳಾತುಚ್ಛಗುಚ್ಛಪ್ರಕಂಪಂ ॥ ೨೫ ॥

ಮ॥ ಪದವಿನ್ಯಾಸದಿ ನೆಯ್ದೆ ಕಂಪಿಸೆ ಮಹೀಚಕ್ರಂ ಮಹೀಚಕ್ರಭಾ ।
ರದಿ ನದ್ರಿವ್ರಜ ಮದ್ರಿಸಂಚಳನದಿಂ ದಿಗ್ದಂತಿ ದಿಗ್ದಂತಿ ಜೋ ॥
ಲ್ದುದಱಿಂ ವಾಸುಗಿ ವಾಸುಗಿಕ್ಷುಭಿತದಿಂ ದಾಕೂರ್ಮ ನಾಕೂರ್ಮಕಂ ।
ಪದಿ ನಂಭೋಧಿ ಕಲಂಕಿದತ್ತೆನಿಸಿತೇ ನುಚ್ಚಂಡಮೋ ತಾಂಡವಂ ॥ ೨೬ ॥

ವ॥ ಅಂತು ಮಲ್ಲದೆಯುಂ.

ಮ॥ ವಿಭುಲೋಕಂ ವಿಹಟತ್ಕಿರೀಟಹತಿಯಿಂ ದತ್ತತ್ತ ದಿಗ್ಭಿತ್ತಿ ಭೂ ।
ರಿಭುಜಾದಂಡಸಹಸ್ರಸಂವಳನದಿಂ ದತ್ತತ್ತ ಭೂಭಾಗಮುಂ ॥
ಘ್ರಿಭವಸ್ಫೀತನಿಘಾತದಿಂ ತಳದರ್ದ ದತ್ತತ್ತೆಂಬಿನಂ ರಂಜಿಪಾ ।
ರಭಟೀವೃತ್ತಿಯೊಳುದ್ಧತಾಭಿನಯದಿಂ ಕಣ್ಗೊಂಡ ನಾಖಂಡಳಂ ॥ ೨೭ ॥

ಕಂ|| ದ್ವಿಗುಣಿಸಿದುವು ಶಕ್ರನ ನಿಮಿ ।
ರ್ದೊಗೆವ ಭುಜಂಗಳೆ ನಖಂಗಳಿಂ ಭಗಣಂಗಳ್ ॥
ನೆಗೆದ ನವಗ್ರಹಕಂಕಣ ।
ದ ಗಭಸ್ತಿಗಳಿಂ ನವಗ್ರಹಂಗಳ ರುಚಿಗಳ್ ॥ ೩೮ ॥

ವ|| ಅಂತು ನರ್ತಿಸುತ್ತ ಮಂತಂತ ಪರಮಹರ್ಷ ಪ್ರಕರ್ಷ ಪ್ರಮತ್ತಚಿತ್ತ ನಾವಿರ್ಭೂತ ನೈಕರೂಪಕರಣ ನಾಗಿ.

ಕಂ|| ಎಮೆಯಿಕ್ಕುವನಿತುಬೇಗ ।
ಕ್ಕೆ ಮರುತ್ಪಥದೊಳ್ ದಿಗಂತದೊಳ್ ನೆಲದೊಳ್ ತೋ ॥
ರ್ಪ ಮರೇಂದ್ರ ನೊಂದೆ ರೂಪಿಂ ।
ದಮೆ ತನ್ಮಯ ಮಾಯ್ತು ಜಗದ ಸಚರಾಚರಮುಂ ॥ ೩೯ ॥

ವಸುಧಾಗಗನಸ್ಥತೆ ದೂ ।
ರಸಮೀಪತೆ ಸೂಕ್ಷ್ಮಗುರುತೆ ಶಾಂತೋಗ್ರತೆ ನೀ ॥
ಚಸಮುಚ್ಚತೆ ಯುವತರುಣತೆ ।
ಪಸರಿಸಿತೇಂ ಪಿರಿದೊ ಶಕ್ರವಿಕ್ರಿಯೆ ಯೆಸಕಂ ॥ ೪೦ ॥

ಭ್ರಮೆಗೊಂಡು ಸುಕೇಶಿತಿಲೋ ।
ತ್ತಮೆ ಮೇನಕಿ ಮಂಜುಘೋಷೆ ಯುರ್ವಸಿ ಯೆಂಬೀ ॥
ಪ್ರಮದೆಯ ರಮದೆಯ ರಾದರ್ ।
ತಮಗಿಂದ್ರನ ನಾಟ್ಯ ಮಾಯೆ ಹೃತ್ಕೌತುಕಮಂ ॥ ೪೧ ॥

ಬಳೆರಿಪುವ ನಾಟ್ಯರಸದೊಳೆ ಬಳೆ ।
ದೆಳಲತೆಗಳವೊಲೊಡನೆ ಕುಣಿವ ಮ(ರ್ತ್ಯ)ನಟೀ ॥
ಕುಳ ಮೆಸೆದುದಳಿಗಳಳಕಂ ।
ತಳಿರ್ಗಳ್ ತಳ ಮಲರ್ಗಳಕ್ಷಿ ಯೆನೆ ಜಿನಸಭೆಯೊಳ್ ॥ ೪೨ ॥

ಗೊಂದಣವೆಕ್ಕಣದಮರೀ ।
ವೃಂದಂಗಳ ಬಿಳಿಯ ನಿಡಿಯ ಕಣ್ಗಳ ಬೆಳ್ಪಂ ॥
ಕೆಂದಳದ ಕೆಂಪು ಮಾಂತುವು ।
ಚಂದನಸಿಂಧೂರರಸದ ಪೊಸಕಾಱಿಪ್ಪರಮಂ ॥ ೪೩ ॥

ಶತಮಖನು ಮಮರಿಯರು ಮಾ ।
ಡೆ ತಗುಳ್ದಾರಭಟಿಯಿಂದೆ ಕೈಶಿಕೆಯಿಂ ದು ॥
ದ್ಧತ ಮೆನಿಪ ಲಲಿತ ಮೆನಿಪಭಿ ।
ನುತತಾಂಡವಲಾಸ್ಯ ಮೊಡನೆ ತೋಱಿದು ವೆರಡುಂ ॥ ೪೪ ॥

ಕಂ॥ ನಿಜದಿಂ ಪುಳೋಮಬಳಪಾ ।
ಕಜಂಭನಮುಚಿಗಳನಲೆದ ಜಿಷ್ಣುವ ಪಲರುಂ ॥
ವಿಜಯಶ್ರೀದೇವಿಗಳೆನೆ ।
ಭುಜಕೋಟಿಯೊಳಿರ್ದು ಕುಣಿದ ರಮರಿಯ ರರೆಬರ್ ॥ ೪೫ ॥

ರೋಚಿಸೆ ನಾನಾರಸಭಾ ।
ವೋಚಿತಕರಣಾಂಗಹಾರವಿಧ ವಲ್ಲಿ ಕೆಲರ್ ॥
ಸೂಚಿಸೆ ನಾಟ್ಯಮ ನಾಡಿದ ।
ರಾಚತುರಾಮರಿಯ ರರೆಬ ರಿಂದ್ರನ [1]ನಖದೊಳ್ ॥ ೪೬ ॥

ವ॥ ಮತ್ತಂ.

ಕಂ॥ ಕೆಲವಱೊಳಮರಕುಮಾರರ್ ।
ಕೆಲವಱೊಳಚ್ಚರಸಿಯರ್ಕಳಾಡೆ ಭುಜಾಸಂ ॥
ಕುಲದೊಳ್ ಪುಂಸ್ತ್ರೀಜನಮಯ ।
ಫಲಪನಸ ಮಿದೊಂದಪೂರ್ವಮೆನಿಸಿದ ನಿಂದ್ರಂ ॥ ೪೭ ॥

ವ॥ ಅಂತು ಮಲ್ಲದೆಯುಂ.

ಮ॥ ಅಳಿಯಿಂ ಶಕ್ರನ ವಿಕ್ರಮಾಂಗದ ಪದಪ್ರಾಗ್ಭಾಗದೊಳ್ ಜಾನುವಂ ।
ಡೆಳದೊಳ್ ಸಿಂಹಕಟೀಪ್ರದೇಶದೊಳುರೋವಿಸ್ತಾರದೊಳ್ ಬಾಹುಸಂ ॥
ಕುಳದೊಳ್ ಕೆಂದಳದೊಳ್ ಕರಾಂಗುಲಿಗಳೊಳ್ ನಿಂದಾಡೆ ದೇವಾಂಗನಾ ।
ಕುಳಮುಂ ಸ್ತ್ರೀಮಯ ಮಾಗಿಸಿತ್ತೊ ಮಹಿದಿಗ್ಬ್ರಹ್ಮಾಂಡಮಂ ತಾಂಡವಂ ॥ ೪೮ ॥

ಉ॥ ಆಡುವ ನಾಕನಾಯಕನ ಬಾಹುಸಮೂಹದ ಮೇಲೆ ಲೀಲೆಮೆ ।
ತ್ತಾಡುವ ದೇವಕನ್ನೆಯರ ಭೂಷಣರಶ್ಮಿ ಕಟಾಕ್ಷಕಾಂತಿ ಕೈ ॥
ಗೂಡಿದ ದೇಹದೀಪ್ತಿ ನಭಮಂ ಬಳಸುತ್ತಿರೆ ಲೋಕಮೆಲ್ಲ ಮೋ ।
ಲಾೞುವ ಮಾಱ್ಕೆ ಯಾಯ್ತು ನವನಾಟ್ಯರಸಾಮೃತಸಾರಪೂರದೊಳ್ ॥ ೪೯ ॥

ವ॥ ಅಂತು.

ಮ॥ಸ್ರ॥ ಜನಹರ್ಷೋದಾರಕೇದಾರದ ಶಶಿಗೆ ಸುಧಾಸಾರಮಂ ಸೂಸೆ ದೇವೀ ।
ಜನಗೇಯಂ ಗೇಯಮಂ ನೋಯಿಸಿದನುನಯದಿಂ ಪೊಣ್ಮೆ ನಾನಾಲಯಾಲಂ ॥
ಬನವಾದ್ಯಂ ವಾದ್ಯಮಂ ಹೃದ್ಯಮ ನನುಗತಮಂ ಮಾಡೆ ಗೀರ್ವಾಣವಾಕ್ಯಾ ।
ಭಿನುತಶ್ರೀಲಾಸ್ಯಮಂ ಲಾಸ್ಯದೊಳಮರ್ದೆಸೆದತ್ತಿಂದ್ರನಾನಂದನೃತ್ಯಂ ॥ ೫೦ ॥

ವ॥ ಅಂತು.

---

[1] ಕರದೊಳ್.

ಮ॥ ರಸಿಕರ್ ಬಣ್ಣಿಸೆ ಭಾವಕರ್ ಪೊಗೞೆ ಜಾಯಾಜೀವಿಗಳ್ ಕೂರ್ತು ಕೀ।
ರ್ತಿಸೆ ತಜ್ಜ್ಞರ್ ತಲೆದೂಗೆ ದೇವಸಭೆ ಸಂತೋಷಕ್ಕೆ ಪಕ್ಕಾಗೆ ತ॥
ದ್ವಸುಧೇಶಂ ಬೆಱಗಾಗೆ ಮಚ್ಚಿ ಮೆಱೆದಂ ಮಿಕ್ಕಿಂತು ಸಂಕ್ರಂದನಂ।
ರಸಭಾವಾಂಗಿಕವಾಚಿಕಾಭಿನಯಲೀಲೋತ್ಪಾಟ್ಯಮಂ ನಾಟ್ಯಮಂ ॥ ೫೧ ॥

ಕಂ॥ ಮಚ್ಚುಮುಳಿಸಿಲ್ಲದಭವಂ।
ಮಚ್ಚುವುದದು ಕೂಡದೆನಗೆ ನಟವೃತ್ತಿ ಕರಂ॥
ತುಚ್ಚತನ ವೆನ್ನದಾಡಿದ।
ನಚ್ಚರಿ ಯೆನೆ ವಜ್ರಿ ಭಕ್ತಿವಶ ರೇಗೆಯ್ಯರ್ ॥ ೫೨ ॥

ವ॥ ಅಂತು ನರ್ತಿಸಿದ ನರ್ತನ ದನಂತರ ಮನಂತಮಂಗಳೋಪಕರಣಪರಿಚಿತ ಮಾಗೆ ನಾಮಕರಣಕಲ್ಯಾಣದೊಸಗೆಯುಮ ನಸದಳಂಮಾಡಿ.

ಕಂ॥ ಪ್ರವಿತತಪುಣ್ಯೋದಯದಿಂ।
ಭುವನಸ್ತುತಸುಕೃತಿ ಯೆನಿಪ ಕುವಳಯಕಮಳೋ॥
ತ್ಸವಕರ ನೆನಿಪೀಸ್ವಾಮಿಗೆ।
ಸುವಿಧಿಪೆಸರ್ ಪುಷ್ಪದಂತಪೆಸರನ್ವರ್ಥಂ ॥ ೫೩ ॥

ವ॥ ಎಂದು ಪೆಸರ ನಿಟ್ಟು.

ಕಂ॥ ಗೋತ್ರಾರಿ ಬಸಸೆ ನೆಗೞ್ದಿಪ।
ಗೋತ್ರಾರಿಯ ಶೈಶವೋಚಿತಕ್ರಿಯೆಗೆಲ್ಲಂ॥
ಧಾತ್ರೀಜನಮಾಗಿಸಿದಂ।
ಧಾತ್ರೀಜನಚಾರುಚತುರದೇವೀಜನಮಂ ॥ ೫೪ ॥

ವ॥ ಮತ್ತಂ.

ಕಂ॥ ಓರಗೆಗಳಪ್ಪ ಬಹುವ್ಯಂ।
ದಾರಕದಾರಕರ ನಂದು ಸಹಪಾಂಸುಕ್ರೀ॥
ಡಾರಸದೊಳ್ ಸಮುಚಿತಸೇ।
ವಾರತಿಯೊಳ್ ನೆಱೆದು ನೆಗೞೆ ನಿರವಿಸಿ ಮತ್ತಂ ॥ ೫೫ ॥

ಸೆಜ್ಜೆವಳರ್ ಬಾಣಸಿಗರ್।
ಮಜ್ಜನವಳ ರಣಿಗ ರಂಗರಕ್ಷಕ ರಾಗಿ॥
ರ್ಪುಜ್ಜುಗ ಕಮರರ ಗಣಮನೆ।
ಪಜ್ಜತಿಯಿಂ ದಿರಿಸಿ ಶತಮುಖಂ ಕೃತಕೃತ್ಯಂ ॥ ೫೬ ॥

ಹರಿಣೀವೃತ್ತಂ॥ ಪರಮಗುರುವಂ ಬೀೞ್ಕೊಂಡಿಂದ್ರರ್ಕಳಂ ಗಡೆಗೊಂಡು ಸೌಂ ।
ದರಿಯನೊಡಗೊಂಡೆಡ್ಡಂ ಕೈಕೊಂಡು ನಾಕದ ಬಟ್ಟೆಗೊಂ ॥
ಡಿರದೆ ನಡೆಗೊಂಡಾರೂಢೈರಾವತದ್ವಿಪನೆಯ್ದಿದಂ ।
ತ್ವರಿತಗತಿಯಿಂ ಶ್ರೀಯುಕ್ತ್ರೀತಲ್ಪಮಂ ನಿಜಕಲ್ಪಮಂ ॥ ೫೭ ॥

ವ॥ ಅಂತಿಂದ್ರ ನಿಂದ್ರಲೋಕಕ್ಕೆ ಪೋಪುದು ಮಿತ್ತಲ್.

ಚಂ॥ ಭುವನದ ಪಾಪತಾಪ ಮಗಿಯಲ್ ಪುಗಿಯಲ್ ಕರಕಂಜಪುಂಜ ಮೊ ।
ಪ್ಪುವ ವೃಷವಾರ್ಧಿ ವೃದ್ಧಿವಡೆಯಲ್ ಸೆಗೆಯಲ್ ದುರಿತಾಂಧಕಾರಗೌ ॥
ರವಮಿರೆ ತನ್ನಶೈಶವಗುಣೋದ್ಗಮದಿಂ ಕ್ರಮದಿಂದ ಮೇೞ್ಗೆವಾ ।
ಡಿವದೆಳದಿಂಗಳಂತೆ ಬಳೆದಂ ತಳೆದೊಂದೊದವಂ ಜಿನಾರ್ಭಕಂ ॥ ೫೮ ॥

ಕಂ॥ ಸಂಕ್ರಂದನನಿಹಿತಸುಧಾ ।
ಸಂಕ್ರಮಣಮ ನಾತ್ಮಹಸ್ತಮಧ್ಯಾಂಗುಳಿಯಂ ॥
ತಾಂ ಕ್ರಮದೆ ಪೀರುತಂ ತಣಿ ।
ದಂ ಕ್ರೀಡಾಮುದಿತಜನಕಜಸೀಹೃದಯಂ ॥ ೫೯ ॥

ಕೆಂದಾವರೆ ಯೆಳವಳ್ಳಿಯ ।
ಗೊಂದಣದೊಳ್ ಸುೞಿವ ಹಂಸಬಾಳಕನವೊಲಾ ॥
ನಂದದೆ ತಮುತಮ ಗೆತ್ತುವ ।
ಕೆಂದಳದಮರಿಯರ ತೋಳ ತುಱುಗಲೊಳೆಸೆದಂ ॥ ೬೦ ॥

ಪರೆದಿರೆ ಕಜ್ಜಳದಳಕಂ ।
ತರುಣನ ಮೊಗ ಮುದಿತವಿದಿತಲಾಂಛನಶಶಿಯೊಳ್ ॥
ದೊರೆಯಾಗಿ ಮೆಱೆದು ಗೆಲ್ದು ।
ತ್ತುರುಚಳನಳಿಮಿಳಿತದಳಿತ ಲಳಿತಾಂಬುಜಮಂ ॥ ೬೧ ॥

* ಕಂ॥ [ಬಗೆಯೆ]ಮಧುಪಪ್ರಶಸ್ತಂ ।
ನೆಗೞ್ದಾಱಿದಾಣ ಮ ಬ್ಜ ಮೆನಗಡಱುವುದೇ ॥
ಕೆ ಗಡೆಂದು ನಗುವ ತೆಱದಿಂ ।
ಸೊಗಯಿಸಿ ತನಿಮಿತ್ತಹಸಿತಲಸಿತಮುಖಾಬ್ಜಂ ॥ ೬೨ ॥

ಅತಿಸೇವ್ಯದಿವ್ಯಭಾಷಾ ।
ಲತೆಗಗೆವೊಯ್ದರ್ಥಬೀಜದಳವೊಳೆಯಂತೇಂ ॥
ಸ್ಮಿತರಸದೊಳೆಸೆವ ಪನೆಗಳ್ ।
ಜಿತಮದನನ ವದನದೊಳ್ ಮನಂಗೊಳಿಸಿದುವೋ ॥ ೬೩ ॥

* ಮೂಲಪ್ರತಿಗಳಲ್ಲಿ ಈ ಕಂದದ ಆರಂಭದಲ್ಲಿ "ಸ್ವಾಗತವೃತ್ತಂ" ಎಂದು ಬರೆದಿದೆ.

ಕಂ॥ ಹದಪಿನ ದಾದಿಯರ ಮನ ।
ಕ್ಕಿದಿಷ್ಟಮೆನೆ ಮುದ್ದುನುಡಿಯು ನಿನಿಸೆಸಗಿದ ನಂ ||
ತದು ತಕ್ಕುದೆ ಧಾತ್ರೀಜನ ।
ಹೃದಯಪ್ರಿಯಹಿತಮಿತೋಕ್ತಿ ಜಿನಪತಿಗೆರವೇ ॥ ೬೪ ॥

ಅನುಪಾಂಶುಕೇಳಿ ಸದ್ಗುರು ।
ಜನಕ್ಕೆ ಸಂತಸಮ ನೀವುದೆಂದಱಿವುವವೋ ||
ಲನುಪಾಂಶುಕೇಳಿ ಸದ್ಗುರು ।
ಜನಕ್ಕೆ ಸಂತಸಮ ನೀಯೆ ಬಾಳಕ ನೆಸೆದಂ ॥ ೬೫ ॥

ಅಳರೆಲೆಗಳಲುಗೆ ಮಾಂಗಾಯ್ ।
ಚಳಿಯಿಸೆ ಕಿಂಕಿಣಿಗಳುಲಿಯೆ ಶಿಶು ನಡೆಗಲ್ವಂ ॥
ದಿಳಿಸಿದ ನೆಳಲದಳಿರುಚ್ಚಳಿ ।
ಪೆಳಮಿಡಿ ತೊನೆವಳಿಗಳುಲಿವ ನವಸುರತರುವಂ || ೬೬ ||

ಮೆಟ್ಟಿದೊಡಕ್ಕುಂ ತ್ರಸಸಂ ।
ಘಟ್ಟನ ಮೆಂದೋವುವಂತೆ ಮೆಲ್ಮೆಲನನಘಂ ॥
ದಟ್ಟಡಿಯಿಡೆ ಪದನಖರುಚಿ ।
ಕುಟ್ಟಿಮದೊಳ್ ನಿಮಿರ್ದು ಪೊಡನೆ ಪಡಿಲೇಖಿಪವೋಲ್ ॥ ೬೭ ॥

ವ|| ಅಂತಗಣ್ಯಪುಣ್ಯವಲ್ಲರೀಜಾಲಕ ನೆನಿಪ್ಪ ಬಾಲಕಂ ವಿವಿಧಮುಗ್ಧಭಾವಪಾಲ್ಯಮಂ ಬಾಲ್ಯಮಂ ಪಿಂಗಿಸಿ ಕುಮಾರಕಾಲದೊಳ್.

ಮ॥ ಸಮಸಂದೋದದೆ ಸರ್ವಶಾಸ್ತ್ರವಿದ ನಾದಂ ಬಲ್ಲರೊಳ್ ಕಲ್ಲದೆ ।
ಲ್ಲಮ ನಕ್ಷೂಣಕಳಾವಳೀಕುಶಲ ನಾದಂ ಪುಷ್ಪದಂತಂ ಭವೋ ॥
ತ್ತಮಸಂಸಾರ ನದಾವಚೋದ್ಯ ಮಲಗರ್ಳಗ್ಗಂಪುಂ ಶಶಾಂಕಂಗ ಶೈ ।
ತ್ಯಮು ಮುಷ್ಣಾಂಶುಗೆ ತೇಜಮುಂ ನಿಜ ಮವಂ ಮತ್ತೋರ್ವರಾರ್ ಮಾಡಿದರ್॥ ೬೮ ॥

---

* ಬಾಲದುಡುಗೆಯಲ್ಲಿ ‹ ಅರಳೆಲೆ” ಎಂಬುದೊಂದಂದು ಕವಿಗಳು ಕಾವ್ಯಗಳಲ್ಲಿ ವರ್ಣಿಸಿರುವರು. ಈಶಬ್ದಸ್ವರೂಪದಲ್ಲಿ ಒಬ್ಬೊಬ್ಬರು ಒಂದೊಂದು ಬಗೆಯಲ್ಲಿ ಪ್ರಯೋಗಿಸಿರುವರು. ಕವಿರುದ್ರನು, ಜಗನ್ನಾಥವಿಜಯದಲ್ಲಿ “ಸೊಸಲಕಣ್ವೊಲರಲೆಲೆ ಯೆಸೆಗುಂ” ಎಂದು ಪ್ರಯೋಗಿಸಿರುವನು, ಆದರೆ ಇದು ಪ್ರಾಸಸ್ಥಳವಲ್ಲ.

ನಾಗಚಂದ್ರನು, ಮಲ್ಲಿನಾಥಪುರಾಣದಲ್ಲಿ ಪ್ರಾಸಸ್ಥಾನದಲ್ಲಿ.

ಅಳರೆಲೆಪೊಂಗುನೂಲ್........ಸಂ। ದಳೆಯುಗ .... . ॥
ಕಳಮಹಿನೂಪುರ........ಮನಂ । ಗೊಳಿ... .. ||

ಎಂದು ಪ್ರಯೋಗಿಸಿರುವನು. ಈ ಕವಿಯುಕೂಡ ಕುಳಕ್ಷಳಾಕ್ಷರಪ್ರಾಸದಲ್ಲಿಯೇ ಪ್ರಯೋಗಿಸಿರುವುದರಿಂದ ಅಳರೆಲೆಎಂಬ ಶಬ್ದವೇ ಗ್ರಾಹ್ಯವೆಂದು ತೋರುವುದು.

ಮ॥ ಸಕಳವ್ಯಾಕರಣಾರ್ಥಶಾಸ್ತ್ರಗಣಿತಾಲೇಖ್ಯಕ್ರಿಯಾಕಾವ್ಯನಾ ।
ಟಕನಾಟ್ಯಾಗಮವಾಸ್ತುವೈದ್ಯಗಜವಾಹಾರೋಹಸಾಮುದ್ರಿಚಿ ॥
ತ್ರಕಳಾನೀತಿನಿಮಿತ್ತ ಶಾಸ್ತ್ರಶಕುನಾದಿಪ್ರೌಢಿಯೊಳ್ ರೂಢಿ ಯಾ ।
ಯ್ತು ಕುಮಾರಂಗೆ ಮತಿಶ್ರುತಾವಧಿವಿಬೋಧಾತ್ಮಂಗಿದಾಶ್ಚರ್ಯಮೇ ॥ ೧೯ ॥

ವ॥ ಅಂತು ಸಕಳವಿದ್ಯಾವಿಳಾಸಭವನನಾಗೆ.

ಚಂ॥ ಸುವಿಧಿಕುಮಾರನಂ ಸುರಕುಮಾರಕರಚ್ಚರಿಯಾಗೆ ಮೆಚ್ಚಿಪು ।
ತ್ಸವದೊಳೆ ಮಲ್ಲಮೇಷಮಹಿಷದ್ವಿಪಲಾವಕರೂಪರಾಗಿ ಸಂ ॥
ಭವಿಸಿದ ವಿಕ್ರಿಯಾವಿಭವದಿಂದೆ ವಿಗುರ್ವಿಸಿ ಬಂದು ಪೋರ್ವ ತಾ ।
ಗುವ ತಲೆಯಿಕ್ಕುವಾಂತಿಱಿವ ಕಾದುವ ದಂದುಗದಿಂಪ ಮೊಪ್ಪಿದರ್ ॥ ೨೦ ॥

ಚಂ॥ ಅರಗಿಳಿಯಾಗಿ ಮಂಗಳಮನೋದುವ ತುಂಬಿಯ ಬಂಬಲಾಗಿ ಗಾ ।
ವರಿಸುವ ಗಂಡುಗೋಗಿಲೆಗಳಾಗಿ ಗೃಹಪ್ರತಿಹಾರವೃತ್ತಿ ಮಿ ॥
ಕ್ಕಿರೆ ಪುಗಲೆಂಬ ಸೋಗೆನವಿಲಾಗಿ ವಿನರ್ತಿಸು ವಂಚೆಯಾಗಿ ಸಂ ।
ಚರಿಪ ವಿಳಾಸಮಂ ಮೆಱೆವ ದೇವರೊಱಲ್ಚಿದರಿಂದ್ರವಂದ್ಯನಂ ॥ ೨೧ ॥

ವ॥ ಮತ್ತಂ.

ಕಂ॥ ಬಹುವಿಧವಾಹನರೂಪದಿ ।
ನಹಮಿಕೆಯಂ[1] ಬಿಟ್ಟು ರಮ್ಯ ಮಪ್ಪೆಡೆಗಳೊಳಾ ॥
ಗ್ರಹದಿಂ ದೊಯ್ದೊ[2]ಯ್ದುರೆಬರ್ ।
ವಿಹಿತವಿನೋದಕ್ಕೆ ಪಕ್ಕುಮಾಡಿದ ರಮರರ್ ॥ ೨೨ ॥

ಚಂ॥ ಸಮದಮಯೂರ ಮಾಕ್ರಮಿಪ ಪೆರ್ಬುಲಿ ಯಾಕ್ರಮಿಪುಗ್ರಸಿಂಹ ಮಾ ।
ಕ್ರಮಿಪಹಿರೂಪದಿಂದೆ ಹರಿಣಾಕೃತಿಯಿಂ ದಿಭಮೂರ್ತಿಯಿಂದೆ ಸಂ ॥
ಭ್ರಮಿಸೆ ಶರಣ್ಗೆ ವಂದ ವಿಕೃತಾಮರರಂ ಪರಿರಕ್ಷೆಗೆಯ್ಸಿತು ।
ತ್ತಮ ಕರುಣಾರಸಂ ವನವಿಹಾರವಿನೋದದೊಳಿಂದ್ರವಂದ್ಯನಾ ॥ ೨೩ ॥

ವ॥ ಅದಲ್ಲದೆಯುಂ.

ಕಂ॥ ಓರಂತೆ ಮಜ್ಜನಂಬುಗ ।
ಲಾರೋಗಿಸಲುಡೆ ತುಡಲ್ ತುಱುಂಬಲ್ ಪೂಸಲ್ ॥
ಸಾರಿರ್ದನುವಿಪ ಸುರವ್ರಂ ।
ದಾರಕರಿಂ ಸಂದು ವಂದು ನಿತ್ಯಕ್ರಿಯೆಗಳ್ ॥ ೨೪ ॥

[1] ಅಹಮಹಮಿಕೆ ಎಂಬುದನ್ನು ಅಹಮಿಕೆಯೆಂದು ಪ್ರಯೋಗಿಸಿರುವನು. [2] ಯ್ದನಿಬರ್.

ಮ|| ಅಮೃತಾಹಾರಮ ನುಂಡು ದಿವ್ಯಸುರಭಿದ್ರವ್ಯಂಗಳಂ ಪೂಸಿ ಕ |
ಲ್ಪಮಹೀಜಂಗಳ ಮಾಲೆಯೊವ ನವತಂಸಂಮಾಡಿ ದೇವಾಂಗವ ||
ಸ್ತ್ರಮ ನುಟ್ಟಗ್ಗದ ಸಗ್ಗದಾಭರಣಮಂ ತೊಟ್ಟಂತು ನಿಚ್ಚಂ ಶಚೀ |
ರಮಣಪ್ರೇಪಿತವಸ್ತುವಿಂ ಸಲಿಸಿದಂ ಭೋಗೋಪಭೋಗಂಗಳಂ || ೭೫ ||

ವ|| ಅಂತು ಸಮುಚಿತಕ್ರಿಯಾನಿಯೋಗದೊಳ್ ನಿಳಿಂಪನಿಕರ ಮೋಲೈಸೆ ನಿರಂತರೋಪ
ಚಯದಿಂದ ಮಂತಂತೆ ಸಂಪೂರ್ಣನಾಗಿ.

ಕಂ|| ಅಮಳತೆ ಯನಂತವೀರ್ಯತೆ |
ಸಮಚತುರಸ್ರಪ್ರಶಸ್ತಸಂಸ್ಥಾನತೆ ಯು ||
ತ್ತಮವಜ್ರವೃಷಭನಾರಾ |
ಚಮಹಾಸಂಹನನದೃಢತೆ ಸೌಮ್ಯತೆ ಮತ್ತಂ || ೭೬ ||

ಸುಸ್ವಾದುಧವಳರುಚಿರತೆ |
ನಿಸ್ವೇದೋದ್ಗಮತೆ ಸುರಭಿಗಂಧತೆ ಗಂಭೀ ||
ರಸ್ವರತೆ ಸುಲಕ್ಷಣತೆ ವಿ |
ಭಾಸ್ವರ ಮಿಾದಶವಿಧಸ್ವಭಾವಾತಿಶಯಂ || ೭೭ ||

ಸ್ಫುರಿಯಿಸೆ ತನ್ನೊಳ್ ಪರಮನ |
ಪರಮೌದಾರಿಕಶರೀರ ಮೊಪ್ಪಿದುದು ಸುಧಾ ||
ಪರಿಪಾಂಡುವರ್ಣದಿಂ ಸುರ |
ನರನಯನಚಕೋರಚಂದ್ರಬಿಂಬ ಮಳುಂಬಂ || ೭೮ ||

ವ|| ಅಲ್ಲಿ ತಿಲಮಸೂರಿಕಾಪ್ರಮುಖನವಶತವ್ಯಂಜನಂಗಳೊಳ್ ಕೂಡಿ.

ಕಂ|| ಶ್ರೀವೃಕ್ಷಸ್ವಸ್ತಿಕನಂ |
ದ್ಯಾವರ್ತಚ್ಛತ್ರಚಾಮರಾದ್ಯಂ ನೂಱೆಂ ||
ಟಾವರಿಸೆ ಸೊಗಯಿಸಿದುರ್ವು |
ದೇವನ ಲಕ್ಷಣ ಮವಿಂತು ಸಾಷ್ಟಸಹಸ್ರಂ || ೭೯ ||

ವ|| ಮತ್ತಂ.

ಉತ್ಸಾಹವೃತ್ತಂ|| ಶೀತವಾತವಿದ್ಯುದಾತಪಾಗ್ನಿಕಾಷ್ಠಕಂಟಕ |
ವ್ರಾತಖಗಮೃಗೋರಗೋಪಳಾಭಿಘಾತಶಸ್ತ್ರಸಂ ||
ಘಾತಗರಳವನಚರಾದಿಬಾಧೆ ಪೊರ್ದ ದೆಂಬ ವಿ |
ಖ್ಯಾತಿವೆತ್ತು ಪರಮಚರಮದೇಹ ಮೆಸೆದು ದಸದಳಂ || ೮೦ ||

ವ॥ ಅಂತಷ್ಟೋತ್ತರಸಹಸ್ರಲಕ್ಷಣೈಕಪೂರ್ಣಮುಂ, ಕುಂದೇಂದುದಾಮಧವಳವರ್ಣಮುಂ ಶತಶರಾಸನೋತ್ಸೇಧಪರಿಮಾಣಮುಂ, ದ್ವಿಲಕ್ಷಪೂರ್ವಪರಮಾಯುಃಪ್ರಮಾಣಮುಂ, ನಿರಂತರ ಸುಖಾನುಭವಜನ್ಮಭೂಮಿಯುಂ, ನಿಸರ್ಗಮಹಿಮಾತಿಶಯಗುಣಾನುಗಾಮಿಯುಮೆನಿಪ್ಪ ಮೂರ್ತಿಯಿಂ ಸ್ಫೂರ್ತಿವಡೆದಿರ್ಪಲ್ಲಿ.

ಮ॥ ಎಳಮಾವಂ ಪೊಸಸುಗ್ಗಿ ಸುಗ್ಗಿಯಿರುಳಂ ಶೀತಾಂಶು ಶೀತಾಂಶುಮಂ ।
ಡೆಳಮಂ ಚಂದ್ರಿಕೆ ಚಂದ್ರಿಕೋಚ್ಚಳಿತದುಗ್ಧಾಂಭೋಧಿಯಂ ಫೇನಮಂ ॥
ಡೆಳೆ ಚೆಲ್ವಿಂ ಗೆಡೆಮಾಡುವಂತಿರೆಡೆಮಾಡಿತ್ತಂಗನಾಲೋಚನೋ ।
ತ್ಪಳಮಾಲಾರ್ಚಿತ(ಮಂ)ಕುಮಾರನ ಜಗತ್ಸೇವ್ಯಾಂಗಮಂ ಜವ್ವನಂ ॥ ೮೧ ॥

ಮ॥ ಸ್ಮರಸಂತಾಪಮನುಂತೆ ಮಾಡಿದೆಳವೆಂಡಿರ್ಗಿತ್ತನಂತಾಗುಣಾ ।
ಭರಣಂ ತಾಂ ಬಸಮಾದುದಿಲ್ಲವರ ಸೌಂದರ್ಯಕ್ಕಿದಾಶ್ಚರ್ಯ ಮು ॥
ಲ್ತರುಣಾಶ್ಮಂ ನಿಜರಶ್ಮಿಯಿಂ ಸ್ಫಟಿಕಮಂ ರಾಗಾತ್ಮಕಂಮಾಳ್ಕು ಮಾ ।
ಸ್ಫುರಿತಸ್ಫಾಟಿಕದೀಪ್ತಿ ಶೋಣಮಣಿಯಂ ಪಾಂಡೂಕೃತಂಮಾಳ್ಕುಮೇ ॥ ೮೨ ॥

ಹರಿಣೀವೃತ್ತಂ॥ ಕಟಿಲ ನಳಲಂ ಬಾಡಂ ಕೋಡಂ ಹಿಮಾತಪಬಾಧೆಯಿಂ ।
ಬಟಿಲ ನೆಳಲಂ ನೋಯಂ ಬೇಯಂ ಮನೋಜಶರಾಗ್ನಿಯಿಂ ॥
ಕುಟಿಃಯ ನಟಿಃಯುಂ ಕಂದಂ ಕುಂದಂ ಕ್ಷುಧಾತಿತೃಷ್ಣಾರ್ತಿಯಿಂ ।
ದುಟಿಃದ ಜನನಜ್ವಾಲಾ[1]ಮಾಳಾಪ್ರತಪ್ತರವೋಲ್ ಜಿನಂ ॥ ೮೩ ॥

ವ॥ ಮತ್ತಂ.

ಕಂ॥ ಆಗುಳಿಸುವ ತಳಮಳಿಸುವ ।
ಜೋಗಂಬೋಪ ಲಸುವಗಿವ ತೊಂಕಡಿಸುವ ಬಿ ॥
ಳ್ತಾಗುವ ಬಿಕ್ಕುವ ತೇಂಕುವ ।
ತೇಗುವ ಕಂಟಳಿಸುವಖಿಳವಿಕೃತಿಗೆ ಸಲ್ಲಂ ॥ ೮೪ ॥

ವಂದಿಪ ನಿಂದಿಪ ಮೋಹಿಪ ।
ಸಂದೇಹಿಪ ಪುಸಿವ ಕುಸಿವ ಬೆಸೆಪೊಸೆವ ಮನಂ ॥
ಗುಂದುವ ಮಲೆವಲೆವೊಂದುಂ ।
ದಂದುಗದೊಳಗೆ ಸಗ ನೆಲ್ಲಿಯುಂ ಮುನಿಮಾರ್ಗಂ ॥ ೮೫ ॥

ವ॥ ಅಂತು.

ಉ॥ ಆವಂ(ಗಂ)ಜಿತಮೋಹ ನೀಜಿನ ನಜೇಯಂ ಸಲ್ಲದಿನ್ನಿಲ್ಲಿ ವೈ ।
ರಾವಷ್ಟಂಭವಿಡಂಬವೆಂದತನು ದೇವಂಗಳ್ಗೆ ತದ್ರೂಪಮೀ ॥
ಕ್ಷಾವಿಭ್ರಾಂತೆಯುರಪ್ಪ ಕಾಂತೆಯುರ ನೆಚ್ಚಾವಿಷ್ಕೃತಂಮಾಡಿದಂ ।
''ದೇವಂಗಾಱಿದೆ ಧರ್ಮಿಯಂ [2]ಬಡಿದರೆಂ''ಬೀಸಂದ ನಾಟಿಜ್ಞಾದೆಯುಂ ॥ ೮೬ ॥

[1] ಜಾಲಪ್ರ. [2] ಸದೆದರೆಂಬೀ.

ವ॥ ಅಂತು ಮಲ್ಲದೆಯುಂ.

ಕಂ॥ ಅಸವಸದಿ ನಬಲೆಯುರ ನೆ ।
ಚ್ಚಿಸನೆ ಕುಮಾರನ ನಿದೇನೊ ಮಾರನ ಬಗೆ ಭಾ ॥
ವಿಸಿದೆಂ "ಬಡವಂ ಬಡಿದಂ ।
ಜಿಸುವಂ ಬಳ್ಳಿತ್ತು"ನೆಂದ ನಕ್ಕುಂ ಭ್ರಾಂತಂ ॥ ೮೭ ॥

ಉ॥ ಕಾತರ ನನ್ಯದೇವರವೊಲಟ್ಟಿಗು ವೀಜಿನ ನೆಂದು ಬಂದು ಹೃ ।
ಜ್ಜಾತನಿದಿರ್ಚಿ ಸೋಲ್ತು ಮಕರಧ್ವಜಮಂ ಬಿಸುಟೋಡಿ ಪೋಗೆ ವಿ ॥
ಖ್ಯಾತಿಯ ಪುಷ್ಪದಂತ ನದ ನೀಳ್ಕುಟಿಗೊಂಡುದ ನಾವೆ ಪೇಟಿದಂ ।
ದೇತೊದಳೆಂಬಿನಂ ಮಕರಲಾಂಛನ ನಾದುದು ತಾನೆ ಪೇಟಿದೇ ॥ ೮೮ ॥

ವ॥ ಎನೆ ಜನಮನೋಹಾರಿಯಾದ ಮೋಹಾರಿಯ ನವಯವ್ವನವಿಳಾಸಾವಳಂಬನಮುಮಂ, ನಿಸರ್ಗನಿಃಕಾಂಕ್ಷತಾಳಂಬನಮುಮಂ, ಕಂಡು ಸುಗ್ರೀವಮಹಾರಾಜ ನೊಂದುದಿವಸ ಮಾತ್ಮವಲ್ಲಭೆಯುವದನಾರವಿಂದಮಂ ನೋಡಿ.

ಮ॥ ಜಯಮಂ ಕಂತುಗೆ ಮಾಟ್ಪಿ ಜವ್ವನದೊಳಂ ವೈರಾಗ್ಯ ಮುದ್ದೀಪನ ।
ಕ್ರಿಯೆ ತಾನಾಗಿರೆ ಕಾಮಭೋಗಸುಖಮೆಂಬಾಳಾನದೊಳ್ ನಿಲ್ಲದೊ ॥
ಟ್ಟಯಿಪೀಪುತ್ರ[ನ]ಚಿತ್ತಮತ್ತಗಜಮಂ ಸೀಮಂತಿನೀಶೃಂಖಳಾ ।
ನಿಯತಂಮಾಡುವುಪಾಯ ಮಾವುದಱೆಯೆಂ ಪಂಕೇಜಪತ್ರೇಕ್ಷಣೇ ॥ ೮೯ ॥

ಉ॥ ಈವಿಭು ಕಾಮಭೋಗಮ ನುಪೇಕ್ಷಿಸೆ ಕಾಮನ ಗಂಡು ಬೆಂಡು ಕೇ ।
ಳೀವನಲೀಲೆ ಪಾಟಿಟ್ ವಿಷಯದೊಟ್ಟಜೆ ಮೊಟ್ಟೆ ಸಿತಂಬಿನೀವಪುಃ ॥
ಶ್ರೀ ವಿಫಲಂ ವಸಂತದೆಸಕಂ ವೃಥೆ ಚಂದ್ರನ ದರ್ಪ ಪೊಪ್ಪದಂ ।
ಬಾವುದು ಮೇಣೊ ಲೋಕದನಿತುಂ ವ್ಯವಹಾರ ಮಸಾರ ಮಾಗದೇ ॥ ೯೦ ॥

ಕಂ॥ ಅದಱಿಂದ ವಿಾಮಹಾತ್ಮಂ ।
ಮದುವೆನಿಲಲ್ವೇಟಿಕ್ಕು ಮಂತು ನಿಂದೊಡೆ ರಾಜ್ಯಾ ॥
ಭ್ಯುದಯ ಮುಳಮಡುಗು ಮುಳವಡೆ ।
ಪದುಳಂ ಲೋಕಕ್ಕೆ ಧರ್ಮಸಂತತಿ ನಿಲ್ಕುಂ ॥ ೯೧ ॥

ವ॥ ಎಂದು ನುಡಿದಿರ್ವರುಂ ಗೀರ್ವಾಣಪೂಜ್ಯ ಮಪ್ಪ ನಿರ್ವಾಣಪದವಿಗೆ ಪಲುಂಬಿ ನಿಜಾಪತ್ಯನಪತ್ಯಫಲಸಂಕಲ್ಪಕಲ್ಪನಿಯುಮಮಪ್ಪ ತಮ್ಮನುಷ್ಠಿತಕ್ಕನುಮತಮ ನೀಗು ವಿಾಯ ನೆಂಬ ಸಂದಿಗ್ಧದದಂದುಗದೊಳಾಂದೋಳಚಿತ್ತರಾಗುತ್ತು ಮೆಟ್ಟಿಂದು ವಿನತವಿಷ್ಟಪನ ಕೆಲದೊಳುಚಿತವಿಷ್ಟರೋಪವಿಷ್ಟರಾಗಿ ವಿಹಿತವಿನೇಯಕ್ರಿಯಾನಿಯೋಗದಿಂದ ಮಿರ್ದು.

ಚಂ॥ ಜನಪರಿತಾಪಲೋಪಿಯ ಸುವೃತ್ತವಿಳಾಸನ ನಿರ್ಮಳಸ್ವಭಾ ।
ವನ ಭುವನಸ್ತುತಾತ್ಮನ ಮಹಾತ್ಮಗುಣಾರ್ಹನ ನಿನ್ನ ಜನ್ಮದಿಂ ॥
ಜನನುತರಾದೆ ವಾ ವಮಳಮೌಕ್ತಿಕರತ್ನ[ಕೆ]ಜನ್ಮಭೂಮಿ ಯಾ ।
ದನುಪಮಶುಕ್ತಿಸಂಪುಟದವೋಲ್ ಸುರಶೇಖರರತ್ನಪೂಜಿತಾ ॥ ೯೨ ॥

ಕಂ॥ ದೇವನಿಜೋದಯುದಯುದಿಂ ।
ಪಾವನಮಾಗಿರ್ದ ಪೂಜ್ಯರೆನಿಸಿದೆ ಮಾ ವಿಂ ॥
ತಾವನ ತಾಯ್ಗಂ ತಂದಗ ।
ಮಾವಗ ಮೆಱಗಿದುದೆ ಸುರನರೋರಗಲೋಕಂ ॥ ೯೩ ॥

ಉ॥ ನೀನೆ ಸಮಸ್ತವಿಷ್ಟಪಹಿತಾರ್ಥಚರಿತ್ರನೆ ನೀನೆ ಲೋಕರ ।
ಕ್ಷಾನಿಯಮೈಕಯಾಮಿಕನೆ ನೀನೆ ಜಗತ್ರಯಸೂತ್ರಧಾರವಿ ॥
ಜ್ಞಾನನೆ ದೇವ ನಿನ್ನಱಿತದಿಂ ಪೊಱಗಿಲ್ಲ ಪದಾರ್ಥ ಮಾದೊಡಂ ।
ಮಾನಿತ ಮಕ್ಕೆ ಬಿನ್ನಪಿಪೆ ವಾ ವಿನಿಸಂಜದೆ ಪೆತ್ತ ಮೇಳದಿಂ ॥ ೯೪ ॥

ಮ॥ ಬಹುಜಲ್ಪಂ ವೃಥೆ ಧರ್ಮಸಂತತಿನಿಮಿತ್ತಂ ಧರ್ಮ ಪತ್ನೀಪರಿ ।
ಗ್ರಹಮಂ ಕೈಕೊಳವೇೞ್ಪುದಲ್ಲದೊಡೆ ಲೋಕಕ್ಕಿಲ್ಲ ನಿಸ್ತಾರ ಮೀ ॥
ವಿಹಿತಪ್ರಾರ್ಥನೆಗಿಂಬುಗೆ [1]ಯ್ವುದೆಮಗೆಂದೆಲ್ಲಂದದಿಂ ಮಾಣದಾ ।
ಗ್ರಹಮಂ ಮಾಡಿದ ತಾಯ್ಗೆ ತಂದಗಿನಿಸಂ ಸನ್ನೇಹ ನಾದಂ ಜಿನಂ ॥ ೯೫ ॥

ವ॥ ಅಂತು ನಿಜಮುಖಾರವಿಂದಮಂದಸ್ಮಿತಪರಿಸ್ಪಂದದಶನವಸನಾನುಮತ ನಾಗಿ.

ಮ॥ ಸಮಸಂದಾತ್ಮಗುರೂಪರೋಧದಿ ನೊಡಂಬಟ್ಟಂ ನಿರಾಕಾಂಕ್ಷ ನ ।
ಪ್ಪಮಳಜ್ಞಾನವಿಭಾಸ ನಪ್ಪ ಜಿನನುಂ ಜಾಯಾಪರಿಸ್ಪಂದಬಂ ॥
ಧಮ ನಿಂತೊಪ್ಪುಗುಮೇ "ಅವಶ್ಯಮನುಭೋಕ್ತವ್ಯಂ ಕೃತಂ ಕರ್ಮ" ಎಂ ।
ಬ ಮುನೀಂದ್ರೋಕ್ತಿ ಶುಭಾಶುಭಾನುಭವಮಾಕ್ಸಂಸಾರಿಜೀವಂಗಳೊಳ್ ॥ ೯೬ ॥

ಕಂ॥ ಪರಮಗುರು ಪುಟ್ಟದಂದಿನ ।
ಪರಿತೋಷದ ಪರಮಕೋಟಿ ಪೆಂಪಿನೊಳಿದಱಿಂ ॥
ದೊರೆಗಂ [2]ದೊರೆಗಂ ಬಾರದು ।
ಪರಿಕಿಪೊಡೆನೆ ಹೃಷ್ಟರಾದ ರಾದಂಪತಿಗಳ್ ॥ ೯೭ ॥

ವ॥ ಆಗಿ ಮಂತ್ರಶಾಲೆಗೆೞ್ತಂದು ಕುಲವೃದ್ಧಬುದ್ಧಿವೃದ್ಧವಯೋವೃದ್ಧರಪ್ಪ ಬಂಧುಜನಮಂತ್ರಿ ಜನಪರಿಜನಂಗಳಾಲೋಚನದಿಂ.

[1] ಗೆಯ್ವುದು ಯೆನುತ್ತಿಲ್ಲಂದದಿಂ (ಪಾ). [2] ಸರಿಗಂ (ಪಾ).

ಚಂ॥ ಒದವಿದ ನಾಥವಂಶದೆಸಕಂ ಕುರುವಂಶದ ಮೈಮೆ ಯಿಕ್ಷುವಂ ।
ಶದ ಜಸ ಮುಗ್ರವಂಶದುದಯಂ ಹರಿವಂಶದ ಪೆಂಪು ಸೂರ್ಯವಂ ॥
ಶದ ದೆಸೆ ಸೋಮವಂಶದ ನೆಗೞ್ತೆ ಪೊಗೞ್ತೆಗಳೆಂಬ ಪೆಂಪಿನಂ ।
ಮದುವೆಗೆ ತತ್ಪ್ರಭೂತನೃಪಕನ್ನೆಯರಂ ಸಮಕಟ್ಟಿದಂ ನೃಪಂ ॥ ೯೮ ॥

ವ॥ ಅಂತು ಸಮಕಟ್ಟಿ ಸಮುಚಿತಾನೂನದಾನಸನ್ಮಾನದಿಂದೆ ತನ್ಮಹೀನಾಥಯೂಥಮಂ ಸಂತೋಷಂಬಡಿಸಿ.

ಕಂ॥ ಚೆನ್ನೆಯರಂ ವಿವಿಧಕುಲೋ ।
ತ್ಪನ್ನೆಯರಂ ಗುಣವಿವೇಕನವಯೌವನಸಂ ॥
ಪನ್ನೆಯರಂ ಸಾಸಿರ್ವರ್ ।
ಕನ್ನೆಯರಂ ದೇಹದೀಪ್ತಿಸಂಛನ್ನೆಯರಂ ॥ ೯೯ ॥

ವ॥ ತರಿಸಿ ಶುಭದಿನದೊಳ್ ಗೃಹಮಹತ್ತರಂಗೆ ವಿವಾಹಗೇಹಮಂ ಸಮೆಯಿಸೆಂದು ಬೆಸಸುವುದು ಮಲ್ಲಿಂ ಮುನ್ನೆ ಸುತ್ರಾಮಸೂತ್ರಧಾರಸೂತ್ರಿತ ಮಾಗಿ ಕಲ್ಪಶಿಲ್ಪಿಗಳ್ ಸಮೆಯೆ.

ಉ॥ ಶ್ರೀರಮಣೀನಿವಾಸ ಮೆನೆ ಮುತ್ತಿನ ಸೂಸಕದೋಳಿ ತುಂಗಭೃಂ ।
ಗಾರದ ಶೋಭೆ ಜಾಗದಡೆಕಿಲ್ಗಳೊಡಂಬಡೆ ಚಿತ್ರಭಿತ್ತಿ ವಿ ॥
ಸ್ತಾರದ ಚೆಲ್ವು ಚೀನದ ವಿತಾನದ ನೇರ್ಪುರುರತ್ನರಂಜಿತಾ ।
ಕಾರದ ಕಂಬದೊಪ್ಪ ಮಮರ್ವಂತೆಸೆದತ್ತು ವಿವಾಹಮಂಡಪಂ ॥ ೧೦೦ ॥

ವ॥ ಅಲ್ಲಿ.

ಕಂ॥ ಗುಡಿ ತೋರಣ ಮಕ್ಷತೆ ಕ ।
ನ್ನಡಿ ಕಳಶಂ ದಧಿ ಕಱುಂಕೆ ಪೂಮಾಲೆ ಫಳಂ ॥
ಸೊಡರೆಳೆದಳಿರೆಂಬಿವು ನೆಗೆ ।
ದೆಡೆಗಿಱಿದೊಪ್ಪಿದುವು ಮಂಗಳದ್ರವ್ಯಂಗಳ್ ॥ ೧೦೧ ॥

ವ॥ ಅದಲ್ಲದೆಯುಂ.

ಮ॥ ಕಡೆಯಿಕ್ಕೆಂಬುಪವೇದಿಯಂ ರಚಿಯಿಸೆಂಬೊಳ್ಪೂವ ನೆತ್ತೆಂಬ ಕ ।
ನ್ನಡಿಯಂ ಮುಂತಿರಿಸೆಂಬ ಪೊಂಗಳಸಮಂ ನೀಡೆಂಬ ಕಾಶ್ಮೀರಮಂ ॥
ತೊಡೆ ಯೆಂಬೀಸೊಡರ್ಪೊತ್ತಿಸೆಂಬ ಪಸೆಯಂ ಪಾಸೆಂಬ ನೀಂ ಬಾಯಿನಂ ।
ಗುಡು ತಂದೆಂಬ ನರಾಮರಾಂಗನೆಯರಿಂ ದಾಯ್ತುಂದು ಕೋಳಾಹಳಂ ॥ ೧೦೨ ॥

ವ॥ ಆಗಳಮರಲೋಕದಿಂದೆ ಬಂದು ಬಂಧುರನಮೇರುಮಂದಾರಪಾರಿಜಾತಹರಿಚಂದನಪ್ರಮುಖಸುರತರುವ್ರಜದ ಸರಸಸರಸೀರುಹಸುರಭಿಪರಿಮಳಪರಿಭ್ರಾಂತಭೃಂಗಸಂಘಾತಲಂಘಿತಲತಾಂತಮಾಲೆಗಳೊಳ, ಮುಭಯಕರ್ಮಕಾರೋಹಣದುಕೂಲದೇವಾಂಗನಾರಂಗಪಟ್ಟಸೂತ್ರನೇತ್ರಚೀನಾದ್ಯತಿಸಮೀಚೀನವಸನವಿಸರಂಗಳೊಳ, ಮಗರುಸಾರಘನಸಾರಕಾಶ್ಮೀರಮಳಯರುಹ

ಯಕ್ಷಕರ್ದಮಬಂಧುರಸುಗಂಧಲೇಪನಂಗಳೊಳ ಮಖಿಳಭುವನಪಾವನಪರಾರ್ಧ್ಯರತ್ನರಾಜಿರಚನಾವಿಚಿತ್ರಕಟಿಸೂತ್ರಕೇಯೂರಹಾರಕುಂಡಲೋತ್ತಂಸಮುಖ್ಯವಿವಿಧಭೂಷಣವಿಶೇಷಂಗಳೊಳ, ಮಖಂಡಮಂಡನಕ್ರಿಯಾಸುಭಗಶೋಭಾಚಮತ್ಕಾರಕರಣಪರಿಣತಸಾಂದ್ರಸೌಂದರೀ, ಸಂದೋಹಮಾವಧೂಕದಂಬಕಮುಂ, ಸಮುತ್ತುಂಗಮಾಂಗಲ್ಯ ಶೃಂಗಾರರಸಶಿಕ್ಷಾವಿಚಕ್ಷಣನಿಳಿಂಪನಿಕರಮುಂ, ತ್ರಿಲೋಕತಿಲಕನುಮ ನಳಂಕರಿಸಿದಾಗಳ್.

ಕಂ॥ ರತಿ ಪೊರೆದನಂಗಜಂಗಮ ।
ಲತೆಗಳ್ ಕುಸುಮಿಸಿದು ವಖಿಳಭುವನತ್ರಯುಕ ॥
ಲ್ಪಿತಕಲ್ಪಭೂರುಹಂ ಪು ।
ಷ್ಪಿತ ಮಾಯ್ತೆನಿಸಿರ್ದರಾಕೆಗಳ್ ಮಾವಿಭುವಂ ॥ ೧೦೩ ॥

ಉ॥ ಮಂಗಳಮಂಡನಕ್ಕೆ ನೆಲೆಯಾದ ಕುಮಾರನ ಭೂಷಣಾಂಶು ದಿ ।
ವ್ಯಾಂಗದ ಕಾಂತಿಯೊಳ್ ತೊಡರ್ದು ರಂಜಿಸಲಾಱವೆ ದೀಪ್ರದೀಪಿಕಾ ॥
ಸಂಗತದೀಪ್ತಿಜಾಳ ಮನಿತಗ್ಗಳಮಾದೊಡ ಮೊಂದಿದಚ್ಚವೆ ।
ಳ್ದಿಂಗಳ ರಶ್ಮಿಯೊಳ್ ತೊಡರ್ದು ವಳ್ಚನೆ ರಂಜಿಸಲಾಱದಂದದಿಂ ॥ ೧೦೪ ॥

ವ॥ ಅನಂತರಂ.

ಮಸ್ರ॥ ಸುರತೂರ್ಯಧ್ವಾನ ಮೆಲ್ಲಾದೆಸೆಗೆ ನಿಮಿರೆ ಮಾಂಗಲ್ಯಗೀತಾರವಂ ಕಿಂ ।
ನರನಾರೀವೃಂದದಿಂ ಸಂಘಿಸೆ ಪರಿಣಯನೋತ್ಸಾಹಗೇಹಕ್ಕೆ ಬಂದಂ ॥
ಸುರವೃಂದಂ ಲೀಲೆಯಿಂದಂ ತರೆ ವಿಹಿತಲಸನ್ಮಂಗಳದ್ರವ್ಯದೇವೀ ।
ಪರಿವಾರಂ ನಿರ್ವಿಕಾರಂ ಸುರತರುಸುಮನಃಕರ್ಣಪೂರಂ ಕುಮಾರಂ ॥ ೧೦೫ ॥

ವ॥ ಆಗಳಾಮನೋಜಮಂಗಳವತಾಕೆಗಳ ನಾತ್ಮೀಯಮಹನೀಯಮಹಿಮಾತಿಶಯವಿಭೂತಿಯಿಂದೆ ಮುಂದಿಟ್ಟು ತಂದು ತಜ್ಜನಕರಪ್ಪ ಜನಪರಿಜನಂಗಳ್ ವಿವಾಹಮಂಡಪಕ್ಕೆ ಮಂಡನಂಮಾಡಿ.

ಮ॥ ನಿಮಿರ್ದೊಳ್ಗಣ್ಬೊಣರಿಂ ಕುರುಳ್ವಱಗಲಿಂ ವಕ್ಷೋಜದಿಂ ವಕ್ತ್ರವಿ ।
ಭ್ರಮದಿಂ ಕೆಂದಳದಿಂ ಸ್ಮಿತೋತ್ಪಳಮಯಂ ಭೃಂಗೀಮಯಂ ಚಕ್ರವಾ ॥
ಕಮಯಂ ಚಂದ್ರಮಯಂ ಪ್ರವಾಳಮಯ ಮಾಯ್ತೀಲೋಕ ಮೆಂಬಂತದೇಂ ।
ಸಮಸಂದಿರ್ದುದೊ ಬಂದು ಗೊಂದಣಿಸಿ ತದ್ರಾಜನ್ಯಕನ್ಯಾಜನಂ ॥ ೧೦೬ ॥

ವ॥ ಅನಂತರ ಮಪಾರಗಂಭೀರಮಂಗಳಾತೋದ್ಯನಾದಂಗಳೆಸೆದು ಘೂರ್ಣಿಸೆ ಯಥೋಚಿತವಿಧಾನಪೂರ್ವಕ ಮುದಾರತಾರಾಸಮೂಹಮಂ ಚಂದ್ರನೊಳ್ ನೆರಪುವಂತೆ ಇಕ್ಷ್ವಾಕುವಂಶವಾರಾಶಿಚಂದ್ರನೊಳ್ ಪವಿತ್ರಕ್ಷತ್ರಕುಳಗಗನರಂಗನೇತ್ರಮಾಳಿಕೆಗಳಂ ಪಾಣಿಗ್ರಹಣಂಗೆಯ್ಸಿದಾಗಳ್.

ಮ॥ ಕರಿಣೀವೇಷ್ಟಿತಪುಷ್ಪದಂತದಿಗಿಭೇಂದ್ರಾಕಾರದಿಂ ದಾಗಳಾ ।
ತರುಣೀವೇಷ್ಟಿತಪುಷ್ಪದಂತ ನೆಸೆದಂ ವಂಶೋನ್ನತಂ ಸ್ಫಾರಪು ॥
ಷ್ಕರಹಸ್ತಂ ಧೃತಭದ್ರಲಕ್ಷಣಗುಣಂ ಪದ್ಮಾಭಿರಾಮಂ ನಿರಂ ।
ತರದಾನಂ ಮೃದುದೀರ್ಘವಾಳ ನಧಿಕವ್ಯಾಳಂ ಸದಾಶಾಶ್ರಯಂ ॥ ೧೦೭ ॥

ಮ॥ಸ್ರ॥ ಘನಗಂಭೀರಸ್ವನಂ ಮೌಕ್ತಿಕಮಣಿದಶನಂ ಪದ್ಮರಾಗಾಧರಂ ವ ।
ಜ್ರನಖಂ ಪಾಠೀನನೇತ್ರಂ ಕಮಠಚರಣ ನಕ್ಷೂಣಲಾವಣ್ಯಲಕ್ಷ್ಮೀ ॥
ಜನಕಂ ಡಿಂಡೀರಪಾಂಡುಪ್ರಭ ನೆನಿಪ ಗುಣಾಂಭೋಧಿಯೊಳ್ ಕೂಡಿ ಚೆಲ್ವಾ ।
ಯ್ತನುಕೂಲಂ ಸ್ವಚ್ಛಶೀಲಂ ಕುಲನದಿಯುಪೊಲಾಕ್ಷತ್ರಪುತ್ರೀಸಹಸ್ರಂ ॥ ೧೦೮ ॥

ಮ॥ ಪ್ರಣತೇಂದ್ರಂ ವರ ನಂದು ಬಂದೆಸೆವ ಸೌಧರ್ಮಾದಿಗಳ್ ಬಂದ ನಿ ।
ಬ್ಬಣಿಗರ್ ಕಲ್ಪದನಲ್ಪವಸ್ತುನಿವಹಂ ತೆಲ್ಲಂಟಿ ದೇವಾಂಗನಾ ॥
ಗಣ ಮತ್ತಿತ್ತೆಡೆಯಾಡುವೈದೆಯರದಂ ಕೊಂಡಾಡಿ ಮಾಳ್ಪಂ ನೃಪಾ ।
ಗ್ರಣಿ ಸುಗ್ರೀವ ನೆನಲ್ಕದೇಪೊಗಳ್ವೆ ನಾಂ ವೈವಾಹಿಕೋತ್ಸಾಹಮಂ ॥ ೧೦೯ ॥

ವ॥ ಆಗಳುತ್ಸಾಹಕಾರ್ಯ ಸಹಚರ್ಯಪರ್ಯಷ್ಟಿನಿಷ್ಠಿತನಿಳಿಂಪಕುಳ ನೃಪಕುಳಕುಟುಂಬಿನೀಜನ ಪರಿವೃತೆಯಪ್ಪ ಜಯರಾಮಾಮಹಾದೇವಿವೆರಸೊಸಗೆ ಮರುಳ್ಗೊಂಡು ವಿತರಣಸಮಗ್ರ ನಪ್ಪ ಸುಗ್ರೀವಮಹಾರಾಜಂ ಮಹಾಮಹಿಮೆಯುಂ ಮೆಱೆದು.

ಚಂ॥ ಪರಿಜನ ಮುರ್ವೆ ಬಂಧುತತಿ ಕೊರ್ವೆ ಯಶೋಲತೆ ಪರ್ವೆ ಯಿಷ್ಟಶಿ ।
ಷ್ಟರ ಬಗೆ ತೀರೆ ವಂದಿಜನ ಮಾರೆ ಸುರದ್ರುಮದಾಪ್ಪು ಸಾರೆ ಸ ॥
ತ್ವರಹಿತವೃತ್ತ ನಸ್ಖಳಿತಚಿತ್ತ ನಲಂಪಿನೊಳಿತ್ತ ನಂಬರಾ ।
ಭರಣಗಜಾಶ್ವಸಾರ್ಥಮ ನನರ್ಘ್ಯಪದಾರ್ಥಮ ನರ್ಥಿಸಾರ್ಥಮಂ ॥ ೧೧೦ ॥

ವ॥ ಅಂತೊಸಗೆಮಾಡಿ ನಿರ್ವರ್ತಿತವಿವಾಹೋತ್ಸವ ನಾಗಿ ಸುಖದಿ ನಿರ್ಪಲ್ಲಿ.

ಕಂ॥ ಆಪುಷ್ಪಚಾಪಮಂಗಳ ।
ದೀಪಲತಾಕೃತಿಗಳೆಳಸಿ ಬೆಳಗಿದು ಪೊಲವಿಂ ॥
ಶ್ರೀಪುಷ್ಪದಂತವಿಷಯು ।
ವ್ಯಾಪಾರಾಭ್ಯುದಯಹೃದಯುರವ್ಯಸ್ಥಳದೊಳ್ ॥ ೧೧೧ ॥

ವ॥ ಅದಲ್ಲದೆಯುಂ.

ಮ॥ ಚಳವೀಣಾನೇಕ್ಷಣೆಯರ್ ಮೃಣಾಳಭುಜೆಯರ್ ಪದ್ಮಾಸ್ಯೆಯರ್ ಭೃಂಗಕುಂ ।
ತಳೆಯರ್ ಕೈರವಗಂಧಿಯರ್ ಜಳವಿಹಂಗೀನಾದೆಯರ್ ಶೀತಳೋ ॥
ಜ್ಜಲಿತಭ್ರೂಲತೆಯರ್ ಮರಾಳಗತಿಗಳ್ ಚಕ್ರಾಂಕವಕ್ಷೋಜಮಂ ।
ಡಳೆಯರ್ ವರ್ತಿಸಿದರ್ ಕುಮಾರನ ಮನಶ್ಶ್ರೀಸಾರಕಾಸಾರದೊಳ್ ॥ ೧೧೨ ॥

ಕಂ॥ ಜಳ ಮೆನಿತಗ್ಗಲಿಸಿದೊಡಂ ।
ಜಳದಿಂದಂ ಮೇಲೆ ಮಿಗುವ ಜಳಜದವೋಲ್ ಕೇೞ ॥
ಮಳೆಯರನುಬಂಧ ಮೆನಿತ ।
ಗ್ಗಳಿಸಿದೊಡಂ ಮೇಲೆ ಮಿಕ್ಕುದರತಿನಿಬಂಧಂ ॥ ೧೧೩ ॥

ವ॥ ಅನಂತರಂ ಮತ್ತೊಂದು ಪುಣ್ಯದಿನದೊಳ್ ಉತ್ಸವಪರಂಪರಾಪರಿಗತಸ್ವಾಂತ ನಾಮಹೀಕಾಂತ ನನೇಕಮೂರ್ಧಾಭಿಷಿಕ್ತಪಾರ್ಥಿವಜನಂಗಳ್ವೆರಸು ತೀರ್ಥಸಲಿಲಂಗಳಿಂ ರಾಜ್ಯಾಭಿಷೇಕಂಗೆಯ್ದು.

ಮ॥ಸ್ರ॥ ದಿವಿಜೇಂದ್ರಂ ಬಂದು ಮುನ್ನಂ ಜಿನನ ಸವನಮಂ ಮಾಡುವಂದುಂ ವಿವಾಹೋ ।
ತ್ಸವಮಂ ಕೊಂಡಾಡುವಂದುಂ ವಿಭವಮ ನಿನಿತಂ ಕಾಣೆ ವೆಂಬನ್ನ ವಿಂಬಿಂ ॥
ಸುವಿಧೀಶಂ ಗಾತ್ಮಪುತ್ರಂಗಧಿಕಮಹಿಮೆಯಂ ಮಾಡಿದಂ ಪಟ್ಟಬಂಧೋ ।
ತ್ಸವಮಂ ಸುಗ್ರೀವಭೂಪಾಳಕ ನತಿಮುದದಿಂ ಭವ್ಯರತ್ನಾರ್ಣವಾಂಕಂ ॥ ೧೧೪ ॥

ಗದ್ಯಂ

ಇದು ಸಮಸ್ತಭುವನಜನಸಂಸ್ತುತಜಿನಾಗಮಕುಮುದ್ವತೀ
ಚಾರುಚಂದ್ರಾಯಮಾಣಮಾನಿತಶ್ರೀಮದುಭಯಕವಿಕಮಳಗರ್ಭ
**ಮುನಿಚಂದ್ರಪಂಡಿತದೇವ**
ಸುವ್ಯಕ್ತಸೂಕ್ತಿಚಂದ್ರಿಕಾಪರಿಪುಷ್ಟಮಾನಸಮರಾಳ
**ಗುಣವರ್ಮನಿರ್ಮಿತಮಪ್ಪ**
**ಪುಷ್ಪದಂತ ಪುರಾಣದೊಳ್**
**ಕುಮಾರಪರಿಣಯನೋತ್ಸವಪರಿವರ್ಣನಂ**
ದ್ವಾದಶಾಶ್ವಾಸಂ
ಸಂಪೂರ್ಣಂ.



ಶ್ರೀ

# ಪುಷ್ಪದಂತ ಪುರಾಣಂ

## ತ್ರಯೋದಶಾಶ್ವಾಸಂ

ಕಂ॥ ಶ್ರೀರಾಜ್ಯಲಕ್ಷ್ಮಿ ತನ್ನಯ ।
ಪೇರುರದೊಳ್ ತಾರಹಾರಲತೆಯವೊಲತಿವಿ ॥
ಸ್ತಾರಿಸಿರೆ ಶೋಭೆವೆತ್ತ ನಿ ।
ಳಾರಾಧ್ಯಂ ಪ್ರಭುಗುಣಾಬ್ಜವನಕಳಹಂಸಂ ॥ ೧ ॥

ವ॥ ಆಸಮಯದೊಳ್.

ಚಂ॥ ಪಿತೃ ಕೃತಕೃತ್ಯನಾಗೆ ಪಸವಂ ಜನಸಂತತಿ ನೀಗೆ ಶತ್ರುಸಂ ।
ತತಿ ತಲೆವಾಗೆ ಶಿಷ್ಟಜನದಾಱಿಡಿ ನಾಟ್ಕಡೆವೋಗೆ ತೇಜ ಮು ॥
ದ್ಧತರನೆ ಕೊಂದುಕೂಗೆ ಸಕಳಾವನಿ ರಾಗಿಸಿ ಬೀಗೆ ಕೀರ್ತಿ ದಿ ।
ಕ್ತತಿಗಳ ಮೇಗೆ ತೀಗೆ ತಳೆದಂ ಭುವನಪ್ರಭು ರಾಜ್ಯಲಕ್ಷ್ಮಿಯಂ ॥ ೨ ॥

ಮ॥ ಸ್ಥಿರಮೂಲಂ [1]ಫಲಿ ಶಾಖೆ ಮಂತ್ರಿನಿಚಯಂ ಕಂದಂ ಮಹೀಚಕ್ರ ಮಂ ।
ಕುರಜಾಲಂ ಜಯಸೇನೆ ಪತ್ರನಿವಹಂ ಮಿತ್ರಪ್ರಜಂ ಪುಷ್ಪಮಂ ॥
ಜರಿ ದುರ್ಗಂ ಫಲಕೋಟಿ ಕೋಶ ಮೆನೆ ಮಯ್ವೆತ್ತಿರ್ದ ಸಪ್ತಾಂಗಬಂ ।
ಧುರಲಕ್ಷ್ಮೀಲತೆ ಪತ್ತಿ ತನ್ನ ನೆಸೆದಂ ಸಮ್ಯಕ್ತ್ವರತ್ನಾರ್ಣವಂ ॥ ೩ ॥

ಮ॥ ಅತಿಶಾಂತಾತ್ಮಕ ನಾದೊಡಂ ಹಿಮಕರಂ ಪಂಕೇಜಸಂಕೋಚನ ।
ಸ್ಥಿತಿಯಂ ಕೌಮುದಸೌಮುದಸ್ಥಿತಿಯ ನೌದಾಸೀನ್ಯದಿಂ ಮಾಳ್ಪವೋಲ್ ॥
ಸತತಂ ಮಾಡಿದನೇಕರೂಪಮಹಿಮಂ ದುಷ್ಟರ್ಗೆ ಶಿಷ್ಟರ್ಗೆ ದು ।
ಸ್ಥಿತಿಯಂ ಸುಸ್ಥಿತಿಯಂ ನಿಜಂ ಸುವಿಧಿಗಿಂತೀವಿಕ್ರಮಂ ಪ್ರಕ್ರಮಂ ॥ ೪ ॥

ವ॥ ಅಂತು ಮಲ್ಲದೆಯುಂ.

ಕಂ॥ ಮೃದುಭಾವನಾಗಿಯುಂ ನೃಪ ।
ನುದಗ್ರವಿಗ್ರಹಕಠೋರರಂ ಬಾಧಿಸಿದಂ ॥
ಮೃದುಶೀತ ವಚ್ಛವಾಗಿಯು ।
ಮುದಕಂ ಬಾಧಿಪವೊಲಧಿಕವಾತಾತ್ಮಕರಂ ॥ ೫ ॥

ವ॥ ಮತ್ತಂ.

ಚಂ॥ ಎಱಗದ ತೀರಭೂರುಹಮ ನೆಯ್ದೆ ಮೊದಲ್ಗಿಡೆ ಕೀಳ್ವ ಬೆಂಗೆ ಬಿ ।
ಟ್ಟೆಱಗಿದ ವಂಜುಳಪ್ರಕರಮಂ ಪರಿವರ್ಧಿಪ ಸಿಂಧುತೋಯದಂ ॥
ತೆಱಗದರಂ ತಡಂಗಿಡಿಪ ನಮ್ರರ ನುರ್ವಿಪ ರಾಜಲೀಲೆ ಕ ।
ಣ್ದೆಱಿದುದು ಪುಷ್ಪದಂತಮಹಿಪಾಳನೊಳತ್ಯಮಳಾದ್ರ್ರ ಶೀಲನೊಳ್ ॥ ೬ ॥

(*a*) ಫಲಿ ಶಾಖೆಯದ್ರಿಯೆ ಜಯಸ್ಕಂಧಂ ಮಹೀ, (*b*) ಫಣಿಯದ್ರಿ......,

ಚಂ॥ ಕುವಳಯಬಂಧುವಾಗಿಯುಂ ಮಿನಂ ನವಯವ್ವನನಾಗಿಯುಂ ದಶೋ ।
ದ್ಭವತನು ಸೌಮ್ಯನಾಗಿಯುಂ ಮಶೇಷಜಗದ್ಗುರು ಭೋಗಿ ಯಾಗಿಯುಂ ॥
ಪ್ರವಿಗತವಕ್ರಮಾರ್ಗ ನಚಳಾತ್ಮಕನಾಗಿಯುಂ ಮತ್ಯುದಾತ್ತಸಂ ।
ಭವ ನೆನಿಸಿರ್ದು [1]ಮತ್ತಮವಿರುದ್ಧಗುಣೋನ್ನತ ನಾ[ದನಾ]ನೃಪಂ ॥ ೭ ॥

ವ॥ ಅಂತು ಗುರುಜನೋಪರೋಧದಿಂ ತನಗಿನಿಸನುಭೂಯಮಾನೆಯಾದ ರಾಜ್ಯಲಕ್ಷ್ಮಿಯಂ ಸಮಧಿಕೈಶ್ವರ್ಯಮುಮತ್ತೆ ಯೆಂದು ಸಮುದಮಾತಂಗಸಂಪತ್ಪ್ರದಾನೆ ಯೆಂದು ನಿಸರ್ಗದುರ್ಗೋಪ ಸಂಚಿತಾರ್ಥಪ್ರಪಂಚೆ ಯೆಂದು ಗುರುಜನೌಚಿತ್ಯವಿನಯೋಪಚಾರದೂರೆ ಯೆಂದು ಪ್ರತಿಕೂಲ ರಾಜವಿಷಯೋಪಭೋಗಲಂಪಟಾತ್ಮೆ ಯೆಂದು ದುಸ್ಸಹಮಹಾಕಲಹಕಲುಷಿತಸ್ವಭಾವೆ ಯೆಂದು ಪರಪುರುಷಕಂಠಗ್ರಹಾನುರಕ್ತ ಭಾವರಸಿಕೆ ಯೆಂದು ಮನದೊಳೇವಯಿಸಿ ಪುರುಷು ಪುಟ್ಟಿ ಮೇಗುದೋಱಿ ಸವತಿಮಾಡುವಂತೆ.

ಉ॥ ಭೂವರ ನಪ್ಪ ಚಂದ್ರಿಳಪುರಾಧಿಪ ನಪ್ಪಿನವಂಶ ನಪ್ಪ ಶೌ ।
ರ್ಯಾವಹ ನಪ್ಪ ಸಿಂಹರಥರಾಜನ ನಂದನೆಗಂದು ಚಂದ್ರಿಕಾ ॥
ದೇವಿಗೆ ರೂಪವಿಭ್ರಮವಿಲಾಸಗುಣಾನ್ವಿತ ಸಚ್ಚರಿತ್ರಳೀ ।
ಲಾವತಿಗಿತ್ತ ನಗ್ರಮಹಿಷೀಪದಮಂ ಮನುಜೇಂದ್ರಚಂದ್ರಮಂ ॥ ೮ ॥

ಮ॥ ವಿನಯಂ ರೂಪು ವಿವೇಕ ಮನ್ವಯದ ಪೆಂಪೊಳ್ಪಾರ್ಪು ಸೌಭಾಗ್ಯ ಮೆಂ ।
ಬಿನಿತುಂ ರಾಣಿಯರ್ಗೆಲ್ಲ ಮುಳ್ಳೊಡಮಧೀಶಂ ಚಂದ್ರಿಕಾದೇವಿಗಿ ॥
ತ್ತ ನತಿಸ್ನೇಹದಿ ನಾಣೆಗೋಸಣೆಯ ನೇಂ ಸದ್ಗಣ್ಯಪುಣ್ಯಪ್ರಭಾ ।
ವನೆ ಮೆಯ್ವೆತ್ತಮಹಾಸತೀಜಯಮ ನಾರ್ ಕೊಂಡಾಡರಾರ್ ಮನ್ನಿಸರ್ ॥ ೯ ॥

ವ॥ ಅಂತಾಜಗತ್ಪವಿತ್ರಚಾರಿತ್ರವಾರ್ಧಿಗರ್ಧಾಂಗಲಕ್ಷ್ಮೀಯಾದಾ ಮಹಾದೇವಿಯ ಗರ್ಭದೊಳ್ ಪೂರ್ವಜನ್ಮಸಂಚಿತಾಗಣ್ಯಪುಣ್ಯ ಪ್ರಭಾವದಿಂ.

ಮ॥ ಸ್ಮರಸೌಮ್ಯಾಕೃತಿ ವಿಶ್ರುತಂ ಶ್ರುತಕಳಾನಾಥಂ ಕಳಾನಾಥಭಾ ।
ಸುರವಕ್ತ್ರಂ ಸುರವಕ್ತ್ರಪಾವನಸದಾಚಾರಂ ಸದಾಚಾರಚ ॥
ಕ್ಷುರಭಿವ್ಯಕ್ತಪರಕ್ಷಿತೀಶಗೃಹವೃತ್ತಂ ವೃತ್ತದೋರ್ಬಂಧುರಂ ।
ಧುರಶೌರ್ಯಾರ್ಜಿತಕೀರ್ತಿ ಕೀರ್ತಿಧರ ನೆಂಬಂ ನಂದನಂ ಪುಟ್ಟಿದಂ ॥ ೧೦ ॥

ವ॥ ಆತನಿಂ ಬೞಿಕ್ಕೆ ಮಳಯಾನಿಲೆ ಮಣಿಮಾಲೆ ಮದನಲತೆ ಮಹಾನಂದೆ ಜಯನಂದೆ ಚಿತ್ರಲೇಖೆ ಕನಕಲತೆ ಪೆಸರ ಪೆಱಪೆಱರು ಮಱಿಕೆ ಯರಸಿಯರ್ಗೆ.

ಕಂ॥ ನರದೇವ ನಿಂದ್ರವರ್ಮಂ ।
ಹರಿಷೇಣಂ ವಿಜಯ ನಶನಿಘೋಷ ನನಂತಂ ॥
ವರುಣನ ಜಬಾಹು ಸಂಜಯ ।
ನರನುಪಾಂಣಜಯಮುಖ್ಯವೀರರು ದಾರರ್ ॥ ೧೧ ॥

---

[1] ಮತ್ತಮವಿರೋಧಗುಣಾನ್ವಿತ.

ಕಂ॥ ಅಂಶುಪ್ರಭ ರುದ್ಯೋತಿತ ।
ವಂಶರ್ ಪುಟ್ಟಿದ ರಪತ್ಯ ರನುಪಮಪುರು ಪು ॥
ಣ್ಯಾಂಶರ್ ದ್ವಿಗುಣಿಸಿದ ಚತು ।
ರ್ವಿಂಶತಿತೀರ್ಥಕರದರೆನಿಸಿ ನಾಲ್ವತ್ತೆಣ್ಬರ್ ॥ ೧೨ ॥

ಚಂ॥ ಅವರ ವಿಳಾಸದೊಳ್ಪವರ ಮಾಂತನದೊಳ್ಪವರಾಭಿಜಾತ್ಯದೊ ।
ಳ್ಪವರ ವಿವೇಕದೊಳ್ಪವರ ವಿಕ್ರಮದೊಳ್ಪವರೀವ ಚಾಗದೊ ॥
ಳ್ಪವರ ಚರಿತ್ರದೊಳ್ಪು ಪೊಗಟ್ವಾಗ ಳಚಿಂತ್ಯ ಮತರ್ಕ್ಯ ಮತ್ಯಸಂ ।
ಭವಗಣನಾರ್ಹ ಮಪ್ರತಿಮಕಲ್ಪ ಮಜೇಯ ಮಮೇಯ ಮಕ್ಷಯಂ ॥ ೧೩ ॥

ಕಂ॥ ಪರಮೌದಾರಿಕಮೂರ್ತಿಗೆ ।
ಚರಮಾಂಗಂಗಖಿಳಗುರುಗೆ ಪುಟ್ಟಿದ ರೆನೆ ಮು ॥
ಯ್ಸಿರಿ ತೇಜಮಳವು ಪುಣ್ಯಂ ।
ಪುರುಷಾರ್ಥಂ ಮಹಿಮೆ ಯೆಂಬಿವಿವರ್ಗಚ್ಚರಿಯೇ ॥ ೧೪ ॥

ವ॥ ಎನಿಸಿದಾಕುಮಾರಕರೊಳಗ್ರಗಣ್ಯನು ಮಗಣ್ಯವಿಕ್ರಮನುಂ ಕ್ರಮಾರ್ಹನು ಮಪ್ಪ.

ಕಂ॥ ಶ್ರೀಕೀರ್ತಿವರಕುಮಾರಂ ।
ಗಾಕಂಪಿತರಿಪುನೃಪಂಗೆ ಪರಿಜನಚೇತೋ ॥
ಮಾಕಂದವಸಂತಂಗೆ ಮ ।
ಹೀಕಾಂತಂ ಯೌವರಾಜ್ಯಪದವಿಯ ನಿತ್ತಂ ॥ ೧೫ ॥

ವ॥ ಅಂತಿತ್ತು.

ಮ॥ ಪ್ರಿಯದಿಂ ಸೂಡಿದ ಪುಷ್ಪಮಾಳಿಕೆ ಪೊಲಾಜ್ಞಾಲಕ್ಷ್ಮಿಯುಂ ಕೀರ್ತಿಲ ।
ಕ್ಷ್ಮಿಯು ಮುರ್ವೀಶದಿಗೀಶಮಸ್ತಕದೊಳೊಳ್ಪಿಂ ನಿಲ್ವಿನಂ ರಾಜ್ಯಲ ॥
ಕ್ಷ್ಮಿಯ ನಯ್ವತ್ತುಸಹಸ್ರಪೂರ್ವದೊಡ ನಿಪ್ಪತ್ತೆಯ್ದುಪೂರ್ವಾಂಗಸಂ ।
ಖ್ಯೆಯ ಕಾಲಂ ಸಲೆ ತಾಳ್ದಿ ಭೋಗಿಸಿದ ನಿಂತಿಕ್ಷ್ವಾಕುವಂಶೋನ್ನತಂ ॥ ೧೬ ॥

ಮ।ಸ್ರ॥ ಸ್ಫುರಿತೋಷ್ಣಾಂಶುಪ್ರಕಾಶಂ ದವದಹನಶಿಖಾಕ್ರಾಂತಕಾಂತಾರದೇಶಂ ।
ಪರಿಶುಷ್ಯತ್ಸಿಂಧುಪಾಥಂ ಸಲಿಲವಿಹರಣಾಸಕ್ತವನ್ಯೇಭಯೂಥಂ ॥
ನರನಾರೀಸ್ವೇದಬಿಂದುಪ್ರವಣಗುರು ನಿರಾರ್ದ್ರೀಕೃತಾರಣ್ಯವಲ್ಲೀ ।
ತರು ಬಂದತ್ತೆಂದು ಸಂಪಾದಿತಸಕಳಮೃಗಗ್ಲಾನಿದಾಘಂ ನಿದಾಘಂ ॥ ೧೭ ॥

ವ॥ ಅಂತು ತನ್ನ ಭಾಸ್ವತ್ತೇಜದೊಡನೆ ಭಾಸ್ವತ್ತೇಜ ಮೆಸೆಯೆಯುಂ, ತನ್ನ ಸನ್ಮಾರ್ಗದೊಡನೆ ಸನ್ಮಾರ್ಗ ಮುಜ್ಜ್ವಳಿಸೆಯುಂ, ತನ್ನ ವೈರಿಭೂಭೃತ್ಕಂಟಕದೊಡನೆ ಭೂಭೃತ್ಕಂಟಕ ಮುಪತಾಪತಪ್ತಮಾಗೆಯುಂ, ತನ್ನ ಶತ್ರುವಾಹಿನಿಗಳೊಡನೆ ವಾಹಿನಿಗಳಂದವಟಿಂದು ಕುಂದೆಯುಂ, ತನ್ನ ನಂದನಸಮೂಹದೊಡನೆ ನಂದನಸಮೂಹ ಮಾಶ್ರಿತಜನೋಪತಾಪಲೋಪಮಾಗೆಯುಂ, ಬಂದ ಬೇಸಗೆಯ ನವನೀಶ್ವರಂ ಕಂಡು ಬಗೆಗೊಂಡು.

ಚಂ|| ವನದೊಳೆ ಪೊಕ್ಕು ವರ್ತಿಸೆ ಜನಂ ಶಿಖಿಗಾಗೆ ಶಿಖಾಕಳಾಪ ವ |
ರ್ಧನ ಮಿನನಂ ಘನಸ್ಫುರಣ ಮಾವರಿಸುತ್ತಿರೆ ಬೆಂಚೆಗಂಚೆಗಳ್ ||
ಕಿನಿಸಿ ವಿಮುಗ್ಧಮಾನಸದೊಳೊಂದೆ ಚರತ್ಪಥಿಕರ್ಗೆ ಬೇವಸಂ |
ಜನಿಯಿಸೆ ಬಂದು ಪುಟ್ಟಿದುದಿದೇಂ ಘನಕಾಲಮೊ ಘರ್ಮಕಾಲಮೋ || ೧೮ ||

ವ|| ಎಂದುತ್ಪ್ರೇಕ್ಷಿಸಿ ನಿಜಾಂತಃಪುರದ ವಿಗ್ರಹಾಗ್ರಹದಿ ನುಪವನವಿಹಾರ ಶಿಶಿರೋಪಕೇಳೀ ಲೀಲೆಯಿಂ ಕಾಲೋಚಿತಕ್ರಿಯೆಯ ನಾಚರಿಸುತ್ತಿರ್ದೊಂದುದೆವಸಂ.

ಮ|| ಸಿರಿಯುಂ ತೇಜಮು ಮಿಷ್ಟವರ್ಗದೊಲವುಂ ಸ್ತ್ರೀಸ್ನೇಹಮುಂ ದೇಹಮುಂ |
ಸ್ಥಿರ ಮಲ್ಲೆಂದು ನಿವೇದಿಪಂತೆ ಕಿರಣಶ್ರೀ ತಾಳಿ ಕಾಯ್ಪೇಱಿ ರ ||
ಕ್ತ ರಥಾಂಗಕ್ಕೆ ವಿಯೋಗ ಮಾಗೆ ನಳಿನೀರಾಗೋದಯಂ ಪೋಗೆ ಮು |
ಯ್ಗರೆದಿರ್ದಂ ರವಿ ವಾರ್ಧಿಯೊಳ್ ಭುವನತಾಪೋತ್ಪಾದಿ ಗಿಂಬಕ್ಕುಮೇ || ೧೯ ||

ವ|| ಅನಂತರಂ.

ಕಂ|| ರಾಗಮ ದೊರೆಕೊಳಿಕುಂ ದೋ |
ಷಾಗಮನಮ ನೆಂದು ಪೇೞ್ವ ತೆಱದಿಂ ಸಂಧ್ಯಾ ||
ರಾಗಮ ದೊರೆಕೊಳಿಸಿತು ತಿಮಿ |
ರಾಗಮಮುಂ ಜಾರಚೋರಜನವಲ್ಲಭಮುಂ || ೨೦ ||

ದಿವಸದವಸಾನದೊಳ್ ಕಮ |
ಳವನಂ ನೀರೋಡಿ ನಾಡೆ ಬಾಡಿದುದೇಂ ಚಿ ||
ತ್ರಮೊ ಮಿತ್ರವಿರಹದೊಳ್ ಕೊರ |
ಗುವುದೆರಮೆ ರಜೋಧಿಕಂ ಜಡಾಶಯನಿಳೆಯುಂ || ೨೧ ||

ಉ|| [1]ಬೇ(ರ)ದಿ ನರ್ಕನಸ್ತಮಿಸಿದಂ ಸುಗಿದತ್ತು ತದಿಷ್ಟಕೋಕಮಂ |
ಕೇರುಹ ಮೆಂದು ಬೀಗದಿರು ಗೂಗೆ ಮುಲಂಗದಿರುತ್ಪಳಾಳಿ ಸಂ ||
ಸಾರಿಗೆ ನಿಟ್ಟೆ ಯಲ್ಲದು ಸುಖಂ ನಿಮಗಂ ಮುಗುಬಿಂತೆ ನಾಳೆ ದಲ್ |
ದಾರುಣದುಃಖ ಮೆಂದುಲಿವವೋಲ್ ಕೊಳೆರ್ವಕ್ಕಿಯಿ ನಾದುದುಬ್ಬರಂ || ೨೨ ||

ಕಂ|| ಜಿನಮತ ಮಿಲ್ಲದ ಪದದೊಳ್ |
ಜನಿಯಿಪ ಕುಮತದೊಳೆ ಯುಕ್ತಿ ವಲ ಮೇನಾನುಂ ||
ಮನಕೆಸೆವಂತೆಸೆದುವು ವಲ |
ವಿನನಿಲ್ಲದ ಪದದೊಳೊಗೆದ ತಮದೊಳ್ ಮಿಂಗಳ್ || ೨೩ ||

ವ|| ಆಗ ಳರಸ ನಾಸ್ಥಾನಮುಂ ವಿಸರ್ಜಿಸಿ ನಿಜಾಭರಣಕಿರಣಜಾಳಂಗಳೊಳ್ ನೆಣಸಿ ಬೆಳಪ ಕಳದೀಪಿಕಾಕಳಾಪಮೊಳಸಿ ಬಳಸೆ ಬಂದು ಕತಿಪಯಾಂಗರಕ್ಷಕ ಪರೀತ ನಪಸಾರಿಕಾಭರಣಭಾರ ನಾಗೆ.

---

[1] ಬೀಗದಿನರ್ಕ.

ಮ॥ ಉದಯಾದ್ರೀಂದ್ರಮನೇಱಿದಂ ಹಿಮಕರಂ ಪ್ರಾಸಾದಮಂ ಭೂಪ ನೊ ।
ಪ್ಪಿದ ನಿರ್ವಕ್ಕದ ತಾರಕಾಪ್ರಕಾರದಿಂ ಚಂದ್ರಂ ನೃಪಂ ರಾಜಲೋ ॥
ಕದಿ ನುದ್ಯೋತಿಸಿದಂ ಹಿಮಾಂಶು ರುಚಿಯಿಂ ದೇಹಾಂಶುವಿಂ ಭೂಭುಜಂ ।
ಮುದಮಂ ಕೌಮುದಕಿತ್ತ ನಿತ್ತ [1](ನ ಬಲಾ)ನೇತ್ರಕ್ಕೆ ಧಾತ್ರೀಶ್ವರಂ ॥ ೨೪ ॥

ವ॥ ಅಂತು ನಿಜರಾಜಲೀಲೆಯಂತೆ ಜಲಕ್ಕನಾದ ರಾಜಲೀಲೆಯಂ ಸವಯೋವಯಸ್ಯರಾಜಲೋಕ ಪರಿವೃತಂ ಪರಿಮಿತಾಂಗರಕ್ಷಕಪರೀತ ನಮೃತಕರಧಾಮಧವಳಪಟಳಪರಿಚ್ಛನ್ನಪರ್ಯಂಕನಿಷಣ್ಣ ನವಲೋಕಿಸುತ್ತು ಮಿರ್ಪಲ್ಲಿ.

ಶಾ॥ ಶ್ವೇತದ್ವೀಪ ಮಿದೆಂಬ ಶಂಕೆ ಮಿಗೆ ಜಂಬೂದ್ವೀಪಮಂ ಪಾಂಡುರುಕ್ ।
ಖಾತಂ ಕೂಡಿ ಪೊದಪ್ಪಿ ವಜ್ಜಳಿಪ ಚಂದ್ರಾಲೋಕಮಂ ಕಂಡು ತ ॥
ತ್ಪೂತಾತ್ಮಂ ನೆನೆದಂ ತನತ್ತು ಜಿನನಸ್ನಾನಕ್ಕೆ ಕಲ್ಪಾಮರ ।
ವ್ರಾತಂ ಮೇರುಗೆ ತಂದು ಪೊಯ್ಯೆ ಕವಿದಬ್ಧಿಕ್ಷೀರಪೂರೌಘಮಂ ॥ ೨೫ ॥

ವ॥ ಆಸಮಯದೊಳ್.

ಮ॥ ಇದು ರಾಗಾಂಗದ ಮೋಹವಾರ್ಧಿಗೆ ಪೊದಟ್ಟಾವಾರ್ನಳಜ್ವಾಲೆ ಮೇ ।
ಣಿದು ಸಂಸಾರಸುಖಾತ್ತಚಿತ್ತಗಹನಾತಂಕಕ್ಕೆ ಮೇಣ್ ದಾವ ಮಿಂ ॥
ತಿದು ವೈರಾಗ್ಯದ ರೂಪುಗಾಣಿಸುವ ದೀಪಜ್ಯೋತಿ ಯೆಂಬಂತಿರಾ ।
ದುದು ಭೋಂಕಲ್ ನಭದಿಂ ಪ್ರಭಾಸುಭಗಮುಳ್ಕಾಪಾತ ಮತ್ಯದ್ಭುತಂ ॥ ೨೬ ॥

ವ॥ ಆಗಳದಂ ಕಂಡು ಗರ್ಜನ್ಮೃಗೇಂದ್ರದಂಷ್ಟ್ರಮಂ ಕಂಡ ಮೇತಂಡದಂತೆಯುಂ, ದಾವ ಪಾವಕಜ್ವಾಲೆಯಂ ಕಂಡ ವನಶಿಖಂಡಿಯಂತೆಯುಂ, ಗರುಡಚಂಚುವಂ ಕಂಡ ಕಂಚುಕೀಂದ್ರನಂತೆ ಯುಂ, ಭಯಂಗೊಂಡು.

ಕಂ॥ ಪುತ್ರಕಳತ್ರಪರಿಗ್ರಹ ।
ಗಾತ್ರಧನೈಶ್ವರ್ಯಮೆಂಬಿವಾರ್ಗ ಮನಿತ್ಯಂ ॥
ಧಾತ್ರಿಯೊಳ್ತೆಂಬುದ ನೀಗಳ್ ।
ಸೂತ್ರಿಸಿತೆನ್ನೆರ್ದೆಯೊಳುಳ್ಕೆ ಬಿಜ್ಜಿದ್ದೀಯುಳ್ಕಂ ॥ ೨೭ ॥

ವ॥ ಎಂದು ನಿರ್ವೇಗಪರ ನಾಗಿ.

---

[1] ಮೂಲಪ್ರತಿಗಳಲ್ಲಿ- ಕೌಮುದಕಿತ್ತ ನಿತ್ತು ರಮಣೀನೇತ್ರಕ್ಕೆ-ಎಂದಿರುವುದು. ಚಂದ್ರನಮತ್ತು ಅರಸನ ವಿಷಯವನ್ನು ಹೇಳುವ ಈ ಪದ್ಯದಲ್ಲಿ ಚಂದ್ರನಪರವಾಗಿ ಒಂದುವಾಕ್ಯವೂ ಅದಕ್ಕೆಸದೃಶ ವಾಗಿ ರಾಜನಪರವಾಗಿ ಮತ್ತೊಂದು ವಾಕ್ಯವೂ ಇರುವುದರಿಂದ ಚಂದ್ರನು, ಮುದಮಂ ಕೌಮುದ ಕಿತ್ತಂ ಧಾತ್ರೀಶ್ವರಂ ಅಬಲಾನೇತ್ರಕ್ಕೆ ಮುದಮಂ ಇತ್ತಂ ಎಂದು ಎರಡು ವಾಕ್ಯವಿರುವುದು ಯುಕ್ತ ವಾದುದರಿಂದ "ನಿತ್ತು ರಮಣೀ" ಎಂಬ ಭಾಗವನ್ನು "ನಿತ್ತನಬಲಾ" ಎಂದು ತಿದ್ದಿದೆ.

ಕಂ|| ಸೊದರಿರೆ ಕಟ್ಟಿಲೆಗೋಡುವ ।
ಜಡರವೊಲಿನ್ನವರ ಮಱದು ಮಱಯದೆ ಮಱಿದಿ ॥
ದರ್ಪಡೆಪನಿ ನಾದುದೆ ಸಾಲ್ವುದು ।
ತಡೆದಿರದಾಂ ಪಱಿವೆ ನುಱದೆ ಸಂಸೃತಿಲತೆಯಂ ॥ ೨೮ ॥

ಮ|| ತನು ಪೆಂಪಿಂಗೆಡೆಯೇ ವಯೋಗತಿ ಕುಲೀನಾಚಾರಮೋ ಸೇವೆಯೊಳ್ ।
ಕನಕಂ ಸೊಕ್ಕಿಸದೇ ಕಷಾಯ ಮಿನಿದೇ ಭೋಗಂ ಭಯಂದೋಱದೇ ||
ವನಿತಾಸಂಗಸುಖಂ ಜಘನ್ಯಮೆನೆ ತಪ್ಪೇ ರಾಜಲೀಲಾನುವ ।
ರ್ತನೆ ದೋಷಾವೃತಮಲ್ಲದೇ ಕ್ಷಿತಿ ಮನಕ್ಕುದ್ವೇಗಮಂ ಮಾಡದೇ ॥ ೨೯ ॥

ಉ|| ನಿಟ್ಟಿ ಯಿದೇ ಬೆಡಂಗೆ ನರರೀಖಳಸಂಸೃತಿಯೊಳ್ ಜವಂಜವಂ ।
ಗೆಟ್ಟೊಡೆ ಮೃತ್ಯು ಸತ್ತೊಡೆ ಬಲಂ ಸಲೆ ನಿಂದೊಡೆ ಮುಪ್ಪು ತಪ್ಪುಕೀ ॥
ಳ್ವಟ್ಟೊಡೆ ಪೊಗದಂತಿರಸುನಂಬುಗೆಗೊಟ್ಟೊಡೆ ದೋಗರಾಜಿ ಕೋ ।
ಳ್ವಟ್ಟೊಡೆ ಕಾಲ ಮುಯ್ದು ಕಡೆಗಾಲಮ ನೆಯ್ದುದೊಡಾತ್ಮದೇಹಮಂ ॥ ೩೦ ॥

ಮ|| ಅತಿನಿಸ್ಸಾರ ಮಿದೆಲ್ಲ ಮೆಂದಱದು ಮೆನ್ನೊಳ್ ಮತ್ತೆ ಸಂಸಾರಮು ।
ಹ್ಯತೆ ಮತ್ತಾಪ್ತಕಳತ್ರಪುತ್ರಜನಮೋಹಂ ಮತ್ತೆ ರಾಜ್ಯಾಂಗಸಂ ॥
ಗತಿ ಮತ್ತಿಷ್ಟಸುಖೋಪಭೋಗರತಿ ಮತ್ತರ್ಥಾರ್ಜನಾಪೇಕ್ಷೆ ಮ ।
ತ್ತೆ ತದಾನುಗ್ರಹನಿಗ್ರಹಕ್ರಿಯೆ ಗಡೇಂ ಚಿಃ ಕಷ್ಟ ಮಿಾಚೇಷ್ಟಿತಂ ॥ ೩೧ ॥

ಕಂ|| ಸಮನಿಸುವ ಸಹಜಶಾರೀ ।
ರಮಾನಸಾಗಂತುಕಪ್ರಕರ ಮೆನಿಸಿದ ನಾ ॥
ಲ್ಕು ಮುದಗ್ರಪೀಡೆ ಗೆಡೆಯಾ ।
ದ ಮಾನವಂಗಾವ ಭವದೊಳಂ ಸುಖ ಮುಂಟೇ ॥ ೩೨ ॥

ಒಡಲಂ ಸಂಸೃತಿಲತಿಕೆಯ ।
ಮಡಲಂ ಬಹುದುಃಖಬಹಳಲಹರಿಕೆಗಳ ಪೆ ॥
ರ್ಗಡಲಂ ಸುಖಮುಖಮುದ್ರೆಯ ।
ಪೊಡಲಂ ಬಿಡಲಱಯದಂಗೆ ನಿರ್ವೃತಿ ಯುಂಟೇ ॥ ೩೩ ॥

ಚಂ|| ಬಗೆಗಿಡೆ ಮುಪ್ಪು ಚಪ್ಪರಿಸದನ್ನೆಗ ಮುನ್ನತಶಕ್ತಿ ಕುಂದದ ।
ನ್ನೆಗ ಪೆಳಮೆಂಡಿ ರಿಚ್ಚೆ ಕಿಡದನ್ನೆಗ ಮೆತ್ತಿದ ಕುತ್ತ ಪೊತ್ತದ ॥
ನ್ನೆಗ ಮನುಜೀವಿಗಳ್ ಮನದೆ ಬೇಸಱದನ್ನೆಗ ಮುಗ್ರಮೃತ್ಯು ಬಂ ।
ದುಗುಬ್ಬಿದಗದನ್ನೆಗಂ ಪರಮದೀಕ್ಷೆಗುಪೇಕ್ಷಿಸಿದಂ ವಿವೇಕಿಯೇ ॥ ೩೪ ॥

ಚಂ|| ಗತಬಲನಾಗಿ ವಜ್ರಧರನಲ್ತು ವಯೋಧಿಕನಾಗಿ ತಾರ್ಕ್ಷ್ಯನ ।
ಲ್ತತಿಜಡಭಾವಿಯಾಗಿ ಕಡಲಲ್ತು ನಿಜಶ್ರುತಿಶೂನ್ಯನಾಗಿ ಮಾ ॥
ರುತಭುಗುಮಲ್ತು ದಂಡಧರನಾಗಿ ದಿಟಂ ಜವ ನಲ್ತು ನೀರದ ।
ಸ್ಥಿತಿಗವಕಾಶನಾಗಿ ಗಿರಿ ಯಲ್ತೆನೆ ವೃದ್ಧ ನಿದೇಂ ವಿರುದ್ಧನೋ ॥ ೩೫ ॥

ಚಂ|| ಸುದತಿಯ ರಾನನಾಂಬುಜವನಕ್ಕೆ ಹಿಮಂ ನಯನೋತ್ಪಲಕ್ಕೆ ಘ ।
ರ್ಮದ ಬಿಸಿಲಂಗವಲ್ಲರಿಗೆ ರೌದ್ರದವಾಗ್ನಿ ಮನೋಗಜಕ್ಕೆ ಸಿಂ ॥
ಗದ ದನಿ ರಾಗನಾಗನಿವಹಕ್ಕೆ ನವಿಲ್ ಪ್ರಣಯಪ್ರದೀಪಸಂ ।
ಪದಕೆ ಸಮೀರ ನಲ್ತೆ ರತಿಲಂಪಟವೃದ್ಧನ ಭೋಗದಾಗ್ರಹಂ ॥ ೩೬ ||

ಕಂ|| ನಿಱಿದಲೆಯಿಂ ಹಲ್ಲಿಂದಂ ।
ನೆಱೆ ತಣಿದಿರದಾತ್ಮಸಾರಸರ್ವಸ್ವಮುಮಂ ॥
ನೆಱೆಗೊಂಡು ತೇಪೆ ಜರೆ ಮ ।
ತ್ತುಱುದಂಡಂ ಕೊಂಡೊಡಲ್ಲದೆಂತುಂ ನಡೆಸಳ್ || ೩೭ ||

ಉ|| ಚಿಂತಿಪ ಸುಯ್ಯ ಜಾನಿಸುವ ಕಂದುವ ಕುಂದುವ ದಿಟ್ಟಿಗೆಟ್ಟು ವಿ ।
ಭ್ರಾಂತಿಪ ಲಜ್ಜೆಯುಂ ಮಱೆವ [1]ಕೊಳ್ವಗ ದಾವ್ತರ ಮಾತುಗೇಳದಿ ॥
ರ್ಪಂತುಟ ನೊಲ್ದ ಗಲ್ದವರೊಳಾಗಿವ ರಂಗನೆಯರ್ಕಳೀಜರಾ ।
ಕಾಂತ ನರಂಗೆ ತಾ ನಗಲದಾಗಿವಳೇಂ ವಿಪರೀತವೃತ್ತಿಯೋ ॥ ೩೮ ||

ವ|| ಅದಲ್ಲದೆಯುಂ.

ಮ|| ನರಕೋದ್ಯದ್ಗತಿ ಕಟ್ಟು ಕುಟ್ಟು ಕಡಿ ಸೀಳ್ ಕೊಲ್ಲೆಂಬ ದುಃಖಕ್ಕೆ ತಾ ।
ಯ್ಗರು ತಿರ್ಯಗ್ಗತಿ ಪೂಡು ಪೊಯ್ ನಡೆಸು ಕೊಯ್ ಮೂಗೂಱೆ ಪೇಱೆಂಬ ನಿ ॥
ಷ್ಠುರನಿಷ್ಪೀಡೆಗಡರ್ಪು ಮರ್ತ್ಯಗತಿ ಕುತ್ತಂ ಮುಪ್ಪು ಕೊಳ್ವಾವು ದ ।
ಳ್ಳುರಿ ಶೋಕಂ ಸಿಡಿಲಸ್ತ್ರ ಮೆಂಬಿವಱೆ ನಪ್ಪುಗ್ರಾರ್ತಿಗಾಲಂಬನಂ ॥ ೩೯ ||

ಚಂ|| ಸುರಗತಿ ಜೀವಿತಾಂತ್ಯ ಮಱುದಿಂಗಳದಿನ್ನೆನೆ ಮುನ್ನೆ ಶೋಕದಿಂ ।
ಕೊರಗುವ ಸುಯ್ಯ ಬಾಯಱುವ ನಲ್ಲರಗಲ್ಕೆಗಬಿಲ್ವ ವಸ್ಥೆಗಾ ||
ಗರ ಮುದಱೆಂ ಚತುರ್ಗತಿಯ ನಾರಕರೊಳ್ ತಿರಿಕಂಗಳೊಳ್ ಮನು ।
ಷ್ಯರೊಳನಿಮೇಷರೊಳ್ ಸುಖಮ ನೀಖಲಸಂಸೃತಿ ಪುಟ್ಟಲೀಗುಮೇ ॥ ೪೦ ||

ಉ|| ಪುಟ್ಟದ ಯೋನಿ ಪೊಂದದೆಡೆ ಮಾಡದ ಪಾತಕ ಮೆಯ್ದದಟ್ಟಿಗಂ ।
ಮುಟ್ಟದ ನೋವು ಮಚ್ಚಿರದತಿವ್ಯಸನಂ ಗೆಡೆಗೊಳ್ಳದಾಶ್ರಯಂ ॥
ಕಟ್ಟದ ಕರ್ಮ ಮಾಗದ ಪರಾಭವ ಪೊತ್ತದ ಕುತ್ತ ಮನ್ಯರಿಂ ।
ಕಿಟ್ಟದ ಕೇಡು ದೇಹಿಗಳೊಳಿಲ್ಲೆನೆ ಸಂಸೃತಿ ಸೌಖ್ಯಸಾರಮೇ || ೪೧ ॥

[1] ಕೂಱಿಲ್ವಗ

ಮ॥ ಬಹುಪಲ್ಯೋಪಮಸಾಗರೋಪಮ ಮೆನಿಪ್ಪಾಯುಷ್ಯರಂ ವಿಸ್ಮಯಾ ।
ವಹಸಾಮರ್ಥ್ಯರು ಮಪ್ಪ ದೇವರುಮ ನೇಕಸ್ವರ್ಗದುರ್ಗಸ್ಥರಂ ॥
ಗಹನಂಗೆಯ್ಯದೆ ಕೊಲ್ವ ನೆಂದೊಡೆಱಿದಲ್ಪಾಯುಷ್ಯಸಾಮರ್ಥ್ಯ ಮಾ ।
ಮಹಿಯೊಳ್ ಮಾನವಕೀಟಕೋಟಿಯು ಮಿದೇಂ ಕಾಳಂಗ ಹೇಳಾಂಚಿತಂ ॥ ೪೨ ॥

ಮ॥ ನಿಜಸೇನಾಪತಿ ಮುಪ್ಪು ದಕ್ಷಸಚಿವಂ ಮೋಹಂ ಮಹಾದೇವಿ ತೃ ।
ಷ್ಣೆ ಜಯೋದಗ್ರಪರಿಗ್ರಹಂ ವಿಷಯರಾಗಂ ಚಕ್ರ ಮಂಗಾಮಯಂ ॥
ಗಜವಾಜಿಪ್ರಕರಂ ಕಷಾಯ ಮೆನೆ ಮುಯ್ವೆತ್ತಿರ್ದ ಸಂಸಾರಘೋ ।
ರಜಗದ್ರಾಜ್ಯದೊಳಾರ ನಾಕ್ರಮಿಸ ನುಗ್ರಂ ಕಾಲಚಕ್ರೇಶ್ವರಂ ॥ ೪೩ ॥

ವ॥ ಎಂದಿಂತು ಪರಮನಿರ್ವೇಗಪರನಾಗಿ ನುಡಿಪನಿತಱಿಂ ಮಾಣದೆ ಮತ್ತಂ ದ್ವಾದಶಾನುಪ್ರೇಕ್ಷೆಗಳ ನನುಗತಿಯಿ ನನುಸ್ಮರಿಸಲ್ ಬಗೆದು.

ಮ। ಸ್ರ॥ ಜಳರೇಖಾಸಂಚಳಂ ಜವ್ವನ ಮಮರಧನುರ್ಜಾಲ ಮಂಗಂ ತಟಿಚ್ಚಂ ।
ಚಳ ಮೈಶ್ವರ್ಯಂ ನದೀಬುದ್ಬುದಚಯಚಪಳಂ ಪುತ್ರಮಿತ್ರಾನುಬಂಧಂ ॥
ಜಳಭೃದ್ವಾರಿಪ್ಲವಂ ಸಂಚಿಸಿದೊಡಮೆ ಹಿಮವ್ಯಾಕುಳಂ ಸ್ತ್ರೀಕುಳಂ ಸಾ ।
ನಿಳವೀಥೀದೀಪ್ತರೋಚಿಸ್ತರಳ ಮಖಿಳಭೋಗೋಪಭೋಗಾನುಬಂಧಂ ॥ ೪೪ ॥

ಉ॥ ಕಾಯದು ಪುತ್ರಮಿತ್ರತತಿ ಕಾಯದು ತಂದೆಯ ತಾಯ ಕೆಯ್ವಲಂ ।
ಕಾಯದು ದೇವತಾಗಣದ ರಕ್ಷಣೆ ಕಾಯದು ವಜ್ರಪಂಜರಂ ॥
ಕಾಯದು ಮಂತ್ರತಂತ್ರವಿಧಿ ಕಾಯದು ದುರ್ಗಮದುರ್ಗದಾಶ್ರಯಂ ।
ಕಾಯದನಂತವಾಹಿನಿ ಜವಂ ಕೊಲೆ ಧರ್ಮಮೆ ಕಾಯ್ಗು ಮಾರುಮಂ ॥ ೪೫ ॥

ಕಂ॥ ಸಮಸಂದು ಪುಣ್ಯಮಂ ನೆರ ।
ಪುವಲ್ಲಿ ಪಾಪಮ ನುಪಾರ್ಜಿಪಲ್ಲಿ ಬೞಿಕ್ಕಂ ॥
ತವಱ ಫಲ ಮಪ್ಪ ಸುಖದುಃ ।
ಖಮ ನನುಭವಿಪಲ್ಲಿ ಜೀವ ನೊರ್ವನೆ ಪೆಱನೇ ॥ ೪೬ ॥

ನೆಗೞ್ದಿನಗೆ ತಂದೆ ತಾಯ್ ಸೊಸೆ ।
ಮಗಳಕ್ಕಂ ತಂಗಿ ತಮ್ಮನಣ್ಣಂ ಭಾವಂ ॥
ಮಗ ನಳಿಯಂ ಮೆಯ್ದುನ ನ ।
ತ್ತಿಗೆ ನಾದಿನಿ ಮಾವ ನತ್ತೆ ಪೆಂಡಿತಿ ಗಂಡಂ ॥ ೪೭ ॥

ಎಂಬೀ ಮೋಹದ ಬಂಬಲ ।
ಪಂಬಲೊಳೇಂ ಮುನ್ನೆ ತನ್ನ ದೇಹಾಶ್ರಯದಿಂ ॥
[ದಂ] ಬಂದನುಬಂಧನ[ತನು ।
[1]ವಂ] ಬೇಱಿನೆ ದೇಹಿಗನ್ಯವಸ್ತು ವದುಂಟೇ ॥ ೪೮ ॥

[1] ತಾಂ.

ಮ॥ ಬಿಸುನೆತ್ತರ್ ತೊಗಲೆಲ್ವು ಕರ್ಬಸು ಕರುಳ್ ಹಿಂಪೊಂಡೆ ಖಂಡಂ ಮಿದುಳ್ ।
ಬಸೆ ಶುಕ್ಲಂ ಕ್ರಿಮಿ ಕೀವು ಕೀಣಿ ಕೊಳೆ ಸಿಂಬುಳ್ ಸಿಳ್ಳುಗಳ್ ಲೋಳೆ ಲಾ ॥
ಳೆ ಸರೆನ್ಮೂತ್ರಜಳಂ ಮಳಂ ಮಱುಕ ಮುಗ್ರವ್ಯಾಧಿ ದುರ್ಗಂಧ ಮು ।
ರ್ವಿಸುಗುಂ ಪೇಸು ಮತಂಕರಂ ಕಿಸುಗುಳಂ ಕಾಯಂ ಶುಚಿಪ್ರಾಯಮೇ ॥ ೪೯ ॥

ಕಂ॥ ನಿಯುತಂ [1][ಬಳಸಿದ ವಾಯು] ।
ತ್ರಯದಿ ನಧಸ್ತಿರ್ಯಗೂರ್ಧ್ವ ಭೇದವಿಕಲ್ಪ ॥
ತ್ರಯದಿಂ ದ್ವಿಸಪ್ತರಜ್ಜು ।
ಚ್ಚ್ರಯದಿಂ ತ್ರಸನಾಳಗರ್ಭ ಮಿಕ್ಕುರ್ಗಂ ಲೋಕಂ ॥ ೫೦ ॥

ವ್ರತಮಂ ಕೊಂಡಱದೊಡೆ ಪರ ।
ಮತಮಂ ನಂಬಿದೊಡೆ ಬಳಕಷಾಯಂ ಮನದೊಳ್ ॥
ವೃತಮಾದೊಡೆ ವಿಷಯದೊಳಭಿ ।
ಮತ ಮಾ[ದೊ]ಡೆ ಮಷ್ಟಕರ್ಮದಾಶ್ರಯ ಮಕ್ಕುಂ ॥ ೫೧ ॥

ಪರಮಗುಣಮೊಂದೆ ಸಂಯಮ ।
ಗೆರಡು ತಪಂ ಮೂಱು ಗುಪ್ತಿ ನಾಲ್ಕುಕಷಾಯೋ ॥
ತ್ಕರದಱ ವೆಯ್ದಾಚಾರಂ ।
ದೂರಿಕೊಳಿಸಿದ ಸುಕೃತದೊದವು ಸಂವರೆ ಯಕ್ಕುಂ ॥ ೫೨ ॥

ಚಾರುತಪೋವ್ರತಗರುಡೋ ।
ದ್ಗಾರದ ಮಣಿಯಿಂದೆ ದೋಷವಿಷಧರವಿಷಸಂ ॥
ಹಾರಮ ನಾಗಿಪ ಮುನಿವೃಂ ।
ದಾರಕನ ನೆಗೞ್ತೆ ಕರ್ಮನಿರ್ಜರೆ ಗಾರ್ಮ ॥ ೫೩ ॥

ಪ್ರತಿಭೆಗೆ ಫಲ ಮಱವಿನ ಗತಿ ।
ಗತಿಗೆ ಫಲಂ ವಿಷಯವಿರತಿ ವಿರತಿಗೆ ಫಲ ಮಾ ॥
ರ್ಹತಪರಮದೀಕ್ಷೆ ದೀಕ್ಷೆಗೆ ।
ಸುತಪಂ ಫಲ ಮೆನೆ ನೆಗೞ್ದುದದೆ ಬೋಧಿ ವಲಂ ॥ ೫೪ ॥

ದಯೆ ವೃಕ್ಷಮೂಲ ಮೆಸಿಕುಂ ।
ನಿಯಮಂ ವೃತಿ ಶೀಲ ಮಾಳವಾಳ ಮೆನಲ್ಕೇ ॥
ಱಿಗ್ಗಿಯ ನಾಳ್ದು ಸುಖದ ಫಲಪ್ರಾ ।
ಪ್ತಿಯ ನಾಗಿಪ ಕಲ್ಪವೃಕ್ಷ ಮಲ್ಲದೆ ಧರ್ಮಂ ॥ ೫೫ ॥

[1] ನಿಯುತಂ ದವಳಯ ತ್ರಯ.

ನಾರಕತಿರ್ಯಙ್ನರಬೃಂ ।
ದಾರಕರೆನೆ ಗತಿಚತುಷ್ಟಯಂಗಳ್ ಸಲೆ ಸಂ ॥
ಸಾರದ್ರವ್ಯಕ್ಷೇತ್ರಾ ।
ದ್ಯಾರೋಪಿತಭೇದದಿಂದ ಮದು ಪಂಚಾತ್ಮಂ ॥ ೫೬ ॥

ವ॥ ಎಂದು ಭಾವಿಸುತ್ತುಂ ಮಾಮಹಾತ್ಮಂ.

ಕಂ॥ ಆವಳುಮ ನುಡಿದು ಮುಕ್ತಿ ।
ಶ್ರೀವಧುಗೆ ಪಲುಂಬುತಿರ್ಪ ನೀವಿಭು ಬಿಟ್ಟೆನಂ ॥
ದೇವಯ್ಸ್ಲ ಮುಳಿದಪ್ಪೋಲ್ ನಿ ।
ದ್ರಾವಧು ಬಾರದಿರೆ ಕಳೆದ ನಂದಿನ ದಿನಮಂ ॥ ೫೭ ॥

ವ॥ ಆ ಸಮಯದೊಳ್.

ಕಮಳಾರ್ಥಿ ಮಂದಭಾವಂ ।
ಕುಮುದಾತ್ತ ಮಪಾಯಗಮನಮೋಚನಚತುರಂ ॥
ಭ್ರಮರಹಿತಂ ವೈಭಾತಿಕ ।
ಸಮೀರ ನೆಸಗಿದುದು ಪೋಲ್ತು ಸುವಿಧಿಯ ಬಗೆಯಂ ॥ ೫೮ ॥

ಉ॥ ಮಿತ್ರಸಮಾಗಮಕ್ಕೆ ಸೆಡೆದಂಬರಮಂ ಬಿಡ(ತಿರ್ಪಶೇಷ) ನ ।
ಕ್ಷತ್ರಗಣಂ ಕಳಲ್ವಿನ ಮಗಲ್ಚಿ ನಿಶಾಂತವಿರಕ್ತ ನಪ್ಪನಿ ॥
ಗೋತ್ರ ನೆನಿಪ್ಪ ಸತ್ಕುವಳಯೋದ್ಗತಲಕ್ಷ್ಮಿಯ ನೊಕ್ಕು ಪೋಗಲಿ ।
ರ್ಪತ್ರಿಜ ನಂದು ಕನ್ನಡಿಸಿದಂ ಸುವಿಧೀಶನ ಚಿತ್ತವೃತ್ತಿಯಂ ॥ ೫೯ ॥

ವ॥ ತದನಂತರಂ.

ಚಂ॥ ತವೆ ತಮದೊಡ್ಡು ರಾಜಿಸಲೊಡರ್ಚೆ ದಿಗಂಬರಲೀಲೆ ಪುಟ್ಟೆ ಭೂ ।
ಭುವನಜನಕ್ಕೆ ದರ್ಶನವಿಶುದ್ಧತೆ ಕುಂದೆ ಬಹುಪ್ರತಾರಕೋ ॥
ದ್ಭವರುಚಿ ನೀರಜಸ್ಥಿತಿಯ ನಾತಪದೇಟಿಗ್ಗಿಯ ನಾಗಿಸಲ್ ಜಿನಂ ।
ಸಿವಿಗೆಯ ನೇಱುವಂ ತುದಯಶೈಲಮ ನೇಱಿದ ನಂಬುಜಪ್ರಿಯಂ ॥ ೬೦ ॥

ಕಂ॥ ಕ್ರಮರಾಜ್ಯಲಕ್ಷ್ಮಿಗವಚ ।
ತ್ತಮಳತಪೋಲಕ್ಷ್ಮಿಗೆಳಸುವ ನಘನ ಮನಮಂ ॥
ಕುಮುದಿನಿಗವಚತ್ತ ದಳ ।
ತ್ಕಮಳಿನಿಪೇಟಿಾಗಳೇನುದಾಹರಿಸಿದಳೋ ॥ ೬೧ ॥

ವ॥ ಅಂತು ನೇಸಮರ್ಡಲೊಡೆ ಮಾಮಹಾನುಭಾವನ ವಿರಾಗ ನಿರತಮಾನಸ ಸರೋಜಮ ನಲರ್ಚಲ್ ಮನಂದಂದು.

ಮ|| ನೆರೆದೆಱ್ತಿರ್ಪಿನಮಂಡಳಂಗಳಿವು ಬೇಱಿಂಬಂತೆ ಬಂದರ್ ದಿಗಂ ।
ಬರಮಂ ವ್ಯಾಪಿಸೆ ಭೂಷಣಾಂಶುಪಟಳಂ ಸಾರಸ್ವತಾದಿತ್ಯವ ॥
ಹ್ನ್ಯರುಣವ್ಯಾಹತಗರ್ದತೋಯತುಷಿತಾರಿಷ್ಟರ್ಕ ಳೆಂಬೆಣ್ಬರುಂ ।
ವರಲೋಕಾಂಕಿತದೇವ ರತ್ನಮುಳಭಾವರ್ ಬ್ರಹ್ಮಲೋಕಾಂತದಿಂ || ೬೦ ||

ವ|| ಅಂತು ಬಂದು.

ಕಂ|| ಸುರಲೋಕಸುರಭಿಕುಸುಮೋ ।
ತ್ಕರಗಂಧಾಕ್ಷತದಿ ನಭವನಡಿವಳಿಗರ್ಗಳ ನಾ ||
ದರದಿಂ ದರ್ಚಿಸಿ ಮುಕುಳಿತ ।
ಕರಕಮಳರ್ ನುಡಿದ ರತಿಗಭೀರಧ್ವನಿಯಿಂ || ೬೩ ||

ಪರಮೇಷ್ಠಿಯೆ ಸಕಳಚರಾ ।
ಚರಗುರು ವೆ(ಸು) ವಿದಿತಸಕಳತತ್ವನೆ ತೀರ್ಥಂ ॥
ಕರನೆ ಭವಜಲಧಿತರಣಾ ।
ತರ ನಾದ್ಯೆ ವುಟ್ಟಿದಱಿತಸಂತಸ ಮೆಮ್ಮೊಳ್ || ೬೪ ||

ಮ|| ಸಹಜಂ ಮುನ್ನಮೆ ದೇವ ನಿನ್ನ ಮನದೊಳ್ ವೈರಾಗ್ಯ ಮುಂಟಾದೊಡಂ ।
ಮಹಿಶಂ ರಕ್ಷಿಪ ಧರ್ಮಸಂತತಿನಿಮಿತ್ತಂ ರಾಜ್ಯಮಂ ತಾಳ್ದಿ ನಿ ॥
ಸ್ಪೃಹ ನಾಗಿರ್ಪವೊಲಿರ್ದೆ ನಿನ್ನೆವರ ಮಾಗಳ್ ದ್ರೋಹದುರ್ಮೋಹನಿ ।
ಗ್ರಹನಿಷ್ಠಾಗ್ರಹ ನಾದೆ ಲೋಕಹಿತರಾರೆಲ್ಲಂದದಿಂ ನೀಂಬರಂ || ೬೫ ||

ಮ|| ನವ ಮಂದಾರಲತಾಂತಗಂಧ ಮಿರೆ ಮೆಯ್ವೆತ್ತನ್ಯಪುಷ್ಪಪ್ರತಾ ।
ನವ ನಾಘ್ರಾಯಿಪ ತುಂಬಿಯಂತೆ ವಿನಮದ್ಗೀರ್ವಾಣನಿರ್ವಾಣ ಸೌ ॥
ಖ್ಯ ವಿರಲ್ಕಿಕ್ಷಿತಿರಾಜ್ಯಸಂಪದವು ನುಂತುಂ ನಚ್ಚಿ ಮೆಚ್ಚಿರ್ದೊಡೀ ।
ಭುವನಾಧೀಶ್ವರ ನಿನ್ನ ಬೋಧದೆಸಕಂ ಚುನ್ನಕ್ಕೆ ಪಕ್ಕಾಗದೇ || ೬೬ ||

ಕಂ|| ಕಾಗೆ ಸವಿವಂತು ಸವಿಗುಮೆ ।
ರಾಗಿಸಿ ಮಿಂದುಳಿಯ ನೀರ ನಂಜೆ ಜಡಾತ್ಮರ್ ॥
ಭೋಗಿಪವೋಲ್ ನಿಮ್ಮನ್ನರ್ ।
ಭೋಗಿಸುವರೆ ದುರಿತಸುಖವ ನೈಹಿಕಸುಖಮಂ || ೬೭ ||

ನಖದಿಂ ಕೆಱೆಂಕುದುಱಿಸುವ ।
ಸುಖಮುಂ [1] ಬಱಿಕೊ(ಳ್ಳ)ನುರಿವ ದುಃಖಮು ಮೆಂತಂ ||
ತಖಿಳವಿಷಯೋಪಭೋಗದ ।
ಸುಖಲವ ಮನುದುಃಖ ಮನಘ ನೀ ನಱಿಯದುದೇ || ೬೮ ||

1 ಬಱಿಕೊಳ್ಳನುರಿವ.

ಕಂ॥ ನಿನ್ನಂ ಪ್ರತಿಬೋಧಿಪು ದೆ ।
ಗ್ಗೆನ್ನದಿರಧಿಕಾರ ಮೆಮಗಿದಱಿವಿನ ಮದವ ॥
ಲ್ಲುನ್ನತ ಪೇೞ್ ಬೆಳಗುವುದೇ ।
ಕನ್ನಡಿಯುಂ ಬೆಳಗುವಂತೆ ಕೆಯ್ಗ್ಗಾವಲಿಯುಂ ॥ ೧೯ ॥

ಗುರುಗಳ ಮುಂದೋದುವುದುಂ ।
ಪರಿವಿಡಿಗೆಯ್ವಂತೆ ನಿನ್ನ ಬಗೆದುದನೆ ಪುನಃ ॥
ಸ್ಮರಣಕ್ಕೆ ತಂದೆ ವಲ್ಲದೆ ।
ಪರಿಬೋಧಿಪ ರಲ್ಲೆ ಮಖಿಳರತ್ನಾಂಬುನಿಧೀ ॥ ೨೦ ॥

ವ॥ ಅದಱಿಂದಂ.

ಮ॥ ಅದಟಂ ¹ಮಿೞ್ತುವ (ತೊತ್ತಱಿಂ) ಮಿದಿವ ಕಾಳವ್ಯಾಳದಂತಾಳಿಯುಂ ।
ಮೊದಲಿಂ ಕೀೞ್ವ ಸವರ್ಪದರ್ಪಕನ ಕೂರ್ಪಂ ಮೊಟ್ಟೆಮೂೞ್ಪ ಗ್ರಹೋ ॥
ಹದವಜ್ವಾಳೆಯು ನಾಂತು ತೞ್ಗಿಸುವ ಮುಕ್ತಿಶ್ರೀಯು ಶೃಂಗಾರಪೂ ।
ರದೊಳೋಲಾಡುವ ನಿನ್ನ ಪೇಕ್ಷೆ ²ನಿಮಿರ್ಗುಂ ಭದ್ರಂ ಶುಭಂ ಮಂಗಳಂ ॥ ೨೧ ॥

ವ॥ ಎಂದು ಪ್ರತಿಬೋಧಿಸಿ ಬೀೞ್ಕೊಂಡು ಪೋಗಲೊಡಂ.

ಉ॥ ಶಾರದನೀರದಪ್ರಸರಮಧ್ಯದೊಳುಜ್ಜ್ವಳಿಸಿರ್ದ ಚಂದ್ರಮ ।
ಶ್ರೀರುಚಿ ಗೌರಸಂಗತಿಯಿ ನಿರ್ಮಡಿನಿರ್ಮಳಮಪ್ಪವೋಲ್ ರಜೋ ॥
ದೂರನ ನಿಶ್ಚಳಾಶಯದೊಳಾಗಳವರ್ ಪ್ರತಿಬೋಧಿಸಲ್ಕೆ ಸಂ ।
ಸಾರಶರೀರಭೋಗವಿರತಿತ್ರಯ ಮುಗ್ಗಳವಾಯ್ತು ನರ್ಗಳಂ ॥ ೨೨ ॥

ವ॥ ತದನಂತರಂ.

ಮ॥ ಅವನೀಶಂ ನಿಜಮಂತ್ರಿಮಂಡಳಮಹಾಸಾಮಂತ ಶುದ್ಧಾಂತಬಾಂ ।
ಧವವರ್ಗಕ್ಕೆ ಸಮಂತು ಸೂಚಿಸಿ ನಿಜಾಭಿಪ್ರಾಯಮಂ ತೂರ್ಯಘೋ ॥
ಷ ಮವಶ್ಯಂ ದೆಸೆಯುಂ ಪಳಂಚೆ ಸಿರಿದೊಂದುತ್ಸಾಹಮಂ ಮಾಡಿ ಗೌ ।
ರವದಿಂ ಕೀರ್ತಿಧರಂಗೆ ಕೊಟ್ಟ ನಖಿಳಾಂಗಪ್ರಾಜ್ಯಮಂ ರಾಜ್ಯಮಂ ॥ ೨೩ ॥

ವ॥ ಅಂತು ಚಿರಂತನನರೇಂದ್ರಚಾರು ಚರಿತಕೀರ್ತಿಧರ ನಪ್ಪ ಕೀರ್ತಿಧರನ ನನ್ವಯಶ್ರೀಯೊಳಿಟ್ಟು ಮತ್ತಮುೞಿದ ನರದೇವಪ್ರಮುಖತನಯರುಮ ನವರ್ಗವರ್ಗೆ ತಕ್ಕ ವೃತ್ತಿಪ್ರಪತ್ತಿಯಿಂ ದೊಡಂಬಡಿಸಿದಾಗಳ್.

¹ ಮಿೞ್ತುವ ಮಿೞ್ತುವಂ ² ನಿಮಗಿಂ.

ಚಂ|| ಮಣಿಯದೆ ರಾಜ್ಯಲೋಭವಶದಿಂ ಪುರುಷಾರ್ಥಮನೊಕ್ಕು ಪಾರ್ಥಿವಾ ।
ಗ್ರಣಿಗಳನೇಕರುಂ ಜವನ ದಾಡೆಯೊಳಟ್ಟಿದರಿಂತು ಬಿಟ್ಟರಾ ||
ರಣ ಮಱಿದುಟ್ಟ ಮೈಲಗೆಯ ಸೂಡಿದ ಬಾಸಿಗದೊಲ್ಮೆಗುಂಡ ಮೇ ।
ಲುಣಿಸಿನ ಮೆಲ್ದ ತಂಬುಲದ ಪಾೞಿಗೆದಂದು ಸಮಸ್ತರಾಜ್ಯಮಂ || ೨೪ ||

ವ|| ಎಂದು ಲೋಕಮೆಲ್ಲಂ ಪೊಗೞೆ.

ಕಂ|| ಬಿಡಿಸಿ ವಧೂಜನಮಂ ನೊಡಂ ।
ಬಡಿಸಿ ಪಿತೃದ್ವಯಮಂ ಸಕಳವಿಷಯಸುಖಕ್ಕೋ ॥
ಗಡಿಸಿ ಭವಪಾಶಮಂ ಪಱಿ ।
ಪಡಿಸಿ ವಿಮೋಹಮಂ ನಳುರ್ಕೆಗಿಡಿಸಿ ನರೇಂದ್ರಂ ॥ ೨೫ ॥

ಪರಿಚಿತಪರಿಜನಮಂ ಪರಿ ।
ಹರಿಸಿ ಪರಿಸ್ಪಂದ ಮೊಂದು ಮಿಲ್ಲೆನೆ ತನ್ನೊಳ್ ||
ಪರಿನಿಷ್ಕ್ರಮಣಕ್ಕೆ ಮನಂ ।
ಪರಿಯೆ[1] ಪರಿಚ್ಛೇದಿಸಲ್ಕದೇಂ ಪರಿಣತನೋ ॥ ೨೬ ॥

ವ|| ಆಪ್ರಸ್ತಾವದೊಳ್.

ಮ|| ತ್ರಿಜಗತ್ಕ್ಷೋಭಿಚತುರ್ವಿಧಾಮರಚಮೂಕೋಳಾಹಳಂ ವ್ಯೋಮಸಾ ।
ಮಜದಾನಾಂಬು [2]ಕರಂಬಿತಾಂಬರತಳಂ ದೇವೀಜನಾಪಾಂಗದೀ ॥
ಪ್ತಿಚಯಪ್ರಾವೃತದಿಕ್ತಟಂ ದಿವದಿ ನೆಟ್ತಿಂದಂ ಮಹೋತ್ಸಾಹದಿಂ ।
ನಿಜನೇತ್ರಾಳಿನಿಪೀಯಮಾನಶಚಿವಕ್ತ್ರಾಬ್ಜಾಸವಂ ವಾಸವಂ ॥ ೨೭ ॥

ವ|| ಅಂತು ಬಂದಾಸಕಲಕಲ್ಪಾಮರಪ್ರಕರಪರಿವೃತಂ ರಾಜಭವನಮಂ ಪೊಕ್ಕು ಪೌಲೋಮಿ ವೆರಸು ಪರಮ ನಡಿಗೆಱಗಿ ಪಿರಿಮುಮೊಸಗೆಮರುಳ್ಗೊಂಡು ಜಗತ್ತ್ರಿತಯಮಂಗಳನಾನುತ್ತುಂಗಮಂಗಳಸ್ನಾನಪೀಠದೊಳ್ ಕುಳ್ಳಿರಿಸಿ.

ಕಂ|| ಮಂದರದೊಳ್ ಮಾಡಿದ ಮೀ ।
ಯಂದದೆ ಜನ್ಮಾಭಿಷವಮ ನಭವನ ಕಿಱಿಯಂ ॥
ದಿಂದು ಪುರಜನಕೆ ತೋರ್ಪವೊ ।
ಲೆಂದಮರರ್ ನೀಡೆ ದುಗ್ಧಜಲನಿಧಿಜಲಮಂ ॥ ೨೮ ॥

ಉ|| ನೋಡೆ ಸಮಸ್ತಪೌರಜನ ಪಾಡೆ ಮರುದ್ಗಣಿಕಾಳಿ ಮಂಗಳಂ ।
ಬಾಡೆ ಪುಳೋಮಪುತ್ರಿ ಮಿಗೆ ಮಾಡೆ ವಿಭೂತಿಯ ನಿಂದ್ರಕೋಟಿ ಕೈ ॥
ಗೂಡೆ ನಿಳಿಂಪತೂರ್ಯರವ ಮೋಡೆ ವಿನೇಯರ ಪಾಪಪೀಡೆ ಕೊಂ ।
ಡಾಡೆ ಜಗಂ ಜಿನಂಗೆಸಗಿದಂ ಪರಿನಿಷ್ಕ್ರಮಣಾಭಿಷೇಕಮಂ ॥ ೨೯ ॥

[1] ಪರಿಚ್ಛೇದಿಸಿದ ನದೇಂ.    [2] ಕರಾಂಚಿತಾಂಬರ.

ವ॥ ಅನಂತರಂ.

ಕಂ॥ ದಿವ್ಯಾಂಬರ ಭೂಷಣಕುಸು ।
ಮವ್ಯಾಲೇಪನದೆ ವಜ್ರಿ ಕೆಯ್ಗೆಯ್ಸೆ ಜಗ ॥
ತ್ಸೇವ್ಯತಪಃಶ್ರೀಯ ವಿವಾ ।
ಹವ್ಯಾಪ್ತಿಯ ನವವರಂಬೊಲೊಪ್ಪಿದ ನನಘಂ ॥ ೮೦ ॥

ವ॥ ಅಂತೊಪ್ಪಿ ವೃಂದಾರಕವಂದಿವೃಂದ ಜಯಜಯಧ್ವಾನ ವಗ್ಗಳಿಸೆ ಹರಿಪೀಠದಿಂದೆೞ್ದರ್.

ಮ॥ ಅನಿಮೇಷಾನಕಕೋಟಿಗಳ್ ಮೊೞಗೆ ಕಲ್ಪೇಂದ್ರಪ್ರತೀಹಾರತ ।
ರ್ಜನಕೋಳಾಹಳಮುಣ್ಮೆ ದೇವಗಣಿಕಾಸಂಗೀತಕಂ ಸೇವ್ಯಮಾ ॥
ಗೆ ನಿಜಾವಾಸದಿ ನಿಂದ್ರಸಿಂಧುರಕರಸ್ಕಂಧಾವಳಂಬಂ ತಪೋ ।
ವನದತ್ತಲ್ ತಳರ್ದಂ ಪದದ್ಯುತಿವಿಳಾಸಂ ಪಾಸೆ ಪಂಕೇಜಮಂ ॥ ೮೧ ॥

ವ॥ ಆಗಳ್.

ಚಂ॥ ಇದು ದಿವಿಜೇಂದ್ರಮಂದಿರದ ಮಾೞ್ಕೆಯ ನೀೞ್ಕೆಳಿಗೊಂಡುದಿಕ್ಕಿ ಮೆ ।
ಟ್ಟಿದು ದಿದು ಕಿನ್ನರೇಶ್ವರನ ಪುಷ್ಪಕದೊಪ್ಪಮ ನೊಪ್ಪುಗೊಂಡು ದಿಂ ॥
ತಿದು ನಿಜಲೀಲೆಯಿಂ ರಿತುವಿಮಾನದ ಲೀಲೆಯ ನೆಂಬ ಚೆಲ್ವ ನಾ ।
ಳ್ದಿದಿರೊಳಳಂಕೃತಂ ಸಿವಿಗೆ ಬಂದೆಸೆದಿರ್ದುದು ದಿವ್ಯಕಲ್ಪಿತಂ ॥ ೮೨ ॥

ಉ॥ ಯಾಮಿನಿಯಂತೆ ಚಂದ್ರರುಚಿರಾಜಿತ ವಕ್ಷಯಮೂರ್ತಿಯಂತೆ ಮು ।
ಕ್ತಾಮಯಭಾಸಿ ಬಾಲರವಿಯಂತೆ ಸಮುದ್ಗತಪದ್ಮರಾಗ ಮಿಂ ॥
ದ್ರಾಮರನಂತೆ ವಜ್ರಕರಶೋಭಿ ವನಸ್ಥಳದಂತೆ ವಿದ್ರುಮ ।
ಸ್ತೋಮವಿಳಾಸಿ ವಾಯುಪಥದಂತದು ತಾಂ ಹರಿನೀಳಭಾಸುರಂ ॥ ೮೩ ॥

ಕಂ॥ ಬಿಸುಪಂ ಬೀಱಿದು ಕುವಳೆಯ ।
ದ ಸೊಂಪ ನುಡುಗಿಸದು ಮಿಕ್ಕ ಶತಪತ್ರಮನೆ ॥
ೞ್ಬಿಸುತಂ ಸೂರ್ಯಪ್ರಭೆಯಂ ।
ತೆಸೆದುದು ಸೂರ್ಯಪ್ರಭಾಖ್ಯ ಶಿಬಿಕಾಯಾನಂ ॥ ೮೪ ॥

ವ॥ ಅಂತಾಮಹೋತ್ಸವದೊಳುಚಿತಶಿಬಿಕಾನಿಜೋಪಖಚಿತ ಪದ್ಮರಾಗ ರುಚಿಯಿಂದೆ ರಾಗಮಂ ಬೀಱುವಂತೆ, ಸೂಸಕದ ಮುತ್ತುಗಳ ಬೆಳಗಿನಿಂ ನಸುನಗೆಯ ನೆಸಗುವಂತೆ, ಬಳಸಿಯ ಮೆೞಲ್ವ ಬಾಸಿಗದ ಬಣ್ಣದಿಂ ಕಣ್ಣಾರೆ ನೋಡುವಂತೆ, ಮಿಱುಪ ಕಿಱುಗೆಜ್ಜೆಯುಲಿಗಳಿಂ ನಲಿನಲಿದು ನುಡಿವಂತೆ, ಘುನಘುಟಿತಘುಂಟಾರವಂಗಳಿಂ ಮಂಗಳಂಬಾಡುವಂತೆ, ಮಿಳಿರ್ವ ಪಳಯಿಗೆಯ ತುಱುಗಲಿಂ ಕೈನಿಱಿದು ನರ್ತಿಸುವಂತೆ ತೆತ್ತಿಸಿದ ಪುತ್ತಳಿಗಳಾಭರಣಕಿರಣದಿಂ ಸೇಸೆಯಂ ಸೂಸುವಂತೆ ದೇಸೆವಡೆದೆಸೆವ ಸಿವಿಗೆಯಂ ನಿರ್ವಾಣನಿಳಯ ನಿಶ್ರೇಣಿಕಾರೋಹಣಮಂ ಮುಂದು(ಱು)ದೋಱಿದಂತೇಱಿದಾಗಳ್.

[1] ಪೋಲೆ ಪಂಕೇಜಮಂ.

ಕಂ॥ ಏೞಡಿಯುಂ ಮುನ್ನವನಿಪ ।
ರೇೞಡಿಯುಂ ಬೞಿಕೆ ನಭದೊಳಂಬರಚರರ ॥
ತ್ತೇೞಡಿವರಂ ಸುರಾಸುರ ।
ರೇ[1]ೞಡಿಯೊನೆಯ್ದರ್ ಬೞಿಕ್ಕ ಮಭವನ ನಿಂದ್ರರ್ ॥ ೮೫ ॥

ಬಂಧುರಮಣಿಮಯಶಿಬಿಕಾ ।
ಕಂಧರರೊಯ್ವಲ್ಲಿ ಜಿನನ ದೇಹಪ್ರಭೆಯಿಂ ॥
ಕಂಧರಪದ ಮೆಸೆದುದು ಸುರ ।
ಸಿಂಧುವ ಪೊನಲೊಳಗೆ ಮೂಡಿ ಮುೞ್ಗಾಡುವವೋಲ್ ॥ ೮೬ ॥

ಧೃತಪುಷ್ಪದಂತ ಸೌಮ್ಯ ।
ದ್ಯುತಿ ಗುರುಸಿತನೀಳಕೇತು ಚಿತ್ರಾರಸವಿ ॥
ಸ್ತೃತ ಮೇಂ ಜ್ಯೋತಿರ್ಲೋಕ ।
ಸ್ಥಿತಿಯವೊಲೆನಿಸಿದುದು ಸಿವಿಗೆ ಖಚರರ ಮನದೊಳ್ ॥ ೮೭ ॥

ವ॥ ಅಂತು ಪುರವರಕ್ಕನತಿದೂರ ಮಪ್ಪ ಪುಷ್ಪಕೋದ್ಯಾನಕ್ಕೆ ಪುಷ್ಪದಂತಪರಮೇಶ್ವರಂ ಪೋಗೆ ವೋಗೆ.

ಕಂ॥ ಬೞಿಸಂದು ಗುರುಜನಂಗಳ ।
ಪೞಿಯರ ಮಂತ್ರಿಗಳ ನೃಪರ ಕುವರರ ಮೊತ್ತಂ ॥
ಕೞಿಪಲ್ಕೆ ಪೋಗೆ ವಿಭುವಂ ।
ಪೊೞಲನುಕರಿಸಿದುದು ಬೀತ ನಂದನವನಮಂ ॥ ೮೮ ॥

ವ॥ ಅಂತು ಪೊೞಲ ಜನ ಮೞಲ ನಪ್ಪುಕೆಯ್ದು.

ಮ॥ ಪ್ರಕಟರ್ ನೀತಿವಿದರ್ ನೃಪರ್ ಪೞಿಯರಿರ್ದಂತಾಪ್ತರಿರ್ದಂತೆ ಸೇ ।
ವಕರಿರ್ದಂತೊಳಪೊಯ್ದುದೋ ಪೆಱರ ನೆಂದುಂ ಬಂದು ಬಂದಾಗಳ ॥
ರ್ಥಕಮನ್ಯಕ್ರಿಯೆ ಯನ್ಯಜಾತಿ ಯೆನಿಸಿಂದ್ರರ್ ಪೊರ್ದಿ ವಿಶ್ವಾಸಘಾ ।
ತಕರೊಯ್ದರ್ ಮಱಪಿಕ್ಕಿ ನಮ್ಮರಸನಂ ತಮ್ಮಳ್ಗಿನ್ನೇವೆವೋ ॥ ೮೯ ॥

ಕಂ॥ ಪೊಡವಿಯೊಳಿಲ್ಲದ ವಸ್ತುವ ।
ನಡಿಗಡಿಗೆಡೆಯಾಗಿ ತಂದು ತಂದೀಯುತ್ತುಂ ॥
ಕಡುತಕ್ಕ ನಿಕ್ಕಿ ಖಳರೆಡೆ ।
ವಡೆದಿಂತೊಯ್ವಂನ ಮೆಯ್ದೆ ಮಱುಗಿದರರೆಬರ್ ॥ ೯೦ ॥

ವ॥ ಎಂದು ನೊಂದು ನುಡಿವ ಜಡಮತಿಗಳಂ ಕೆಲರ್ ಕೃತಮತಿಗಳ್ ಮಾರ್ಕೊಂಡು.

[1] ರೋಳಿಯಿನೊಯ್ದರ್.

ಮ॥ ಪರಮಜ್ಞಾನಿ ಮರಳ್ವನೇ ಪೆಱರ್ಗಣಂ ನಿರ್ವೇಗಚಿಂತಾನಿರಂ ।
ತರಿತಸ್ವಾಂತ ನನಂತಲಕ್ಷ್ಮಿಗೆ ಮರಳ್ದೀರಾಜ್ಯಲಕ್ಷ್ಮೀಲವಂ ॥
ಸ್ಥಿರ ಮತ್ತೆಂದು ಬಿಸುಟ್ಟೊಡಂಬಡಿಸಿ ಪುತ್ರಂಗಿತ್ತು ತನ್ನೞ್ತಿಯಿಂ ।
ದರಸಂ ದೀಕ್ಷೆಗೆ ಪೋದ ನೇಕೆ ನುಡಿವಿರ್ ವೃಂದಾರಕರ್ ನಿಂದ್ಯರೇ ॥ ೯೧ ॥

ವ॥ ಎಂದೋರೊರ್ವರ್ಗೆ ನುಡಿವ ಪುರಜನಂಗಳ ಗುಜುಗುಜಿಯ ನಂತಃಪುರಮುಹತ್ತರಿ ನಱಿದು.

ಮ॥ಸ್ರ॥ ಬರುತುಂ ಪೋಗುತ್ತು ಮುಳ್ಳಾಭರಣಕುಸುಮವಸ್ತ್ರಂಗಳಂ ಲಂಚ ಮಿತ್ತಿ ।
ತ್ತಿರದಿಂಬಿಂ ಸಗ್ಗದಗ್ಗಾಯಿಲೆಯುರಸನಂ ಮೆಚ್ಚಿಸಲ್ಕಾರ್ತರ್ ಕೊಂತೊ ॥
ಯ್ವರಲಂಪಿಂ ಒೞವೆ ಮೆಂಪಂದಗಿಮ ಸುಗಿದು ಸುಯ್ಯುತ್ತುಮಿಲ್ದರ್ ಕೞಲ್ದರ್ ।
ಪುರುಡಿಂ “ಪ್ರಾಯೇಣ ಸೇರ್ಷ್ಯಾಃ ಸ್ತ್ರಿಯಃ” ಎನೆ ನೃಪಶುದ್ಧಾಂತಕಾಂತಾಜನಂಗಳ್ ॥ ೯೨ ॥

ವ॥ ಅಂತು ವಿಹ್ವಳೆಯರಾಗಿ.

ಚಂ॥ ಪರಿಚಯ ಮಿಲ್ಲದಂತೆ ನೆಱೆ ಕಂಡಱಿತಂ ತನಗಿಲ್ಲದಂತೆ ನಿ ।
ಷ್ಕರುಣ ನಗಲ್ದು ಪೋದ ನಧಿರಾಜನಿಳಾತಿಳಕಂ ರಮಾಧವಂ ॥
ಸರಳ ನಶೋಕವೃತ್ತ ನಭಯಾತ್ಮಕ ನುದ್ಗುಣಪೂರ ನಾರ್ಜವಂ ।
ಪರಿಚಿತಸತ್ಕದಂಬ ನೆನಸುಂ ಮರವಾನಿಸ ನಾದ ನೆಂಬಿನಂ ॥ ೯೩ ॥

ಕಂ॥ ಆವಿರೆ ಯಿರೆ ಭರ್ತೃ ತಪಃ ।
ಶ್ರೀವಧುಗೆಳಸಿರ್ದ ನೆಮಗದೆತ್ತಣ ಸೊಬಗೆಂ ॥
ದೇವ್ಯೆಸಿದಂತೆ ಜಿನದೀ ।
ಕ್ಷಾವಿಧಿಯ ನಪೇಕ್ಷೆಗೆಯ್ದು ರರಸಿಯ ರಾಗಳ್ ॥ ೯೪ ॥

ಆದರಿಸಿ ಪಿರಿಯ ಸಿರಿಗಾ ।
ಹ್ಲಾದದಿ ನೆಡೆಮಾಡಿ ಸುಖದಿ ನಿರಿಸಿದಧೀಶಂ ॥
ಪೋದೊಡೆ ಪಂಡಿರ್ ಬಱಿಸಂ ।
ದಾಪುದ ನಾಗದೊಡೆ ಸಜ್ಜನಿಕ್ಕೆಗೆ ಪೆಂಪೇಂ ॥ ೯೫ ॥

ವ॥ ಎಂದಾವಿರಕ್ತೆಯರು ಮಾವಲ್ಲಭಾನುಗಮನಾಸಕ್ತೆಯರು ಮೊಂದಾಗಿ.

ಚಂ॥ ಅಡಪಮ ನತ್ತಲೊಯ್ ಡವಕೆಯುಂ ಕಳೆ ಸೀಗುರಿ ಬೇಡ ಬೀಸದಿರ್ ।
ಕೊಡೆಯ ವಿಡಂಬ ಮೇಕೆ ಸಿರಿಗನ್ನಡಿಯುಂ ಪೆಱಿಸಾರ್ಚ್ಚ ಭೂಮಿಯುಂ ॥
ಗ್ಗಡಣೆಯ ಮಾತು ಮಾಸ್ಗೆ ಬಿಸುಡೆಂದಣಮುಂ ದಯೆಗೆಯ್ದು ವಲ್ಲಭಂ ।
ನಡೆವ ನದಾರ್ಗೆ ತೋಱುದಪೆ ಮಾಂ ನೆಱೆದೀಬಹುರಾಜ್ಯಚಿಹ್ನಮುಂ ॥ ೯೬ ॥

ಮ॥ ಎವಗಿನ್ನಂಜನರಂಜನಂ ತಿಲಕಲೀಲಾಡಂಬರಂ ಪತ್ರಭಂ ।
ಗವಿಳಾಸಂ ಮಣಿಮೇಖಳಾವಿಳಸನಂ ಮಂಜೀರಕೋಳಾಹಳಂ ॥
ನವಶೃಂಗಾರವಿಕಾರ ಮೇವುದೆನುತುಂ ಬಾಷ್ಪಾಂಬುವುಂ ಗದ್ಗದಾ ।
ರವಮುಂ ಪೊಣ್ಮೆ ಸಖೀಜನಕ್ಕೆ ನುಡಿದರ್ ವಿಭ್ರಾಂತೆಯರ್ ಕಾಂತೆಯರ್ ॥ ೯೭ ॥

ವ॥ ಅಂತು ನುಡಿದನಂತರಂ ನಿಜವಾಸದ ವಿಳಾಸವಿಹಗಂಗಳಂ ನೋಡಿ ಬಂಬಱಿಂಬಾಡಿ.

ಚಂ॥ ಬಿಡದಿರದಿಂತೆ ತಮ್ಮ ಬಿನದಕ್ಕೆನಸುಂ ಸೆಱಗೆಯ್ದ ರೆಮ್ಮ ನೆಂ ।
ದೆಡಱಿ ಮನಃಕ್ಷತಂಬಿಡದೆ ಪಾಳಿಸಿ ಮೇಳಿಸಿ ಪುತ್ರಮೋಹದಿಂ ॥
ನಡೆಪಿದ ಕೂರ್ಮೆಯಂ ಬಗೆವುದಿಲ್ಲಿ ಸಲೀಲಮರಾಳಮೇ ಮನಂ ।
ಬಡೆವ ಮಯೂರಮೇ ಚಳಚಕೋರಮೆ ರಾಜಿಪರಾಜಕೀರಮೋ ॥ ೯೮ ॥

ವ॥ ಎಂದವರ್ಕೆ ಕ್ಷಮೆಗೊಂಡು.

ಕಂ॥ ಲೀಳೆಯೊಳೆ ತಾಮೆ ನಡೆಪಿದ ।
ಕೇಳೀವನಲತೆಗಳಂ ನಿರೀಕ್ಷಿಸಿ [1]ಸುಯ್ದಾ ॥
ವಾಳವಳಯಂಗಳಂ ಭ್ರಮ ।
ರಾಳಕಿಯರ್ ಬಾಷ್ಪವಾರಿಯಿಂ ಪೂರಿಸಿದರ್ ॥ ೯೯ ॥

ವ॥ ಅದಲ್ಲದೆಯುಂ.

ಚಂ॥ ಪಡಿಯಿಡೆ ನಿಮ್ಮ ನೆಮ್ಮವಯವಂಗಳೆ ನೇಡಿಸಿ ಕಾಡುತಿರ್ದುದಂ ।
ಕಡುದಿಟ ಮೆಂದು ನೋಯದೊಡನಾಡಿದ ನಣ್ಪನೆ ನೋಱ್ಪುದೆಂಬಿನಂ ॥
ನುಡಿದ ನುನ್ನೈಸಿದರ್ ಕುಸುಮಕೋಮಳೆಯರ್ ವನಕುಂದಕೇತಕೀ ।
ಜಡರುಹಕರ್ಣಿಕಾರವಕುಳೋತ್ಪಳಪಾಟಳಚಂಪಕಂಗಳಂ ॥ ೧೦೦ ॥

ವ॥ ಅಂತು ಸಮುಚಿತಚರಾಚರಪರಿಗ್ರಹಂಗಳಂ ಸರಸಸಾತ್ವಿಕೋಕ್ತಿಯಿಂದ ಮಾಱಿ ನುಡಿದನಂತರ ಮಂತಃಪುರದ್ವಾರದಿಂ ಪೊಱಮಡುವ ಶುದ್ಧಾಂತಕಾಂತೆಯರ ತಂಡಮಂ ಕಂಡು.

ಮ॥ ಅರಸಂ ಬಂದಪ ನೀಗಳಿಂತೆ ನಿಮಗಿಂ ಭ್ರಾಂತೇಕೆ ಕೊಂಡೊಯ್ಯ್ವುತುಂ ।
ತರುತುಂ ಸ್ವಾಮಿಯೆನಿಪ್ಪುದೇಂ ಪೊಸತೆ ಪೇೞಿರ್ ದೇವರ್ಕಳಂತಾದೊಡಂ ।
ಧರಣೀಶಾಜ್ಞೆಯ ನಲ್ಲದೊರ್ವರುಮ ನಿಲ್ಕಿಂ ಪೋಗಲಾಮೀಯೆ ವಿಂ ।
ತಿರಿ ಮೆಂದಲ್ಲಿಯೆ ತಾಗಿದರ್ ವಿಹಿತರಕ್ಷಾಕೋವಿದರ್ ಸೌವಿದರ್ ॥ ೧೦೧ ॥

ವ॥ ಅನ್ನೆಗಮಿತ್ತ.

[1] ಸುಯ್ದಂ ತಾಳವಳಯಂಗಳಂ.

ಕಂ|| ವನದೇವಿಯ ರಭವನ ಬರ ।
ವ ನಾರಯಲ್ ಮುದದಿ ನಿದಿರ ನಟ್ಟದ ಚರ ನೆಂ ||
ಬಿನ ಮಾಱಿಸೆ ಬಂದೆಲರನ ।
ಘನನಂ ದೊಯ್ದಿರಿಸಿದಮರರಂದಾ ಬನದೊಳ್ || ೧೦೨ ||

ವ|| ಆಗಳಲ್ಲಿ.

ಮ|| ಇದೆರೆಟ್ಟಿಂದಮರ್ದಪ್ಪುವಂತೆ ನಯದಿಂ ಸಂಭಾವಿಪಂತರ್ಘ್ಯಮಂ ।
ಪದೆದೀವಂತೆಸೆದಿರ್ದುದುಚ್ಚಳಿಪ ಕೇತುವ್ರಾತದಿಂ ರೂಪಗಂ ||
ಧದ ತಣ್ಗಾಳಿಯಿ ನಾದ ಪೂವಲಿಯಭೃಂಗೀರಾವದಿಂ ಪಂಚರ ।
ತ್ನದ ಸಂದರ್ಭದಿ ನಿಂದ್ರಶಿಲ್ಪಿರಚಿತಶ್ರೀಮಂಡಿತಂ ಮಂಡಪಂ || ೧೦೩ ||

ಚಂ|| ಅದು ಭುವನಕ್ಕೆ ಮಂಗಳದ ಮುಂಗುಡಿ ಮೋಹದಪೋಹಭೂಮಿ ಸ ।
ಗ್ಗದ ಸಿರಿಯೊಗ್ಗು ಧರ್ಮದ ತವರ್ಮನೆ ಶೋಭೆಯ ನಾಭಿ ಭವ್ಯರ ||
ಭ್ಯುದಯದ ಸಂಕು ಮುತ್ಸವದ ತಾಯ್ಗರು ಚಿತ್ತದ ಗೊತ್ತುಗಣ್ಯಪು ।
ಣ್ಯದ ಬೆಳಸೊಳ್ಪಿನುದ್ಭವಗೃಹಂ ಬಹುಲಕ್ಷ್ಮಿಯ ಲಾಸ್ಯಮಂದಿರಂ || ೧೦೪ ||

ವ|| ಅಂತು ಮಹನೀಯಮಹಿಮಾವಳಂಬಿಯಾದ ತನ್ಮಹಾಮಂಟಪದೊಳಮರೇಂದ್ರವೃಂದ ಮಿೞಿಪೆ ಶಿಬಿಕೆಯಿಂದ ಮವತರಿಸಿ ವಿವಿಧಮಂಗಳೋಪಕರಣಪ್ರಶಸ್ತಹಸ್ತವಾಸವವಿಳಾಸಿನೀವಿಕೀರ್ಣಶೇಷಾಕ್ಷತಂಗಳುಂ, ಮನೇಕವೃಂದಾರಕಾನಂದದುಂದುಭೀಗಭೀರಸ್ವರಂಗಳುಂ, ಮಶೇಷಾನಿಮಿಷ ಜಯಜಯವಿಶೇಷಘೋಷಂಗಳುಂ ನೆಗೞೆ ತಳರ್ವ ಘಬಲಾಂತಕಂಗೆ ಬಲಾಂತಕಂ ಕೆಯ್ಗೊಟ್ಟೊಳಯಿಂಕೆ ಬಿಜಯಂಗೆಯ್ಸಿಸಿ.

ಕಂ|| ಧೃತಕನಕವೇತ್ರಲತೆ ಚಿ ।
ತ್ರಿತ ಮಾಗೆ ಕರಾಂಗುಳೀಯಕ ಪ್ರಭೆಯಿಂದಂ ||
ಪ್ರತಿಹಾರಪದವಿಯಂ ತಳೆ ।
ದು ತರ್ಜಿತದ್ಯುಚರಖಚರಕಳಕಳ ನಿರ್ದಂ || ೧೦೫ ||

ವ|| ಆಗಳಾಗೃಹಾಭ್ಯಂತರದೊಳ್.

ಮ|| ವಿಶದೋತ್ತಾಳದುಕೂಲಕಾಂಡಪಟದಿಂ ಮಂದಾರಪುಷ್ಪೋಪಹಾ ।
ರಶತಶ್ರೀಯ ನನೇಕಮಂಗಳಶುಚಿದ್ರವ್ಯಂಗಳಿಂ ಪ್ರಾಡಕ ||
ರ್ಮಶಚೀನಿರ್ಮಿತರತ್ನರಂಗವಲಿಯಿಂ ದೊಪ್ಪಿರ್ದುದಂ ಚಂದ್ರಕಾಂ ।
ತಶಿಲಾಪಟ್ಟಮ ನೇಱಿದಂ ದೃಢಗುಣಂ ನೀರೇಱಿ ಭವ್ಯೋತ್ಕರಂ || ೧೦೬ ||

ವ|| ಅಂತು.

ಚಂ। ಸದಮಲಬೋಧ ನಾಕಿಲೆಯ ನೇಱಿದೊಡಂಗಜನಂಜಿ ಪುತ್ತ್ರನೇ।
ಱಿದ ನಿನನುಟ್ಟುದಂ ಬಿಸುಡೆ ತಲ್ಲಣದಿಂ ಮದನಂ ಬಿಸುಟ್ಟ ನು॥
ಟ್ಟುದ ನಘುಮರ್ದನಂ ಕಳೆಯೆ ಮಂಗಳಭೂಷಣಮಂ ವಿಯೋಗವೇ।
ಗದೆ ಕಳೆದಳ್ ಮನೋಜವಧು ತನ್ನಯ ಮಂಗಳಭೂಷಣಂಗಳಂ ॥ ೧೦೭ ॥

ಚಂ। ಬಳಸಿದ ಬೆಳ್ಮುಗಿಲ್ ತೊಲಗೆ ನಿರ್ಝರ ಮಂಚಿರ ಮಾಗೆ ಮಿಂಚು ಸಂ।
ಚಳಿಸಿ ಯಡಂಗೆ ರಂಜಿಪ ದಿನಾಧಿಪನಂತಿರೆ ಜಾತರೂಪಮಂ ॥
ಜುಳ ನೆಸೆದಂ ತ್ರಿಸಾಕ್ಷಿಯಿ ನಪೇತ ನತಾಂಶುಕನಾಗಿ ಮುಕ್ತಿಮಂ।
ಗಳಶುಚಿಧಾಮ ನಾಗಿ ವಿಗತಾಭರಣಪ್ರಭೆ ನಾಗಿ ನಿಶ್ಚಳಂ ॥ ೧೦೮ ॥

ವ॥ ಅನಂತರಂ.

ಕಂ॥ ಬಗೆ ವನದಾನದ್ವಿಪದಾ।
ದಿಗಳೊಳ್ ಮಿಥ್ಯಾತ್ವಮಾನಮಾಯಾದಿಗಳೊಳ್ ॥
ಪುಗದಿರೆ ಬಾಹ್ಯಾಭ್ಯಂತರ।
ಯುಗಲಪರಿಸ್ಪಂದರಹಿತ ನುಪಶಮಸಹಿತಂ ॥ ೧೦೯ ॥

ಮಾಲಿನಿ॥ ಸ್ವಗತನಿಬಿಡಪಲ್ಯಂಕಾಸನೋಲ್ಲಾಸ ನೈಂದ್ರೀ।
ದಿಗಿಭಮುಖ ನುದಂಚತ್ಪಂಚಮುಷ್ಟಿಪ್ರಪಂಚಂ ॥
ಪ್ರಗುಣಮತಿ "ನಮಸ್ಸಿದ್ಧೇಭ್ಯ" ಯೆಂದಾತ್ಮಕೇಶಾ।
ಳಿಗಳ ನಘದ ಬೇರಂ ತೀರೆ ಕೀೞ್ವಂತೆ ಕಿೞ್ತಂ ॥ ೧೧೦ ॥

ಕಂ॥ ನಾಕೇಶ ನಾಗಲೊಡನೊಡ।
ನಾಕೇಶಮ ನಾಂತ ಶೋಣಮಣಿಪಟಳಕ ಮಾ ॥
ಲೋಕನದ ತಣಿವ ನಿತ್ತುದು।
ಕೋಕನದ ಮಿದಳಿಕಳಾಪಮೃತ ಮೆಂಬಿನೆಗಂ ॥ ೧೧೧ ॥

ವ॥ ಆಗಳಮರಭೇರಿಗಳ್ ಮೊಱಗೆ.

ಮ। ಸ್ರ॥ ಜಳದೇವೀಪತ್ರರೇಖಾಮೃಗಮದರುಚಿ ಮೇಳಾವನಂ ತುಚ್ಛತಾಪಿ।
ಚ್ಛಳತಾಗುಚ್ಛಪ್ರಭಾಮಂಜರಿ ವಿಮಳಜಳಸ್ಪಷ್ಟದೃಷ್ಟೇಂದ್ರ ನೀಳೋ ॥
ಪಳರೋಚಿರ್ಜಾಳ ಮೆಂಬಂತೆಸೆ ದಮೃತಸಮುದ್ರಕ್ಕಳಂಕಾರಮಾಯ್ತಾ।
ಗಳೆ ದೇವೇಂದ್ರರ್ಕಳೊಯ್ದಿಂತಭವನ ನವಲೋಲಾಳಿನೀಲಾಳಕೌಘಂ ॥ ೧೧೨ ॥

ವ॥ ಅಂತು ಷಷ್ಠೋಪವಾಸದಿಂ.

ಕಂ|| ನುತಮಾರ್ಗಶಿರದ ಶುದ್ಧ ।
ಪ್ರತಿಪದ್ದಿನದಪರಯಾಮದೊಳ್ ಸಾಸಿರ್ವರ್ ॥
ಕ್ಷಿತಿಪತಿಗಳ್ವೆರಸು ಜಗ ।
ತ್ಪತಿ ತಳೆದಂ ತಪಮ ನತನುತಿಮಿರಾತಪಮಂ ॥ ೧೧೩ ॥

ವ॥ ಅಂತು ಪಂಚಶರಪ್ರಮಾದವಿಜಯಿ ಪಂಚಮಗತಿಪ್ರಾಪ್ತಿಗೆ ಸಂಚಕರಮಂ ಕೊಳ್ವಂತೆ ದೀಕ್ಷೆಯಂ ಕೈಕೊಳಲೊಡಂ.

ಕಂ॥ ಪ್ರವರಮನಃಪರ್ಯಯಬೋ ।
ಧ ಮೊಗೆಯೆ ಸಪ್ತರ್ಧಿನಿಧಿ ಚತುಜ್ಞಾನಧರಂ ॥
ಸುವಿಧಿ ಮಣಿದೀಪರುಚಿ ಬೆಳ ।
ಗುವ ಪಳಿಕಿನ ನಿಳಯದೆಸಕಮಂ ಪೊಸಯಿಸಿದಂ ॥ ೧೧೪ ॥

ವ॥ ಆಗಳನೇಕಾರ್ಚನೆಗಳಿಂದೆ ನಿರ್ವಾಣಪತಿಯ ನರ್ಚಿಸಿ ಗೀರ್ವಾಣಪತಿ ನಿರ್ವರ್ತಿತತೃತೀಯಕಲ್ಯಾಣನಾಗಿ.

ಮ। ಸ್ರ॥ ಪರಮವ್ಯಾಮೋಹದಿಂ ಬೆಂಬಳಿಯ ನುಡಿಯದೆಬ್ಬಂದ ಸುಗ್ರೀವಭಾತ್ರೀ ।
ಶ್ವರನಂ ತತ್ಕಾಂತೆಯಂ ಕೀರ್ತಿಧರಸಹಿತ ಮಾತ್ಮಪ್ರಬೋಧೋಕ್ತಿಯಿಂದಂ ॥
ನಿರುತಂ ಸಂತೈಸಿ ಕಾಕಂದಿಗೆ ಕಳಿಪಿ ಬಳಿಕ್ಕಂತೆ ಬೀಳ್ಕೊಂಡು ತೀರ್ಥೇ ।
ಶ್ವರನಂ ಪೋದಂ ಶಚೀಲೋಚನಚಪಳಚಕೋರೀಶರಚ್ಚಂದ್ರ ನಿಂದ್ರಂ ॥ ೧೧೫ ॥

ವ॥ ತದನಂತರ ಮಾಮುನೀಶ್ವರಂ ಧ್ಯಾನಾಧೀನಮಾನಸ ನಂದಿನ ದೆವಸ ಮಿರ್ದು ಮಱು ದೆವಸಂ ಕೆಯ್ಯೆತ್ತಿ ಪಾರಣೆಯಿಂ ಮಾರ್ಗಪ್ರಕಾಶಮಂ ಮಾಡಲೆಂದು.

ಕಂ॥ ಆರ್ಯನುತಂ ಕಣ್ಗಳ್ ತಾ ।
ತ್ಪರ್ಯದೆ ಯುಗಮಾತ್ರಧಾತ್ರಿಯಂ ಪರಿಕಿಸೆ ಮುಂ ॥
ದೀರ್ಯಾವಿಶುದ್ಧಿ ಸಮನಿಸೆ ।
ಚರ್ಯೆಗೆ ನಡೆತಂದ ನಮಳಹೃದಯಂ ಸದಯಂ ॥ ೧೧೬ ॥

ದ್ರುತವಿಳಂಬಿತಂ|| ದ್ರುತವಿಳಂಬಿತಸಂಭ್ರಮವಿಸ್ಮಯಾ ।
(ವೃ)ತದಿಗಂತವಿಲೋಕವಿಕಾರವ ॥
ರ್ಜಿತಗತಿಕ್ರಮ ಮೊಪ್ಪೆ [1]ವನಾಂತದಿಂ ।
ವ್ರತಿ ಬರುತ್ತಿರೆ ಕಂಡತಿರಾಗದಿಂ ॥ ೧೧೭ ॥

ಮ|| ಪುಳಕಂ ಕೆಯ್ಮಿಗೆ ಪುಷ್ಯಮಿತ್ರಮಹಿಪಂ ಕೈಗೆಯ್ಸೆ ಸಂಪೂರ್ಣಮಂ ।
ಗಳಮಂ ಶೈಳಪುರಂ ವಿರಾಜಿಸಿತೊ ಕಾಶ್ಮೀರಾಕ್ಷ:ತಾಲೀಲೆಯಿಂ ॥
ವಿಳಸದ್ವಂದನಮಾಳೆಯಿಂ ತತಪತಾಕಾನೀಕದಿಂ ಕೀರ್ಣ ಪು ।
ಷ್ಪಳಸತ್ಸಂಗದಿ ನಂಗನಾಲಬಹುವಾದ್ಯವ್ರಾತದಿಂ ಗೀತದಿಂ ॥ ೧೧೮ ॥

ವ|| ಆಗಳ್.

[1] ವನಾನದಿಂ.

ಉ॥ ಪಾಸುವ ಪಲ್ಲವಂಬೊಲಿರೆ ಕೇಸಡಿಗೆಂಪುಪಹಾರಪುಷ್ಪವಿ ।
ನ್ಯಾಸಮನುಂಟುಮಾಡೆ ನಖದೀಪ್ತಿ ಮುಖೇಂದುಮಯೂಖಮಾನತೋ ॥
ಪಾಸಕಪಾಣಿಪದ್ಮವನಮಂ ಮುಗಿಸುತ್ತಿರೆ ತತ್ಪುರಾಂತದೊಳ್ ।
ಸೂಸೆ ಲತಾಂತವೃಷ್ಟಿ ಪುಗುದಂತ ನನಶ್ವರ ನಾಮುನೀಶ್ವರಂ ॥ ೧೧೯ ॥

ವ॥ ಅಂತು ಪೊಕ್ಕು ವಿಳೋಕನಕುತೂಹಳಾಕಳಿತಪುರಜನಾನು ಗಮ್ಯಮಾನ ನಾನರೇಂದ್ರ ಮಂದಿರದ ಮುಂದಣ್ಗೆ ಬರಲೊಡಂ.

ಉ॥ ಬಾಜಿಸೆ ತೂರ್ಯಕೋಟಿ ಕಳಶಂ ಗುಡಿ ಕನ್ನಡಿ ಸೇಸೆ ಬಾಸಿಗಂ ।
ಲಾಜೆ ಫಲಂ ಕಜುಂಕೆ ಲಲನಾಜನ ಮೆಂಬುಪಚಾರಮಂಗಳಂ ॥
ರಾಜಿಸೆ ಹೇಮವರ್ಣದ ನಿಜಚ್ಛವಿ ಮಂಗಳದೀಪದಂತೆ ನೀ ।
ರಾಜಿಸೆ ಪುಷ್ಯಮಿತ್ರ ನಿದಿರ್ಗೊಂಡ ನಖಂಡಿತಭವ್ಯಮಿತ್ರನಂ ॥ ೧೨೦ ॥

ವ॥ ಅಂತಿದಿರ್ಗೊಂಡು ಪಂಚಮುಷ್ಟಿಯಿಂ ಬಂದಿಸಿ.

ಕಂ॥ ಅವನಿಪತಿ ನಿಲಿಸಿದಂ ।
ಸುವಿಧಿಮುನೀಶ್ವರನ ನಂದು ಸಮಸಂದಿರೆ ಸ ॥
ಪ್ತವಿಧಗುಣಂ ಶ್ರದ್ಧಾಧ್ಯಂ ।
ನವವಿಧಪುಣ್ಯಂ ಪ್ರತಿಗ್ರಹಾದ್ಯಂ ತನ್ನೊಳ್ ॥ ೧೨೧

ವ॥ ಆಗಳ್.

ಕಂ॥ ಸುರಧೇನು ಪೊಸೆದು ಬಂದಂ ।
ತಿರೆ ನಿಧಿ ಬಂದಂತಿರಮರಭೂಜಂ ಬಂದಂ ॥
ತಿರೆ ಚಿಂತಾಮಣಿ ಬಂದಂ ।
ತಿರೆ ಸಿರಿ ಬಂದಂತಿರೊಸಗೆಯಾಯ್ತು ರಮನೆಯೊಳ್ ॥ ೧೨೨ ॥

ಮ॥ ಮುನಿರಾಜಕ್ರಮಕಂಜಪುಂಜಿತರಜೋಲಾಲಾಮ ನುದ್ಧಾಮಕಾಂ ।
ಚನಪೀಠಾಗ್ರದೊಳುಯ್ದು ಕುಳ್ಳಿರಿಸಿ ತತ್ಪಾದೋದಕಶ್ರೀನಿಷೇ ॥
ಚನದಿಂ ಪುತ್ರಕಳತ್ರಮಿತ್ರಸಹಿತಂ ಧಾತ್ರೀಪವಿತ್ರಾತ್ಮ ನಾ ।
ದನುಮಾಹ್ಲಾದನತಿಪ್ರಮೋದ ನರಸಂ ಶ್ರೀಭವ್ಯರತ್ನಾಕರಂ ॥ ೧೨೩ ॥

ಗದ್ಯಂ

ಇದು ಸಮಸ್ತ ಭುವನಜನಸಂಸ್ತುತಜಿನಾಗಮಕುಮುದ್ವತೀಚಾರುಚಂದ್ರಾಯಣಮಾನಿತ
ಶ್ರೀಮದುಭಯಕವಿಕಮಳಗರ್ಭ ಮುನಿಚಂದ್ರ ಪಂಡಿತ ದೇವಸುವ್ಯಕ್ತಸೂಕ್ತಿಚಂದ್ರಿಕಾ
ಪಾನಪರಿಪುಷ್ಟಮಾನಸಮರಾಳಂ

ಗುಣವರ್ಮನಿರ್ಮಿತಮಪ್ಪ
ಪುಷ್ಪದಂತಪುರಾಣದೊಳ್
ಪರಿನಿಷ್ಕ್ರಮಣಕಲ್ಯಾಣವರ್ಣನಂ
ತ್ರಯೋದಶಾಶ್ವಾಸಂ



ಶ್ರೀ

# ಪುಷ್ಪದಂತ ಪುರಾಣಂ

## ಚತುರ್ದಶಾಶ್ವಾಸಂ.

ಕಂ|| ಶ್ರೀಪದಮನೀವ ಮುಕ್ತಿ |
ಶ್ರೀಪದಮಂ ಪುಣ್ಯಜಲದಿ ನರ್ಚಿಸಿದಂ ಧಾ ||
ತ್ರೀಪಾವನ ನುದ್ಭೂತರ |
ಮಾಪೂರ್ಣಂ ಪ್ರಭುಗುಣಾಬ್ಜವನಕಳಹಂಸಂ || ೧ ||

ಘನಸಾರಘುಸೃಣಚಂದನ |
ಘನಸಾರದ್ರವದಿ ನಖಿಳಭವ್ಯಮನಃಕೋ ||
ಕನದಂಗಳ ನತಿಕೃತಕೋ |
ಕನದಂಗಳ ನನಘನಂಘ್ರಿಗಳ ನರ್ಚಿಸಿದಂ || ೨ ||

ಕಂದದ ಕುಂದದ ನವಬಿಸ |
ಕಂದದ ಕುಂದದ ಬೆಡಂಗ ನಾಳ್ದಮಳತೆ ಮ ||
ಯ್ಸಂದಕ್ಷತದಿಂ ರುಚಿಮೆರ |
ಸಂದಕ್ಷತಗುಣರ ಚರಣಮಂ ಪೂಜಿಸಿದಂ || ೩ ||

ಭ್ರಮರಹಿತಂ ಪೂಜಿಸಿದಂ |
ಭ್ರಮರಹಿತಪ್ರಚುರಗಂಧ ಮೊಸಿಸಿದ ನಾನಾ ||
ಸುಮನಸ್ಸಮಿತಿಯಿ ನಮಳಿನ |
ಸುಮನಸ್ಸಮಿತಿಯುತಯತಿಪದಾಂಭೋರುಹಮಂ || ೪ ||

ಪೊಗೆವಗರುವ ಧೂಪದಿ ನೊ |
ಳ್ಪೊಗೆಪೊಗೆದವಧೂಪದಾರ್ಥವಿರತಾತ್ಮನಕೆಂ ||
ಪಗಲದಕಳಂಕಪದಮಂ |
[1] ಪಗಲದಳಂನಳಿನವೆನಿಪುದಂಪೂಜಿಸಿದಂ || ೫ ||

ತರುಣಾಂಶುಬಿಂಬ ಮೆಂಬಂ |
ತರುಣಾಂಶುವಿ ನೆಸೆದು ತಮಮ ನಳಲಿಪ ಮಣಿಭಾ ||
ಸುರದೀಪಕದಂಬಕದಿಂ |
ಸುರದೀಪಕನರುಣಚರಣಮಂ ಪೂಜಿಸಿದಂ || ೬ ||

---

[1] ಪಗಲದಳಂಗಳಿನ.

ಕಾಂಚನಭಾಜನರತೆ ಮಧಿ ।
ಕಾಂಚನಭಾಜನ ಮೆನಿಪ್ಪ ಸುರುಚಿರಚರುವಿಂ ॥
ಸಂಚಿತಗುಣನಡಿಗಳ ನಿಸಿ ।
ಸಂಚಿತಗುಣನಳಿನನಿಭಮ ನೊಸೆದರ್ಚಿಸಿದಂ ॥ ೭ ॥

*ಪೂಗದ ನವನಾಗಲತಾ ।
ಪೂಗದಫಲಪತ್ರದೊಡನೆ ಬಹುವಿಧಫಲದಿಂ ॥
ರಾಗಯುತಕ್ರಮ ವಿರಹನ ।
ರಾಗಯುತಕ್ರಮಮ ನವನಿಭುಜ ನರ್ಚಿಸಿದಂ ॥ ೮ ॥

ವ॥ ಅಂತಷ್ಟವಿಧಾರ್ಚನೆಗಳಿನರ್ಚಿಸಿ.

ಕಂ॥ ಎರಡನೆಯ ಪದಾರ್ಚನೆಯಿಂ ।
ವಿರಚಿಸಿದಪ ನೆನಿಸಿ ಪೆರ್ಚೆ ನಿಜಮುಕುಟಹಟ ॥
ತ್ಕಿರಣಗಣ ನೆಱಗಿದಂ ಮುನಿ ।
ವರನಂಘ್ರಿಗೆ ಪುಷ್ಪಮಿತ್ರ ನಮಳಚರಿತ್ರಂ ॥ ೯ ॥

ವ॥ ತದನಂತರಂ ವಿಧಿಪೂರ್ವಕಂ ಪ್ರಯತ್ನಪರನಾಗಿ.

ಕಂ॥ ಪಸರಿಸಿದ ಮುನೀಂದ್ರನ ಮೃದು ।
ಕಿಸಲಯ ಸಮಪಾಣಿಪಾತ್ರದೊಳ್ ಶುದ್ಧಮನಂ ॥
ವಸುಧೇಶ ನಿಕ್ಕಿದಂ ಪಾ ।
ಯಸಮಂ ಪುಣ್ಯಫಲಭೂತನಿಶ್ರೇಯಸಮಂ ॥ ೧೦ ॥

ವ॥ ಅಂತಾಜಗತ್ಪವಿತ್ರಚಾರಿತ್ರಪಾತ್ರಂಗೆ ಪುಷ್ಪಮಿತ್ರಂ ವಿಶುದ್ಧ ಮಪಪ್ಪಾಹಾರದಾನಮಂ ನಿರಂತರಾಯಮಾಗಿ ಮಾಡಿದಾಗಳ್.

ಕಂ॥ ಆ ರಾಜಭವನದೊಳ್ ವಸು ।
ಧಾರೆಯ ತಣ್ಣೆಲರ ಪುಷ್ಪವೃಷ್ಟಿಯ ಸುರಭೇ ॥
ರೀರವದ ಪೊಗೞ್ವ ದೇವರ ।
ಹೋರಭಸದ ಪುದುವಿ:ನಾಯ್ತು ಪಂಚಾಶ್ಚರ್ಯಂ ॥ ೧೧ ॥

ವ॥ ಆಗಳ್.

ಮ॥ ಕ್ಷಿತಿಗೆಯ್ದೆನ್ನ ಗುಣಂ ಶಿಖಂಡಮಣಿ ಯಾಯ್ತೆನ್ನನ್ವಯಂ ಲೋಕಪೂ ।
ಜಿತ ಮಾಯ್ತೆನ್ನ ಪೆಸರ್ ಪ್ರಸಿದ್ಧಿಗೆಡೆಯಾಯ್ತೆನ್ನೀಭವಂ ಭವ್ಯಭಾ ॥
ವಿತ ಮಾಯ್ತೆನ್ನ ಮನೋರಥಂ ಸಫಳಮಾಯ್ತೆನ್ನುಳ್ಳ ಸದ್ಭಕ್ತಿ ಚಿಂ ।
ತಿತಚಿಂತಾಮಣಿ ಯಾಯ್ತು ನಿನ್ನ ಬರವಿಂ ಕಾರುಣ್ಯಪುಣ್ಯಾಂಬುಧೀ ॥ ೧೨ ॥

* ಈ ಪದ್ಯವು ಒಂದು ಪ್ರತಿಯಲ್ಲಿ ಮಾತ್ರವಿದೆ.

ವ|| ಎಂದು ಪೊಡೆವಡುವುದುಂ.

ಮ|| ನಿನಗಿನ್ನಕ್ಷಯದಾನ ಮೆಂಬ ಪರಮಶ್ರೀರತ್ನಮುಂ ಪುಷ್ಪಮಿ |
ತ್ರನ ಕರ್ಣಕ್ಕವತಂಸ ಮಾಗಿಸಿ ಬಱಿಕ್ಕಳ್ದಿಂದ ಮೆಚ್ಚಿಂತೆ ಬೆ ||
ನ್ನನೆ ಭವ್ಯರ್ ಕಱಿಪುತ್ತೆ ಬಂದು ನಿಲೆ ಬಾಹ್ಯೋದ್ಯಾನದೊಳ್ ಬಂದ ನಂ |
ದು ನಿಜಪ್ರಾಪ್ತಿನಿಮಿತ್ತ ಶೈಲಪುರದಿಂ ಶೀಲವ್ರಜಾಲಂಕೃತಂ ‖ ೧೩ ‖

ವ|| ಅಂತು ಸಫಳೀಕೃತಭವ್ಯಜನಮನೋರಥನಿಕಾಯಸ್ಥಿತಿಯಪ್ಪ ಕಾಯಸ್ಥಿತಿಯಂ ನಿರ್ವ ರ್ತಿಸಿ ಕೆಯ್ಯೆತ್ತಿಕೊಂಡು.

ಕಂ|| ತನತುಪದಪಾಂಸುವಿಂ ಗ್ರಾ |
ಮನಗರಖರ್ವಡಮಡಂಬಖೇಟದ್ರೋಣಾ ||
ಸ್ಯನಿಗಮಪತ್ತನತತಿ ಪಾ |
ವನ ಮಾಗೆ ವಿಹಾರಿಸುತ್ತೆ ಮೌನವ್ರತದಿಂ ‖ ೧೪ ‖

ಗತಗೌರವತ್ರಯಂ ನಿ |
ರ್ಜಿತದಂಡತ್ರಯ ನಪೇತಶಲ್ಯತ್ರಯ ನ ||
ಪ್ರತಿಹತಯೋಗತ್ರಯ್ಯನಪ |
ಗತಕಾಲತ್ರಯ ನನಾಪ್ತಗುಪ್ತಿತ್ರಿತಯಂ ‖ ೧೫ ‖

ಪತ್ತುಂಧರ್ಮಂಗಳ್ ಮೂ |
ವತ್ತಱುಂ ಗುಣದೊಳಮರೆ ಸನ್ಮಾರ್ಗಣ ಮೋ ‖
ಕ್ಷಾತ್ತದೃಢಚಿತ್ತ ನುದ್ಭಟ |
ವೃತ್ತಂ ಘಾತಿಸಲೊಡರ್ಚಿದಂ ಘಾತಿಗಳಂ ‖ ೧೬ ‖

ವ|| ಅಂತೊಡರ್ಚಿ ಬುದ್ಧಿಕ್ರಿಯಾದ್ಯಷ್ಟವಿಧರಿದ್ಧಿಯುಂ, ನಾಮಸತ್ಯರೂಪ ಸತ್ಯಾದಿದಶವಿಧ ಸತ್ಯಮುಂ, ಕಾಯಶುದ್ಧಿವಿನೇಯಶುದ್ಧ್ಯಾದ್ಯಷ್ಟವಿಧಶುದ್ಧಿಯುಂ, ಉತ್ತಮಕ್ಷಮಾದಿ ದಶವಿಧ ಧರ್ಮಮುಮಂ, ಅನಶನಾವಮೋದರ್ಯಾದಿಷಡ್ವಿಧ ಬಾಹ್ಯತಪಮುಂ ಪ್ರಾಯಶ್ಚಿತ್ತವಿನಯಾದಿ ಷಡಂತರಂಗತಪಮುಂ, ಕ್ಷುತ್ಪಿಪಾಸಾದಿದ್ವಾವಿಂಶತಿಪರೀಷಹಸಹಿಷ್ಣುತ್ವಮುಂ ಷಡ್ಜೀವನಿಕಾಯ ಜೀವಿದಯೆಯುಂ, ಜೀವಾಜೀವಾದಿಸಪ್ತತತ್ವ ವಿಚಾರಮುಂ, ನೈಗಮಸಂಗ್ರಹಾದಿ ಸಪ್ತನಯಭಾವ ನೆಯುಂ, ಅನಂತಾನುಬಂಧಿ ಕ್ರೋಧಮಾನಾದಿಚತುಃ ಕಷಾಯವ್ಯಪಾಯಮುಂ, ಶಬ್ದಸ್ಪರ್ಶನಾದಿ ಪಂಚೇಂದ್ರಿಯವಿಷಯ ವಿಚ್ಛಿತ್ತಿಯುಂ ತನ್ನೊಳುಂ ಸಂಘಟನ್ನಮಾಗಿ.

ಕಂ|| ಬಗೆಗೆ ಸುಖದುಃಖಮುಂ ಪೞಿ |
ಪೊಗೞ್ತೆಯುಂ ಹಾನಿವೃದ್ಧಿಯುಂ ಪಱಿಪೊಱಲುಂ ‖
ಪಗೆಕೆಳೆಯುಂ ಸಮನೆನೆ ಯಾಯೋ |
ಗಿಗೆ ಸಮತೆ ಸಮಂತು ಸಮನಿಸಿತ್ತು ಸಮಗ್ರಂ ‖ ೧೭ ‖

ವ॥ ಅಂತು ಪುಷ್ಪದಂತಯೋಗೀಶ್ವರಂ ಪುಷ್ಪದಂತಮಹಾತಪಶ್ರೀನಿವಾಸಿಯಾಗಿ ಮುನ್ನಿನ ಪುಷ್ಪೋದ್ಯಾನಕ್ಕೆ ವಂದು ಪರಮಯೋಗನಿಯೋಗದೊಳ್ ನಿಲೆ.

ಉ॥ ಸಿಂಗದ ದಾಡೆಯಂ ಸೆಳೆಯೆ ದಂತಿಗಳಂತೆ ಮೃಣಾಳ ಮೆಂದು ಸಾ ।
ರಂಗದ ಪಿಂಡು ಪೆರ್ಬುಲಿಯ ಪಿಂಡಿನೊಳೊರ್ಬುಳಿಯಾಡೆ ಕೇಕಿಪಿಂ ॥
ಭಂಗಳ ತಣ್ಣೆಲೆಗ್ಗಳಿಸಿ ಪಾವುಗಳಾತಪಭೀತಿಯಿಂ ಜತಾ ।
ನಂಗಮುನೀಂದ್ರಶಾಂತರಸದಿಂ ದತಿಪಾವನ ಮಾದುದಾವನಂ ॥ ೧೮ ॥

ಕಂ॥ ಶರಭಂಗಳ್ ಕೇಸರಿಕೇ ।
ಸರಂಗಳಂ ಕ್ರೂರಘೋರಮಾರ್ಜಾರಂಗಳ್ ॥
ತರುಣಾಖುಶಾಬಶತಕಂ ।
ಧರಮಂ ನಖಮುಖದಿ ನುಱಿಸಿ ತುಱಿಸಿದು ವೊಲಪಿಂ ॥ ೧೯ ॥

ಗಿಡಗಂಗಳೊಡನೆ ಸಾರಿಕೆ ।
ಬಿಡುಗುದುರೆಗಳೊಡನೆ ವನಲುಲಾಯಜಯಂ ಕಾ ॥
ಡೊಡೆಯರ ಕೌಲೇಯವ್ರಜ ।
ದೊಡನೆ ಮೊಲಂ ನಲಿದು ಸಂತವಿರ್ದುವು ಪದಪಿಂ ॥ ೨೦ ॥

ವ॥ ಅಂತುಪರಸ್ಪರವಿರೋಧಿಗಳಪ್ಪ ಬಹುವಿಧಪ್ರಾಣಿಗಳ್ ನಿಜನಿಸರ್ಗ ವೈರಮಂ ಮಱದು ಶಾಂತರಸತರಂಗಿಣಿಯೊಳೋಲಾಡುತ್ತಿರ್ದು ವದಲ್ಲದೆಯುಂ.

ಚಂ॥ ಉಪಶಮನಿಶ್ಚಳಾಸನಗತಂ ವಿಮಳಾಯತನೇತ್ರಶೋಭಿತಂ ।
ವಿಪುಳಜಟಾವಳಂಬಿ ಸುಮನೋದೃಢಬೋಧವಿಭಾಸಿ ಮನ್ಮಥಾ ॥
ನಪಹತರಾಗಿ ತಾಱಿ ತಱಿಸಂದಿರಪಿಂ ಸಮನಾಯ್ತು ಯೋಗಿಗಾ ।
ವಿಪಿನಮು ಮಂತ ದಲ್ ಸಮತೆ ಸನ್ಮುನಿಸಂಗದಿ ನಾರಿಗಾಗದೋ ॥ ೨೧ ॥

ವ॥ ಮತ್ತಂ.

ಮ॥ ವನದುರ್ಗಸ್ಥಿತಕಾಮನಾಮುನಿಗ ಬೆಂಗೊಟ್ಟೋಡೆ ಪಿಂದಿರ್ದ ಪ ।
ದ್ಮಿನಿ ನೀರ್ಗೊಕ್ಕುದು ತುಂಬಿ ಸಂಭ್ರಮಿಸಿ ತಾಮ್ರಂ ಕೈದೂವಲ್ಗೊಂಡು ದಂ ॥
ದನಿಲಂ ಸಂಚಳವಾಯ್ತು ಕೀರಪಿಕವೃಂದಂ ಗೂಡುಗೊಂಡಿರ್ದು ವೆಂ ।
ಬಿನ ವಂತಿರ್ದ ವನಾಥತಂತ್ರ ಮಥಿಕರ್ ಬಂದೆಯ್ದೆ ಬಲ್ಗೆಯ್ಗುಮೇ ॥ ೨೨ ॥

ಚಂ॥ ಅರಗಿಳಿವಿಂಡು ಬಂಡಳಿಪ ಸಾರಿಕೆ ಚಾವಳಿಪುನ್ಮದಾಳಿ ಗಾ ।
ವರಿಸುವ ಸೋಗೆ ಕೇಗುವ ಪಿಕಂ ಜಡಿವಂಚೆ ಕುಕಿಲ್ವ ಕೊಂಚೆ ಯು ॥
ಬ್ಬರಿಪ ವಿಕಾರ ಮಿಲ್ಲದಿರೆಯುಂ ಬನ ಮೊಪ್ಪಿದುದಾಮುನೀಂದ್ರನೊಳ್ ।
ಪರಿಚಯ ವಾದೊಡೊಪ್ಪದವರಾರೊ ಬಿಸುಟ್ಟು ವಯೋವಿಕಾರಮಂ ॥ ೨೩ ॥

ವ॥ ಅಂತು ಮಲ್ಲದೆಯುಂ.

ಚಂ॥ ಸ್ಮರಪರಿವಾರ ಮೆಂದು ಮುನಿದೀಮುನಿ ದೀಪ್ತತಪೋಗ್ನಿಯಿಂ ಕಱು ।
ತ್ತುರಿವುಗು ಮೆಂದು ಬೆರ್ಚಿ ಬೆಸಕೆಯ್ದೊಸೆದುಳ್ಳುದ ನಿತ್ತು ತೆತ್ತು ನಿ ॥
ತ್ತರಿಪವೊಲಾದುದಲ್ಲುಗುವ ವೃಕ್ಷಲತಾಫಲಪುಷ್ಪದಿಂ ವನಾಂ ।
ತರ ಮೆನೆ ಸಾಮಿ ಬಂದೊಡೆ ವಿನೀತಗುಣರ್ ಬೆಸಕೆಯ್ಯದಿರ್ಕುಮೇ ॥ ೧೪ ॥

ವ॥ ಮತ್ತಂ.

ಚಂ॥ ಉಲಿಯದಿ ರೀತಪೋನಿಧಿ ಸಮಾಧಿಯೊಳಿರ್ದಪ ನೆಂದು ಸನ್ನೆಯಿಂ ।
ಜಲವಿಹಗವ್ರಜಕ್ಕೆ ಜಲದೇವತೆಯರ್ ತಲೆದೂಗಿ ಬಾರಿಪಂ ॥
ತಲೆನೆಲರಿಂದ ಪೊಯ್ಯನಲುಗಾಡುವ ತಾವರೆಗಳ್ ನಿಜಾಗ್ರಮಂ ।
ಡಲಿತಮದಾಲಿಗಳ್ ಸೊಗಯಿಸಿರ್ದುವು ಪಾಂಡುಸರಃಪ್ರದೇಶದೊಳ್ ॥ ೧೫ ॥

ವ॥ ಮತ್ತಂ.

ಉ॥ ಅಱಿಡಿಗೊತ್ತುಗೊಟ್ಟು ಮಧುಮಂ ತವೆ ಪೀರ್ದು ರಜೋವಿಕಾರಮಂ ।
ಪೇಱಿ ಕುಜಾತಿಯೊಳ್ ಬೆರಸಿ ಪುಷ್ಪಿತೆಯಂ ಲತೆಯಂ ಪಳಂಚಿ ಮು ॥
ಯ್ದೋಱುವುದಿಲ್ಲಿ ಸಲ್ಲದೆನಗೆಂಬವೊಲೋಸರಿಗೊಂಡು ಪೋಗುತಂ ।
ತೂಱದೆ ಪಣ್ಣನೂದಿದುದು ತಣ್ಣೆಲರಾಮುನಿಯಿರ್ದ ತಾಣದೊಳ್ ॥ ೧೬ ॥

ವ॥ ಅದಲ್ಲದೆಯುಂ.

ಕಂ॥ ಮನವೊಸೆದು ಗೂಢಕಮಳಾ ।
ಸನಮಂ ಗುಪ್ತಾತಪತ್ರಮಂ ಶತಪತ್ರಾ ॥
ನನೆ ಸುಖನೀರಧರಂಗಾ ।
ಮುನಿಗವಟಯ್ಸಿದಳದೇ ನಗಣ್ಯಾವೊ ಪುಣ್ಯಂ ॥ ೧೭ ॥

ಖರಕಿರಣತಾಪ ಮೆನಿತು ।
ಬ್ಬರಿಸಿದೊಡಂ ಕಂದಿ ಕುಂದಿದರವಿಂದದವೋಲ್ ॥
ಕೊರಗದೆ ಕರಗದೆ ಪರಮನ ।
ಚರಮಾಂಗಂ ದೀಪ್ರದೀಪ್ತ ಮೆನಿತೊದವಿದೊಡಂ ॥ ೧೮ ॥

ಮುನಿಪನ ಪರಮೌದಾರಿಕ ।
ತನುವಂ ದುಸ್ಸಹಪರೀಷಹಂ ಬಾಧಿಸಿತೆ ॥
ಲ್ಲೆನಿಸುವುದು ಚಿತ್ರ ಮಲ್ಲದು ।
ತನಿಗೆಂಡಮ ನೊಱಲೆ ಪತ್ತಲೇ ನಱಿದವುದೇ ॥ ೧೯ ॥

ವ॥ ಎನಿಸಿದನುಪಮತಪಃಪ್ರಭಾವದಿಂ ದೆಸೆದು ತದ್ವನಮಧ್ಯಪ್ರದೇಶದೊಳ್ ಚಿರಂತನಚಿತ್ರಕರನಪ್ಪ ಚೀರಘುಟ್ಟಶಂಖವಿಟ್ಟ ಖಟ್ಟಗೆವಲಗೆಯುಂ ತಚ್ಚಬೆಳ್ಪಿನಿಂ ಪಳಚ್ಚನಿರ್ದಪಳಿಕಿನ ವಿಶಾಲಪಟ್ಟದಮೇಲೆ ನೂಲುವೊಯ್ದು ತಿಟ್ಟವಿಟ್ಟಣ್ಕೆಗೆಯ್ದು ರುಜಾಸ್ಥಾಸಕದ ಸಮವರಿಜಿನ ನಂದಕ್ಕೆ ಪಡಿಚಂದವಾಗಿ.

ಕಂ॥ ಚತುರಂಗುಲಪ್ರಮಾಣಂ ।
ವಿತಸ್ತಿಪರಿಮಾಣ ಮೆರಡುಮಡಕಂಗುಷ್ಠ ॥
ದ್ವಿತಯದ ತೆಱಪೆನೆ ಸುವಿಧಿ ।
ವ್ರತಿ ಕಾಯೋತ್ಸರ್ಗ ಮಿರ್ದನಾಲಂಬಭುಜಂ ॥ ೨೦ ॥

ವ॥ ಮತ್ತಂ.

ಮ॥ ಕರಣಗ್ರಾಮ ಮಳುರ್ಕೆಗುಂದಿರೆ ಮನಂ ಭ್ರೂಮಧ್ಯದೊಳ್ ಸಯ್ಯುತ್ತ ।
ಱತ್ತಿರೆ ನಾಸಾಗ್ರದೆ ದಿಟ್ಟಿ ಮುಟ್ಟಿ ಮಿರೆ ಹಸ್ತದ್ವಂದ್ವ ಮೇಕಸ್ಥ ಮಾ ॥
ಗಿರಿ ದಂತಂ ಸಮಸಂದು ತಮ್ಮೊಳಿರೆ ಪರ್ಯಂಕಾಸನಸಾಸೀನ ನೇಂ ।
ಕರಮೊಪ್ಪಿರ್ದನೊ ಪುಷ್ಪದಂತಮುನಿಪಂ ಯೋಗೋಪಯೋಗಸ್ಥಿತಂ ॥ ೨೧ ॥

ಕಂ॥ ಧ್ಯಾನಾಧೀನೈಕಸಮಾ ।
ಧಾನಮನಂ ಸ್ತಿಮಿತದೃಷ್ಟಿ ಪೋಲ್ತಂ ಮುನಿ ಮಂ ॥
ದಾನಿಳ ನಲೆಪಿಲ್ಲದ ಪಾ ।
ಠೀನಕುಲಂ ಪೊಳೆಯದಮಳಕಮಳಾಕರಮಂ ॥ ೨೨ ॥

ತವದಾಜ್ಞಾವಿಚಯ ಮಪಾ ।
ಕವಿಚಯ ಮೆನೆಯುಂ ವಿಪಾಕವಿಚಯಂ ಸಂಸ್ಥಾ ॥
ನವಿಚಯ ಮೆನೆಯುಂ ಪೆಸರ್ವೆ ।
ತ್ತುವು ನಾಲ್ಕುಂ ತಮ್ಮೊಳೆಸೆಯೆ ಧರ್ಮಧ್ಯಾನಂ ॥ ೨೩ ॥

ಸತತ ಮನಂತಚತುಷ್ಟಯ ।
ವಿತರ್ಕ ಮವಗಹನಶಕ್ತಿ ಸೂಕ್ಷ್ಮತೆ ನಿಬಾರ್ಧ ॥
ಧತೆ ಗುರುಲಘುತ್ವ ಬಾಹ್ಯಾ ।
ತ್ಮತೆ ಸಿದ್ಧಗುಣಂಗಳೆಂಟವೆನುತುಂ ನೆನೆದಂ ॥ ೨೪ ॥

ಸನ್ನುತಸಿದ್ಧಪದಾಂಬುಜ ।
ಮನ್ನೆನೆದನಿತಱಿಂದೊಳೆ ತಣಿದು ಮಾಣ್ದನೆ ಮುನಿಪಂ ॥
ಪನ್ನೆರಡು ಮನುಪೇಕ್ಷೆಗೆ ।
ತನ್ನ ಮನಂ ಲಕ್ಷ್ಯಮಾಗೆ ನಿಲೆ ಭಾವಿಸಿದಂ ॥ ೨೫ ॥

ಭಾವದೊಳೆ ಪಾರಿಣಾಮಿಕ ।
ಭಾವಮ ನೊಳಪೊಯ್ಯು ಬಿಸುಟ್ಟು ಸಕಳೇಂದ್ರಿಯದು ॥
ಭಾರ್ವಮ ನವಿನಾಭಾವದಿ ।
ನಾವಿಷ್ಕೃತತತ್ತ್ವ ನಿರ್ದಪಂ ಸುವಿಧೀಶಂ ॥ ೨೬ ॥

ವ॥ ಅಂತಿರಲೊಡಂ

ಮ॥ ಉರುಬೋಧಾವರಣೀಯವಾರ್ಧಿಗೆ ಪೊದಱುವೌರ್ವಾನಳಂ ದರ್ಶನಾ ।
ವರಣೀಯೋತ್ಕರತಾಮಸಕ್ಕೆ ರವಿಬಿಂಬಂ ಮೋಹನೀಯಾದ್ರಿಗು ॥
ದ್ಧುರಚಂಡಾಶನಿ ಯಂತರಾಯವನಕುದ್ಯದ್ದಾವ ಮೆಂಬಂತು ಘಾ ।
ತಿರಿವುವ್ರಾತವಿಘಾತಿ ಯಾಯ್ತು ಭವಶುಕ್ಲಧ್ಯಾನಚಾತುರ್ಬಳಂ ॥ ೩೭ ॥

ವ॥ ಅಂತು ಘಾತಿಕರ್ಮ ಚತುಷ್ಟಯಂ ನಷ್ಟಮಾಗಲೊಡಂ.

ಕಂ॥ ವಿಭುದಾನಲಾಭಭೋಗೋ ।
ಪಭೋಗವೀರ್ಯಾಂತರಾಯಪಂಚಕಹಾನಿ ॥
ಪ್ರಭವ ಮನಂತಚತುಷ್ಟಯ ।
ವಿಭವಂ ನಿಜವಾದಬೋಧವಂ ಕೆಯ್ಕೊಂಡಂ ॥ ೩೮ ॥

ಸ್ಮರಮಥನನೆಂಬರೋಹಣ ।
ಗಿರಿಯೊಳ್ ಕೈವಲ್ಯಬೋಧ ಚಿಂತಾಮಣಿ ಭಾ ॥
ಸ್ವರ ಪೊಗೆದು ಬೆಳಗಿತವಿನ ।
ಶ್ವರಲಕ್ಷ್ಮಿಯ ನೀವುದಿನ್ನದಕ್ಕಚ್ಚರಿಯೇ ॥ ೩೯ ॥

ಸವಿಧಂ ದೂರಂ ಪ್ರತ್ಯಂ ।
ತ ವಿದೆನ್ನದೆ ಭೂತಭಾವಿಭವದಖಿಳಪದಾ ॥
ರ್ಥವ ನೊರ್ಮೆಯೆ ಕರಣವ ನಾ ।
ಸೆವಡೆಯದೆ ನೆಗೞ್ದಿತ್ತಗಾಧಬೋಧಂ ಜನನೊಳ್ ॥ ೪೦ ॥

ವ॥ ಆ ಪ್ರಸ್ತಾವದೊಳ್.

ಕಂ॥ ಸುರಿದುದು ನಮೇರುಕುಸುಮದ ।
ಸರಿ ಮೊೞಗಿದು ದಮರಪಟಹ ಮೆಱಗಿದುದು ನಿಳಿಂ ॥
ಪರ ಮುಕುಟಕೋಟಿ ನೆಗೞ್ದುದು ।
ಸುರಜಯರವ ಮಾದುದಿಂದ್ರನಾಸನಕಂಪಂ ॥ ೪೧ ॥

ವ॥ ಮತ್ತಂ.

ಕಂ॥ ಅನುಗತಿಯಿ ನೊಡನೆ ಶಂಖ ।
ಧ್ವನಿ ಭೇರೀಧ್ವನಿ ಮೃಗಾಧಿಪಧ್ವನಿ ಘಂಟಾ ॥
ಧ್ವನಿ ಯಭವನ ಜ್ಯೋತಿಃಕ ।
ಲ್ಪನಿವಾಸದೊಳೆಸೆದು ದಮರರಱೀದೆಱಗುವಿನಂ ॥ ೪೨ ॥

ವ॥ ಅಂತೀಸ್ವಷ್ಟವಿಷ್ಟಪಾಶ್ಚರ್ಯದೃಷ್ಟಹೇತುವಾದ ನಷ್ಟಘಾತಿಚತುಷ್ಟಯನ ಚತುರ್ಥಕಲ್ಯಾಣದೊಸಗೆಗೆ ನಿಜಮನೋಮಧುಕರಕ್ಕೆ ಮಂದಾರಮಕರಂದ ಸುಂದರನುಗಂಧನಂದೋಹವಾಗಿಬರೆ ತೆಗೆಯೆ ಸರಭಸಾನಂದ ನಿರ್ದು.

ಕಂ॥ ಸುರಪತಿಕರಿಪತಿಯುಂ ಶಚಿ ।
ವೆರಸೇಱಿ ವಿಳಾಸದಿಂದೆ ತಳರ್ವುದು ಮುಖಿಳಾ ॥
ಮರಕೋಟಿ ತಳೆದುದೊಡನೆಯೆ ।
ನೆರೆದು ನಿಗುಂಬಿಸೆ ನಿಯುಕ್ತನಿಜ ನಿಜವಿಭವಂ ॥ ೪೩ ॥

ಚಂ॥ ಬಳಸಿಚತುರ್ವಿಧಾಮರನಿಕಾಯದ ವಾಹನಕೋಟಿ ಭೂಷಣಂ ।
ಗಳ ಬೆಳಗಿಂದ ಮೊಪ್ಪಿ ನಿಲೆ ಶಕ್ರಶರಾಸನರಶ್ಮಿ ರಾಜಮುಂ ॥
ಕಳಿತಪಿಚಿತ್ರಮೇಘಪಟಳಂ ಬಳಸಲ್ಕೆಸೆದಿರ್ದ ಮಂದರಾ ।
ಚಳ ಮೆನೆ ಪೋಲ್ತು ಬಂದುದು ಪುರಂದರ ನೇಱಿದ ಗಂಧಸಿಂಧುರಂ ॥ ೪೪ ॥

ವ॥ ಅಂತುಬರೆ.

ಮ॥ ಅಮರಸ್ತ್ರೀನಿಚಯಂ ವಿಚಿತ್ರಲತೆಯುಂ ಛತ್ರಾಳಿ ಭೂಜಂಗಳಂ ।
ಚಮರೀಜಾವಳಿ ಪುಷ್ಪಮಂಜರಿಯು ಸುತ್ಕೇತುವ್ರಜಂ ಪಲ್ಲವೋ ॥
ದ್ಗಮಶಾಖಾಳಿಯು ನಾನಕಧ್ವನಿ ವಿಹಂಗಧ್ವಾನಮುಂ ಪೋಲೆ ವಿ ।
ಭ್ರಮದಿಂ ಬಂದ ನಡೊಂದುನಂದನವನಂ ಬರ್ಪಂತ ಸಂಕ್ರಂದನಂ ॥ ೪೫ ॥

ತ್ರಿದಶಾಧೀಶನ ಮುಂದೆ ಸಿಂಧುರಘಟಾಸಂದೋಹದಿಂ ವಾಜಿವ ।
ರ್ಗದ ಪರ್ವಿಂ ರಥಕಟ್ಯದೊಡ್ಡಣದಿ ನೊಳ್ಪಾಳೋಳಿಯಿಂ ದುರ್ಕ್ಷಯೂ ॥
ಥದ ಸೊಂಪಿಂ ನವನರ್ತಕೀನಿನಾಹದಿಂ ಗಂಧರ್ವಸಂದೋಹದಿಂ ।
ದಿದು ಸಪ್ತಾಬ್ಧಿ ಯೆನಲ್ಕೆ ಸಪ್ತವಿಧ ಸೇನಾಚಕ್ರ ಮೇನೊಪ್ಪಿತೋ ॥ ೪೬ ॥

ಮುಗಿಲೊಡ್ಡಂ ಕುಡುಮಿಂಚ ನಬ್ಧರವಮುಂ ಶಕ್ರಾಸ್ತ್ರಮುಂ ತಂದಲಂ ।
ನಗಭಿದ್ಗ್ರೀವಕಳಾಪಮುಂ ಕಚಭರಂ ದೃಗ್ದೀಪ್ತಿ ಕಾಂಚೀರವಂ ॥
ಸೊಗಯಿಪ್ಪಾಭರಣಾಂಶು ದೇಹರುಚಿ ಕೆಂಬಾಯ್ಪೋಲೆ ಕಾರ್ಗಾಲಮುಂ ।
ಗಗನಾಭೋಗದೊಳೆಯ್ದೆ ತೋಱು ತಿಳಿಗೆಟ್ಟಿರ್ಪಂದ್ರಕಾಂತಾಜನಂ ॥ ೪೭ ॥

ಮದನಾರಾತಿಯ ಮುನ್ನಿನುತ್ಸವಕೆ ಬರ್ಪಂದಲ್ಲ ಮಾಯೊಪ್ಪ ವಿ ।
ಳ್ಲಿದು ಮತ್ತೊಂದು ಮದೇಭಶೋಭೆ ಯಿದು ಮತ್ತೊಂದಿಂದ್ರಸೌಂದರ್ಯ ಮಿಂ ॥
ತಿದು ಮತ್ತೊಂದಮರೀವಿಲಾಸ ಮಿದು ಮತ್ತೊಂದುದ್ಬಲಾಟೋಪ ಮೆಂ ।
ಬುದ ನೆಂಬಂತೆಸೆದುರ್ವಿಗೇಂ ಪಡೆದುದೋ ದೇವಾಗಮುಂ ರಾಗಮುಂ ॥ ೪೮ ॥

ವ॥ ಅಂತು ಚತುರ್ನಿಕಾಯಾಮರಕುಳಕಳಕಳನಿನಾದಂ ದೆಸೆಯುಂಮಳಂಚಲೆಯೆ ಸೌಧ ಮೇರ್ಗೆಂದ್ರಂ ಬಂದು ಧನದಂಗೆ ಸಮವಸೃತಿಯುಂ ನಿರ್ಮಿಸಲ್ವೇಡಿ ಬೆಸಸುವುದುಂ.

ಸ್ರ॥ ಶ್ರೀಮತ್ಪ್ರಾಸಾದಚೈತ್ಯಾವನಿ ವನಪರಿಖಾಶೋಭೆ ವಲ್ಲೀವನಂ ದ್ವ ।
ಗ್ರಾಮೋದ್ಯಾನಂ ಕನತ್ಕೇತನಮಹಿ ಸುರಭೂಜೋರ್ವಿ ಸಂಗೀತಸದ್ಮ ॥
ಸ್ತೋಮಂ ಲಕ್ಷ್ಮೀಲಸನ್ಮಂಡಪ ಮೆಸೆಯೆ ಗಣವ್ಯಾವೃತೋದ್ಯತ್ತ್ರಿಪೀಠೀ ।
ಧಾಮಮಾಗೊಪ್ಪಿದಪ್ಪಿ ಸಿಂಹಾಸನದೊಳೆಸೆದಪಂ ಪುಷ್ಪದಂತಾಧಿನಾಥಂ ॥ ೪೯ ॥

ವ॥ ಅಂತುಯಕ್ಷನಿರ್ಮಿತಸಮವಸೃತಿಯಂ ನೋಡಿ ಶಚಿಯುಂ ಶಚೀಪತಿಯುಂ ಪರಮಭಕ್ತಿಯಿಂ ಪರಮನಿರ್ದ ಗಂಧಕುಟಿಯಂ ತ್ರಿಪ್ರದಕ್ಷಿಣಂ ಬಂದನೇಕವಸ್ತುಸ್ತವರೂಪಸ್ತವಗುಣಸ್ತವಂಗಳಿಂ ಸ್ತುತಿಯಿಸಿ ದೇವಲೋಕದನೇಕನವ್ಯದಿವ್ಯಾರ್ಚನೆಗಳಿಂ ಅರ್ಚಿಸಿ ಕೇವಲಜ್ಞಾನಮಹಾಕಲ್ಯಾಣಪೂಜೆಯಂ ಮಾಡಿ.

ಕಂ॥ ಸಾಸಿರದೆಂಟಸ್ವರ್ಥೋ<br>
ದ್ಭಾಸುರನಾಮಂಗಳಂ ಮಹೋತ್ಸವದಿಂದಂ ||<br>
ವಾಸವ ನೊಲ್ದಿಡೆ ತಾಳ್ದಿದ ।<br>
ನಾಸುವಿಧಿಜಿನೇಂದ್ರ ನುರುದಯಾಂಬುಧಿಚಂದ್ರಂ || ೫೦ ||

ವ॥ ಅಂತರ್ಚಿಸಿ ಸುರಪತಿ ಜಿನಪತಿಯಂ ಬೀಳ್ಕೊಂಡು ಪೋದ ನನ್ನೆಗ ಮಿತ್ತಲ್ ವಿದರ್ಭಸ್ವಾಮಿಗಳ್ ಮೊದಲಾಗೆಂಭತ್ತೆಣ್ಬರ್ ಗಣಧರರುಂ, ಸಾಸಿರದಯ್ನೂರ್ವರ್ ಪೂರ್ವಧರರುಂ, ಪೊಂಭತ್ತುಲಕ್ಕೆಯುಂ ಮುಯ್ವತ್ತುಸಾಸಿರದಯ್ನೂರ್ವರ್ ಶಿಕ್ಷಕರುಂ, ಎಂಟುಸಾಸಿರದನಾನೂರ್ವರವಧಿಜ್ಞಾನಿಗಳುಂ, ಮೆಣ್ಬಾಸಿರ್ವರ್ ಕೇವಳಿಗಳುಂ, ಪದಿಮೂಱುಸಾಸಿರ್ವರ್ ವಿಕ್ರಿಯರ್ಧಿಪ್ರಾಪ್ತರುಂ, ಎಣ್ಬಾಸಿರದ್ವಯ್ನೂರ್ವರ್ ಮನಃಪರ್ಯಯಜ್ಞಾನಿಗಳುಂ, ಆಱುಸಾಸಿರದಱುನೂರ್ವರ್ ವಾದಿಗಳುಂ, ಘೋಷಾರ್ಯಿಕೆಯರ್ ಮೊದಲಾಗೆ ಮೂಱುಲಕ್ಕೆಯುಂ ಮೆಂಭತ್ತುಸಾಸಿರರ್ಜಿಕೆಯರುಂ ಮೆರಡುಲಕ್ಕೆಶ್ರಾವಕರುಂ, ನಾಲ್ಕುಲಕ್ಷಶ್ರಾವಕಿಯರುಂ ಮಸಂಖ್ಯಾತದೇವರುಂ, ದೇವಿಯರುಂ ಮಸಂಖ್ಯಾತತಿರ್ಯಗ್ಜಾತಿಗಳುಂ, ಬೆರಸು ಧರ್ಮೋಪದೇಶಂಗೆಯ್ಯುತ್ತು ಮಿಪ್ಪತ್ತೆಂಟುಪೂರ್ವಾಂಗಮುಂ ನಾಲ್ಕುವರ್ಷದಿಂ ಕುಂದಿದೊಂದುಪೂರ್ವಂ ವಿಹಾರಿಸುತ್ತುಮಿರ್ದು.

ಕಂ॥ ಮಹಿಮಾಬ್ಧಿ ಪೊಂದುತಿಂಗಳ ।<br>
ವಿಹರಣಮಂ ಮಾಣ್ದು ಬಂದು ಸಮ್ಮೇದಮಹಾ ।<br>
ಮಹಿಧರದೊಳ್ ಸಾಸಿರ್ವರ್ ।<br>
ಮಹಿಮಹಿತಮುನೀಂದ್ರರೊಡನೆ ಯೋಗದೊಳಿರ್ದಂ || ೫೧ ||

ವ॥ ಅಂತಪ್ರತಿಮಪ್ರತಿಮಾಯೋಗಾನಿಯೋಗದೊಳಿರ್ದನಂತರಂ ಸ್ವಸ್ಥಾನಸ್ವಯೋಗಕೇವಳಪ್ರದೇಶನಿರ್ಜರೆಯಂ ಮಾಡುತ್ತು ಮಂತರ್ಮುಹೂರ್ತಕಾಲದೊಳ್ ದಂಡಕವಾಟಪ್ರಕರಣಾಲೋಕಪೂರಣಸಮುದ್ಘಾತಕ್ರಿಯಾಸಮಾಪ್ತಿಯಂ ಕ್ರಮಕ್ರಮದಿಂ ಮಾಡಿ, ಮತ್ತಂ ಸೂಕ್ಷ್ಮಕ್ರಿಯಾಪ್ರತಿಪತ್ತಿ ಯೆಂಬ ಮೂಱನೆಯಶುಕ್ಲಧ್ಯಾನಾಧೀನನಾಗಿ ನಾಮಗೋತ್ರವೇದನೀಯಾಯುಷ್ಯಾಭಿಧಾನಾಘಾತಿಚತುಷ್ಟಯಮಂ ದಗ್ಧರಜ್ಜುಸಮಾನಂಮಾಡಿ ಪಂಚಾಕ್ಷರೋಚ್ಚಾರಣಕಾಲಪರ್ಯಂತಂ ತುಱಿಲೊಳಗಣಬೀಜದಂತೆ ದ್ರವ್ಯಮನೋವಾಕ್ಕಾಯದೊಳೊಂದದೆ ಸಮುಚ್ಛಿನ್ನಕ್ರಿಯಾಪ್ರತಿಪತ್ತಿ ಶುಕ್ಲಧ್ಯಾನಾಪೂರ್ಣತೆಯಿನ ಶೇಷಶೀಲಗುಣನಿಳಯನಘಾತಿಸಮ್ಮಂಧ ಮಪ್ಪ ಮತ್ತರೋತ್ತರಪ್ರಕೃತಿಗಳಂ ಕ್ರಮಕ್ರಮದಿಂ ನಿರವಶೇಷಂ ಕಿಡಿಸಿ.

ಕಂ॥ ಅನುಪಮ ಮಪ್ಪೆಂಟುಗುಣಂ ।
ತನಗಮರ್ದಿರೆ ಸೌಖ್ಯನಿಧಿಯು ಮಖಿಳಜಗತ್ಪಾ ॥
ವನನೇಂ ಮುನಿಜನಗಮ್ಯನು ।
ಮೆನೆ ತನ್ನೊಳೆ ನೆಱಿದಂ ಸುವಿಧಿ ಮುಕ್ತಿಗೆ ಸಂದಂ || ೫೧ ||

ಸ್ಥಿರಭಾದ್ರಪದಸಿತಾಷ್ಟಮಿ ।
ಗಿರದೊಪ್ಪಿರೆ ಮೂಲಭಗಣ ಮಪರಾಹ್ಣಕದೊಳ್ ॥
ವರಪುಷ್ಪದಂತಜಿನಪತಿ ।
ಪರಮಶ್ರೀಮುಕ್ತಿಲಕ್ಷ್ಮಿಯಂ ಕೆಯ್ಕೊಂಡಂ || ೫೨ ||

ವ॥ ಅಂತು ಪುಷ್ಪದಂತಸ್ವಾಮಿ "ಸಕಳಕರ್ಮವಿಪ್ರಮೋಕ್ಷೋಮೋಕ್ಷಃ" ಎಂಬ ನಿಜಮುಖಕಮಳನಿರ್ಗತಾರ್ಹತಮತವಚನಮನನ್ವರ್ಥಂಮಾಡಿ ತ್ರಿಲೋಕ ಶಿಖರಿಶೇಖರನಾಗಿ ಯನಂತಸಹಜಸೌಖ್ಯಾಮೃತವನಧಿವಿಧುವಾಗಿ ನೆಲಸಿರ್ದನ್ನೆಗ ಮಿತ್ತ ಚತುರ್ನಿಕಾಯಾಮರನಿಕಾಯಂ ಸುವಿಧೀಶ್ವರಂಗೆ ಪರಿನಿರ್ವಾಣಕಲ್ಯಾಣಮಹಾಪೂಜೆಯಂ ಮಾಳ್ಪ ಭಕ್ತಿಯಿಂ ಬಂದು ನಿರ್ವಾಣಭೂಮಿಯಂ ದೇವಲೋಕದನೇಕಸುರಭಿ ಸುರತರುಕುಸುಮವಿಸರ ಬಂಧುರಗಂಧಾಕ್ಷತೆಗಳಿಂ ದರ್ಚಿಸಿ.

ಕಂ॥ ಮನದನುನಯದಿಂ ದಾನಂ ।
ದನೃತ್ಯಮಂ ದಿವಿಜರಾಜ ನಖಿಳಧರಿತ್ರೀ ॥
ಜನದ ಮನಕ್ಕಚ್ಚರಿಯು ।
ಪ್ಪಿನ ಮೊಡರಿಸಿ ಪರಮಸುಖಮನೇಂ ತಾಳ್ದಿದನೋ ॥ || ೫೪ ||

ವ॥ ಆಗಳ್ ನಿಜಗುರುವಿಯೋಗದಿಂ ಕೀರ್ತಿವರ್ಮ ನಾದಂ ರೋದನಾನಳದದಹ್ಯಮಾನ ನಾವಿದರ್ಭಗಣಧರಸ್ವಾಮಿಗಳ್ ಬೋಧಿಸೆ(ಯುಂ) ರೋದನ(ಮ)ಂಮಾಣ್ದು ತಾನುಂ ಗುರುನಿಯಾಮದಿಂ ಗುರುನಿರ್ವಾಣಭೂಮಿಯು ನಪೂರ್ವಾರ್ಚನೆಗಳಿಂ ದರ್ಚಿಸಿ ಕೃತಾರ್ಥ ನಪ್ಪೆ ನೆಂದು.

ಮ॥ ಸುರಪಂ ಮಾಡಿದ ನೂನದಿವ್ಯಪರಿನಿರ್ವಾಣೋದ್ಧ ಕಲ್ಯಾಣ ವಿ ।
ಸ್ತರಪೂಜಾತಿಶಯಕ್ಕ ಮಿಂತಿದೆನಸುಂ ಮೇಲೆಂಬಿನಂ ಮಾಡಿದಂ ॥
ಪರಮಾರ್ಹತ್ವದಪೂಜೆಯಂ ಬಹುವಿಧದ್ರವ್ಯಾರ್ಚನಾನೀಕದಿಂ ।
ಧರಣೀವಿಶ್ರುತಕೀರ್ತಿ ಕೀರ್ತಿಧರಭೂಪಂ ಭವ್ಯರತ್ನಾರ್ಣವಂ || ೫೫ ||

ಚಂ॥ ನವರಸಮಂ ನಿಮಿರ್ಚುವ ಬೆಡಂಗ ನಮರ್ಚುವ ದೋಷಮಂ ತಳೆ ।
ರ್ಚುವ ಗುಣಮಂ ಕಟಿಲ್ವುವ ಮರ್ದಂಪ ನೊಡರ್ಚುವ ಬಂಧಮಂ ತೊಡ ॥
ರ್ಚುವ ಕಿವಿಪೊಕ್ಕಲರ್ಚ ಮೆಳೆನುಣ್ಪನೊಡರ್ಚುವ ಕಾವ್ಯಸತ್ಕಳಾ ।
ರ್ಣವ ಮೃಗಲಕ್ಷ್ಮಲಕ್ಷಣಪಚೋವಧುಮಂ ಬುಧರೊಲ್ದು ಪರ್ಣಿಕಂ || ೫೬ ||

* ಶಲ್ಯವಿದೂರಬಂಕರಸನಂಕದ ಮಾಚೆಯ ತಂದೆ ನಿತ್ಯಮಾಂ ।
ಗಲ್ಯಸುಶೀಲಯುಕ್ತೆ ಮಹದೇವಿಯ ವಲ್ಲಭನೊಪ್ಪುವೆತ್ತ ಸಾ ॥
ಕಲ್ಯಕುಲಾಮೃತಾಂಬುನಿಧಿ ಸೋಮನ ಚಾಮನ ಸೂನು ಪೊಲ್ದು ಸಾ ।
ಕಲ್ಯಗುಣಾಸ್ಪದಂ ಬರೆದಪಂ ಬುಧಮಾಧವ ನೀಪ್ರಬಂಧಮಂ ॥ ೫೭ ॥

* ಬಿಂದುವಿನೊಂದು ಶೋಭೆ ತಲೆಕಟ್ಟಿನ ಪೊರ್ಕುಳಿ ಚೆಲ್ವು ಮಾತ್ರೆಯೊಳ್ ।
ನಿಂದ ಬೆಡಂಗು ಬಳ್ಳಿಯೊಳೊಡಂಬಡುತಿರ್ಪ ನಯಂವಿಸರ್ಗದೂ ॥
ಳ್ಪೊಂದಿರಲಕ್ಕರಕ್ಕೆ ಬರೆವಂ ಚತುರರ್ ಪರಿವರ್ಣಿಸಲ್ ನವಿ ।
ಲ್ಗುಂದದ ಮಾದಿರಾಜವಿಬುಧಂ ವಿಬುಧೋತ್ಥಿತನವ್ಯಕಾವ್ಯಮಂ ॥ ೫೮ ॥

ಗದ್ಯ

ಇದು ಸಮಸ್ತಭುವನಸಂಸ್ತುತಜಿನಾಗಮಕುಮುದ್ವತೀ
ಚಾರುಚಂದ್ರಾಯಮಾಣಮಾಸಿತಶ್ರೀಮದುಭಯಕವಿಕಮಳಗರ್ಭ
ಮುನಿಚಂದ್ರಪಂಡಿತದೇವ
ಸುವ್ಯಕ್ತಸೂಕ್ತಿಚಂದ್ರಿಕಾಪಾನಪರಿಪುಷ್ಟಮಾನಸಮರಾಳ
ಗು ಣ ವ ರ್ಮ ನಿ ರ್ಮಿ ತ ಮ ಪ್ಪ
ಪುಷ್ಪದಂತ ಪುರಾಣದೊಳ್
ಪರಿನಿರ್ವಾಣ ಮಹಾಕಲ್ಯಾಣಾಭಿವರ್ಣನಂ
ಚತುರ್ದಶಾಶ್ವಾಸಂ
ಪುಷ್ಪದಂತಪುರಾಣಂ ಸಂಪೂರ್ಣಂ
ಮಂಗಳಮಹಾಶ್ರೀ



* ಈ ಎರಡುಪದ್ಯಗಳು ಮದ್ರಾಸ್ ಓರಿಯಂಟಲ್ ಲೈಬರಿಯಲ್ಲಿರುವ ತಾಳಪ್ರತಿಯಲ್ಲಿ ಮಾತ್ರವಿವೆ.

# ಪರಿಶಿಷ್ಟಂ. ೧.

## ಗುಣವರ್ಮವಿರಚಿತಂ

## ಚಂದ್ರನಾಥಾಷ್ಟಕಂ

ಸ್ರ॥ ಶ್ರೀಪಾದಂ ಗೋಮಿನೀಭಂಗಿಗೆ ನವನಳಿನಶ್ರೀಮುಖಂ ಶ್ರವ್ಯದಿವ್ಯಾ ।
ಳಾಪಜ್ಯೋತ್ಸ್ನಾವಿಲಾಸಕ್ಕಮಲಹಿಮಕರಸ್ವಚ್ಛಬೋಧಂ ತ್ರಿಲೋಕೀ ॥
ರೂ[1][ಪಾದರ್ಶಕ್ಕ]ವಾತ್ಮಾಕೃತಿ ಶಿವಸುಖವಲ್ಲೀವಿತಾನಕ್ಕೆದರ್ಪ ।
ದಾಪೂರ್ಣೈಶ್ವರ್ಯಮಂ ಮಾಡೆಮಗೆ ಸುಖಾವಾಪ್ತಿಯಂ ಚಂದ್ರನಾಥಾ ॥ ೧ ॥

ಮ॥ಸ್ರ॥ ನೆನೆವಂದಾನಂದದಿಂ ತಣ್ಣನೆ ತಣಿದು ಜಿಗಿಲ್ಕುಂ ಮನಂ ಬಂದು ಕಂಡಂ ।
ದೆನಸುಂ ತಣ್ಪಿಂ ಕುಳಿರ್ಕೊರ್ಡೆಗು ಮಮದಿರ್ನೊಳಬ್ಬಿಂತೆ (ಕಣ್ಬಣ್ಣಿ)ಪಂದಿಂ ॥
ಪಿನಲಂಪಂ ಸೇವಿಪಂತಗ್ಗಲಿ(ಸಿ)ನಲಿಗು ಮಿಾಜಿಹ್ವೆ ಯೆಂದಂದು ನಿನ್ನಂ ।
ನೆನೆದುಂ ಕಂಡುಂ ಪೊಗಟ್ದಿಂ ಸುಖಿ [2]ಯೆನಿಸಿದವಂ ಧನ್ಯನೈ ಚಂದ್ರನಾಥಾ ॥ ೨ ॥

ನಿನಗಿಂದ್ರಂ ಪಂಚಕಲ್ಯಾಣಮ ನೆಸಗಿ ಮಹೈಶ್ವರ್ಯನಾದಂ ಕಡಲ್ ಪಾ ।
ಲ್ವೊನಲಂ ಜನ್ಮಾಭಿಷೇಕಕ್ರಿಯೆಗೆ ಸಲಿಸಿ ಗಂಭೀರ ಮಾಯ್ತದ್ರಿಪಂ ಮ ॥
ಜ್ಜನಲೀಲಾಪೀಠ ಮಾಗಿರ್ದ ವಿಚಳ ಮೆನಿಸಿತ್ತೆಂದೊಡೈಶ್ವರ್ಯಗಾಂಭೀ ।
ರ್ಯನುತಸ್ಥೈರ್ಯಕ್ಕೆ ಲೋಕತ್ರಯದೊ ಳೆಡೆ ಯಡಾರ್ ನಿನ್ನವೋಲ್ ಚಂದ್ರನಾಥಾ ॥ ೩ ॥

ಸುದತೀಲೀಲಾಂಗಮಂ ನೋಂಕದ ನವಯುವತೀಸ್ನಿಗ್ಧಮುಗ್ಧಾಸ್ಯಮಂ ನೋ ।
ಡದ ಕಾಂತಾಳಾಪಮಂ ಕೇಳದ ವನಜಮುಖೀವಕ್ತ್ರಸೌರಭ್ಯಮಂ ಕೊ ॥
ಳ್ಳದ ರಾಮಾರಮ್ಯಬಿಂಬಾಧರರಸಮ ನಡೆತ್ತೀರ್ಗಿಂಟ ವಕ್ಷೂಣಮೋಕ್ಷಾ ।
ಸ್ಪದಲಕ್ಷ್ಮೀಸಂಗಸೌಖ್ಯೋನ್ನತಿ ನಿನಗೆ ನಿಜಂ ದೇವರೊಳ್ ಚಂದ್ರನಾಥಾ ॥ ೪ ॥

ಹರಿಪೀಠಂ ಮೋಹಮಾತಂಗಮ ನಳರಿಸಿತೋ ಚಾಮರಂ ಕಾಮದೀಪಾಂ ।
ಕುರಮಂ ಬೀಸಿತ್ತೊ ಭಾಮಂಡಲ(ಮಘ)ತಮಮಂ ತೂಳ್ದಿತೊ ಪುಂಡರೀಕಂ ॥
ಪುರಿದತ್ತೋ ಜನ್ಮಸಂತಾಪಮ ನಳಜಾಸಿತೋ ಶೋಕಮಂ ತಳ್ತಶೋಕಂ ।
ಭರದಿಂ ದೆಂಬಂತೆ ಮೆಯ್ದೋಱು ನಿಜಸಭೆಯೊಳ್ ತದ್ಭಯಂ ಚಂದ್ರನಾಥಾ ॥ ೫ ॥

---

1 ಮೂಲದಲ್ಲಿ–ರೂಪಕರ್ಾಶಮಾತ್ಮಾಕೃತಿ–ಎಂದಿದೆ–ಇಲ್ಲಿ ವೃತ್ತಕ್ಕೆ ಒಂದಕ್ಷರವು ಕಡಿಮೆಯಾಗಿರುವುದು. ಹಿಂದೆ ಮುಖಾದಿಗಳಿಗೆ ಒಂದೊಂದು ವಿಶೇಷಣವಿರುವುದು. ಆದುದರಿಂದ ಈ ಕ್ರಮಕ್ಕನುಗುಣವಾಗಿ—ಆತ್ಮಾಕೃತಿಗೂ ಆಕಾಶವೆಂಬ ವಿಶೇಷಣವಿರುವಂತೆ, ರೂಪಕಾ(ಕಾ)ಶಮಾತ್ಮಾಕೃತಿ, (ಆಕಾಶಂ-ಸುತ್ತಲೂ ಚೆನ್ನಾಗಿಪ್ರಕಾಶಿಸತಕ್ಕ) ಎಂದೂ ತಿದ್ದಬಹುದು. ಪ್ರಕೃತದಲ್ಲಿ ರೂ[ಪಾದರ್ಶಕ್ಕ]ವಾತ್ಮಾಕೃತಿ ಎಂದು ತಿದ್ದಿದೆ. [2] ಯೆನಿಸದವಂ ಧನ್ಯನೇ ಚಂದ್ರನಾಥಾ.

ಮ॥ಸ್ರ॥ ಮೃಗತೃಷ್ಣಾಭೋಗಮಂ ತಿರ್ದಿದ ನಿಡುಮುಡು ಮೆಂದೆಯ್ದು ಮಾಭೀಳಕಾಳೋ ।
ರಗನಂ ನೀಮಾ(ಳ)ಹೊಂದೆತ್ತುವ ನಿಶಿತಕನತ್ಖಡ್ಗಮಂ ನೆಯ್ದಿಲೊಳ್ವಾ ॥
ಸಿಗ ಮೆಂದಾಂಪಂತೆ ನೀನಲ್ಲದ ಕುಮತಶತಭ್ರಾಂತರಂ ದೇವರೆಂದೋ ।
ಲಗಿಪೆಗ್ಗರ್ಗದ ಬೋಧಂ ನಗಿಸುವು ದಭವತ್ಪ್ರಾಪ್ತರಿಂ ಚಂದ್ರನಾಥಾ ॥ ೬ ॥

ಗಳಿತಂ (ಘಾ)ತಿವ್ರಜಂ ಪಿಂಗಿದ ಜವನಿಕೆ ಪುಷ್ಪೋಲ್ಲಸದ್ವೃಷ್ಟಿ ಪುಷ್ಪಾಂ ।
ಜಳಿ ದಿವ್ಯಶ್ರವ್ಯನಾದಂ ಸರಸಮಧುರಗೀತಸ್ವನಂ ದೇವಭೇರೀ ॥
ಕುಳನಾದಂ ಮಿಕ್ಕ ಥಕ್ಕಾರವ ಮನೆ ಭವದಾಸ್ಥಾನದೊಳ್ ರಂಜಿಕುಂ ಮಂ ।
ಜುಳಮುಕ್ತಿಶ್ರೀವಧೂಸಂಗದೊಳಭಿನವಸಂಗೀತಕಂ ಚಂದ್ರನಾಥಾ ॥ ೭ ॥

ಸ್ಫುರಿತಶ್ರೀಪಾದ ಮದ್ಯೋತಿಸೆ ಕಿಡೆ ತಮ ಮಾಶಾಂಬರಶ್ರೀ ಪೊದಳಿರ್ದು ।
ಪ್ಪಿರೆ ಸತ್ಪಂದೋಹ ಮಾರಾಜಿಸೆ ಕುವಲಯ ಮಾನಂದಮಂ ತಾಳ್ದೆ ಕಾಮಾ ॥
ತುರಚಕ್ರಕ್ಕಾಗೆ ರಾಗಕ್ಷಯ ಮಮೃತನಿಧಿಸ್ಫೂರ್ತಿ ಕೆಯ್ಗಣ್ಮೆ ನಿಚ್ಚಂ ।
ಧರಣೀಲೋಕಕ್ಕೆ ನಿನ್ನಿಂ ದ್ವಿಗುಣಿಸುವುದು ಚಂದ್ರೋದಯಂ ಚಂದ್ರನಾಥಾ ॥ ೮ ॥

ಬಹುವಿದ್ಯಾಮಂಡನಂ ಪಂಡಿತಮುನಿಪತಿಚಂದ್ರಪ್ರತಿಶ್ರೀಪದಾಂಭೋ ।
ರುಹಸೇವಾಸಂಗಭೃಂಗಂ ಕ್ಷಿತಿನುತಗುಣವರ್ಮಂ ವಚೋಮಾಲೆಯಿಂ ದ ॥
ನ್ವಹ ಮಾದಂ ಪೂಜಿಸಲ್ ರಾಜಿಪ [ಪದ]ನನಘಂ ಮಾಳ್ಕೆ ಭವ್ಯರ್ಗೆ ಸೌಖ್ಯಾ ।
ವಹಮಂ ಕೊಲ್ಲಾಪುರಶ್ರೀತ್ರಿಭುವನತಿಳಕಾಲಂಕೃತಂ ಚಂದ್ರನಾಥಂ ॥ ೯ ॥

ಚಂದ್ರನಾಥಾಷ್ಟಕಂ
ಸಂಪೂರ್ಣಂ

# ಪರಿಶಿಷ್ಟ ೨.



## ಪದ್ಯಗಳ ಆದಿಯನ್ನು

### ಅಕಾರಾದ್ಯನುಕ್ರಮದಲ್ಲಿ ತಿಳಿಸುವ ಪಟ್ಟಿಕೆ.

ಅ

## ನ

# ಪರಿಶಿಷ್ಟಂ ೩.

## ಆಶ್ವಾಸ ಕ್ರಮದಲ್ಲಿ ವೃತ್ತಗಳ ಹೆಸರು ಸಂಖ್ಯೆಗಳನ್ನು ತೋರಿಸುವ ಪಟ್ಟಿಕೆ.

| | ವೃತ್ತಗಳ ಹೆಸರು. | ಆಶ್ವಾಸ ಮತ್ತು ಆಶ್ವಾಸದಲ್ಲಿರುವ ವೃತ್ತಸಂಖ್ಯೆ. | | | | | | | | | | | | | | |
|---|---|---|---|---|---|---|---|---|---|---|---|---|---|---|---|---|
| | | I | II | III | IV | V | VI | VII | VIII | IX | X | XI | XII | XIII | XIV | ಒಟ್ಟು |
| 1 | ಸ್ರಗ್ಧರೆ ... | 1 | ... | ... | ... | ... | ... | ... | ... | ... | 1 | ... | ... | . | 1 | 3 |
| 2 | ಮತ್ತೇಭಂ ... | 9 | 13 | 7 | 22 | 25 | 11 | 15 | 24 | 15 | 18 | 14 | 21 | 29 | 10 | 233 |
| 3 | ಮಹಾಸ್ರಗ್ಧರೆ ... | 7 | 4 | 6 | 4 | 9 | 2 | 9 | 4 | 6 | 1 | 2 | 5 | 5 | ... | 64 |
| 4 | ಚಂಪಕಮಾಲೆ ... | 19 | 23 | 21 | 21 | 30 | 13 | 13 | 16 | 27 | 13 | 9 | 11 | 19 | 6 | 246 |
| 5 | ಉತ್ಪಲಮಾಲೆ ... | 6 | 6 | 10 | 6 | 12 | 5 | 10 | 7 | 5 | 5 | 4 | 9 | 12 | 4 | 101 |
| 6 | ಶಾರ್ದೂಲವಿಕ್ರೀಡಿತಂ ... | 2 | 1 | 1 | .. | 1 | 1 | ... | 1 | 2 | 1 | ... | ... | 1 | ... | 11 |
| 7 | ತರಳವೃತ್ತಂ ... | ... | 1 | .. | .. | ... | ... | ... | ... | .... | ... | .. | | | ... | 1 |
| 8 | ಕಂದಂ ... | 51 | 41 | 86 | 43 | 36 | 24 | 34 | 66 | 60 | 50 | 36 | 63 | 55 | 37 | 682 |
| 9 | ರಗಳೆ ... | ... | 1 | ... | ... | ... | ... | .. | ... | 2 | 1 | ... | .. | | | 4 |
| 10 | ಮುದ್ರಿಕೆ ... | ... | 1 | . | ... | .. | .. | ... | ... | ... | ... | ... | ... | .. | .. | 1 |
| 11 | ಮಂದಾಕ್ರಾಂತಂ .. | ... | .. | 1 | ... | ... | .. | ... | ... | | ... | ... | .. | | | 1 |
| 12 | ಹರಿಣಿ ... | ... | 1 | . | 1 | ... | ... | ... | ... | 1 | 1 | .. | 3 | . | ... | 7 |
| 13 | ಮಾಲಿನಿ ... | ... | ... | ... | ... | 1 | ... | ... | ... | | ... | | 1 | 1 | .. | 3 |
| 14 | ಶಿಖರಿಣಿ ... | ... | ... | ... | ... | ... | ... | 1 | 1 | | . | . | .. | . | .. | 2 |
| 15 | ದ್ರುತ ವಿಲಂಬಿತಂ ... | ... | ... | ... | ... | ... | ... | ... | ... | ... | . | | ... | 1 | .. | 1 |
| 16 | ಉತ್ಸಾಹಂ ... | ... | ... | ... | ... | ... | ... | ... | 1 | ... | 1 | | 1 | . | ... | 3 |
| 17 | ಸ್ವಾಗತಂ ... | ... | ... | .. | ... | ... | ... | ... | ... | 2 | .. | | ... | | .. | 2 |
| | | 95 | 97 | 132 | 97 | 114 | 56 | 82 | 120 | 120 | 92 | 65 | 114 | 123 | 58 | 1365 |

ಸಂಸ್ಕೃತ ಶ್ಲೋಕ 5.

# ಪರಿಶಿಷ್ಟ ೪.

(ಚಾಮುಂಡರಾಯ ಪುರಾಣಾಂತರ್ಗತ)

## ಪುಷ್ಪದಂತ ಪುರಾಣಂ

ಕಂ॥ ಶ್ರೀಸತ್ತೀರ್ಥಕರತ್ವಮ ।
ಹಾಮಹಿಮೊದಯೊತ್ಕಂಪಿತಾಸನಾಮರಕೃತಪೂ ॥
ಜಾಮಹಿಮರನಶ್ವರಸುಖ ।
ಧಾಮ[ಮ]ನೆಮಗೀಗೆ ಪುಷ್ಪದಂತ ಜಿನೇಂದ್ರಂ ॥ ೧ ॥

ಪುಷ್ಕರವರದ್ವೀಪದ ಮೂಡಣಮಂದರದಪರವಿದೇಹದ ಸೀತಾನದಿಯ ಬಡಗಣತಡಿಯ ಪುಷ್ಕಳಾವತೀ ವಿಷಯದ ಪುಂಡರೀಕಿಣಿಯ ನಾಳ್ವೋಂ ಮಹಾಪದ್ಮನೆಂಬರಸಂ ಮನೋಹರೋದ್ಯಾನದೊಳ್ ಇರ್ದ ಭೂತಹಿತಜಿನರ ಪಕ್ಕದ ಧರ್ಮಮಂ ಕೇಳ್ದು ತತ್ತ್ವಭಾವನೆಯಿಂ ಧನದತ್ತನೆಂಬ ತನ್ನ ಮಗಂಗೆ ರಾಜ್ಯಮಂ ಕೊಟ್ಟು ಸಂಸಾರ ಭೀರುಗಳ್ ಪಲರುಂ ಬೆರಸು ತಪಂ ಬಟ್ಟೇಕಾದಶಾಂಗಧರಂ ಷೋಡಶಭಾವನೆಗಳಿಂ ತೀರ್ಥಕರ ಪುಣ್ಯಮಂ ಕಟ್ಟಿ ಕಾಲಾಂತದೊಳಾರಾಧನಾವಿಧಿಯಿಂ ಪ್ರಾಣತಕಲ್ಪದೊಳಾರಣವಿಮಾನದೊಳ್ ಪ್ರಾಣತೇಂದ್ರನಾಗಿ ಪುಟ್ಟಿ ವಿರೆಶಂ ಸಾಗರೋಪಮಾಯುಷ್ಯನುಂ ಮೂಱು ಮೊೞವರೆ ನಿಡಿಯನುಂ, ಪಂಚಮಪೃಥ್ವೀಗತಾವಧಿಜ್ಞಾನನುಂ, ಶುಕ್ಲಲೇಶ್ಯಾಪರಿಣಾಮನುಮಾಗಿ ಸುಖಮಿರ್ಪಿನಂ.

ಇತ್ತ ಜಂಬೂದ್ವೀಪದ ಭರತ ಕ್ಷೇತ್ರದ ಕಾಕಂದಿನಗ(ಪು)ರಮನಾಳ್ವ ಕಾಶ್ಯಪಗೋತ್ರದ ಸುಗ್ರೀವಮಹಾರಾಜನರಸಿ ಜಯರಾಮಾಮಹಾದೇವಿ ಫಾಲ್ಗುಣ ಬಹುಳ ನವಮಿಯ ಬೆಳಗಪ್ಪಜಾವದೊಳ್ ಮೂಲನಕ್ಷತ್ರಮಾಗೆ ಷೋಡಶಸ್ವಪ್ನಂಗಳಂ ಕಂಡವಧಿಜ್ಞಾನಿಯಪ್ಪ ತನ್ನರಸನಿಂ ತತ್ಫಲಮನಱಿದು ಸುಖಮಿರ್ಪಿನಂ ಸ್ವರ್ಗಾವತರಣ ಮಹಾ ಕಲ್ಯಾಣಪೂಜಾಪೂರ್ವಕನಾ ಪ್ರಾಣತೇಂದ್ರನಾ ದೇವಿಯ ಗರ್ಭಕ್ಕವತರಿಸಿ ಮುಂ ಪೇೞ್ದ ಚಂದ್ರಪ್ರಭತೀರ್ಥ ಸಂತಾನಂ ಪತ್ತು ಕೋಟಿ ಸಾಗರೋಪಮಂ ಪ್ರವರ್ತಿಸುವಂದಾ ಕಾಲದೊಳ್ ಮಾರ್ಗಶಿರಶುದ್ಧ ಪಾಡಿವ ಚೈತ್ರಯೋಗದೊಳ್ ತ್ರಿಜ್ಞಾನಧರಂ ಪುಟ್ಟೆ ಸೌಧರ್ಮೇಂದ್ರಂ ಬಂದು ಪುಷ್ಪೋಪಮದಂತನಪ್ಪುದಱಿಂ ಪುಷ್ಪದಂತನುಂ ಸುವಿಧಿಯುಂ ಮೆಂದನ್ವರ್ಥನಾಮಮನಿಟ್ಟು ಪೋದಂ.

ಇತ್ತಲೆರಡುಲಕ್ಕೆ ಪೂರ್ವಂ ಪರಮಾಯುಷ್ಯನು ನೂಱು ಬಿಲ್ಲಿಡಿಯನುಂ ಧವಳವರ್ಣನುಮಾಗಿ ಬಳೆದಯ್ವತ್ತು ಸಾಸಿರಪೂರ್ವಂ ಕುಮಾರಕಾಲಂ ಸಲೆ ರಾಜ್ಯಾಭಿಷೇಕ ಕಾಲಮಾಗಯ್ವತ್ತು ಸಾಸಿರಪೂರ್ವ ಮಿಪ್ಪತ್ತೆಂಟು ಪೂರ್ವಾಂಗಮುಮಾಗಳುಲ್ಕಾಪಾತದರ್ಶನದಿಂ ನಿರ್ವೇಗಪರಂ ಲೋಕಾಂತಿಕದೇವರ್ ಪ್ರತಿಬೋಧಿಸೆ ತನ್ನ ಮಗಂಗೆ ರಾಜ್ಯಮಂ ಕೊಟ್ಟು ಸೌಧರ್ಮೇಂದ್ರಕೃತ ನಿಷ್ಕ್ರಮಣಾಭಿಷೇಕಂ ಸೂರ್ಯಪ್ರಭಮೆಂಬ ಶಿಬಿಕೆಯನೇಱಿ ಪುಷ್ಪಕೋದ್ಯಾನದೊಳ್ ಷಷ್ಠೋಪವಾಸದೊಳ್ ಪುಷ್ಯಮಾಸದೇಕಾದಶಿಯಪರಾಹ್ಣದೊಳ್ ಅನೂರಾಧಾನಕ್ಷತ್ರದೊಳ್ ಸಾಸಿರ್ವರರಸುಗಳ್ವೆರಸು ಸಂಯಮಧರನಾಗಿ ಚತುರ್ಜ್ಞಾನಧರಂ ಮಱುದೆವಸಂ ನಳಿನಪುರಮನಾಳ್ವ ಸೋಮದತ್ತನ ಮನೆಯೊಳ್ ಪಂಚಾಶ್ಚರ್ಯಮಾಗೆ ಮೌನವ್ರತದಿಂ ಮೂಱು ತಿಂಗಳ್

ಛದ್ಮಸ್ಥಕಾಲಂ ಸಲೆ ಪುಷ್ಪಕೋದ್ಯಾನದೊಳ್ ನಾಗವೃಕ್ಷದಡಿಯೊಳ್ ಕಾರ್ತಿಕ ಶುದ್ಧ ಬಿದಿಗೆಯಪರಾಹ್ಣದೊಳ್ ಮೂಲನಕ್ಷತ್ರಮಾಗೆ ಕೇವಲಜ್ಞಾನಮಹಾಕಲ್ಯಾಣ ಪೂಜೆಯನೆಯ್ದಿ ಸಾಸಿರದೆಂಟನ್ವರ್ಥನಾಮಂಗಳಂ ತಾಳ್ದಿ ವಿದರ್ಭಸ್ವಾಮಿಗಳ್ ಮೊದಲಾಗೆಣ್ಬತ್ತೆಣ್ಬರ್ ಗಣಧರರುಂ, ಸಾಸಿರದಯ್ನೂರ್ವರ್ ಪೂರ್ವಧರರುಂ, ಒಂದು ಲಕ್ಕೆಯುಮಯ್ವತ್ತುಸಾಸಿರದಯ್ನೂರ್ವರ್ ಶಿಕ್ಷಕರುಂ, ಎಂಟು ಸಾಸಿರದ ನಾನೂರ್ವರವಧಿಜ್ಞಾನಿಗಳುಂ ಎಂಟುಸಾಸಿರ್ವರ್ ಕೇವಲಿಗಳುಂ ಪದಿಮೂಱು ಸಾಸಿರ್ವರ್ ವಿಕ್ರಿಯರ್ದ್ಧಿಪ್ರಾಪ್ತರುಂ, ಎಣ್ಸಾಸಿರದಯ್ನೂರ್ವರ್ ಮನಃಪರ್ಯಯಜ್ಞಾನಿಗಳುಂ, ಆಱುಸಾಸಿರದಱುನೂರ್ವರ್ ವಾದಿಗಳುಂ, ಘೋಷಾರ್ಯಿಕೆಯರ್ ಮೊದಲಾಗೆ ಮೂಱುಲಕ್ಕೆಯು ಮೆಣ್ಬತ್ತುಸಾಸಿರ್ವರ್ ಅರ್ಜ್ಜಿಕೆಯರುಂ, ಎರಡುಲಕ್ಕೆ ಶ್ರಾವಕರುಂ, ನಾಲ್ಕುಲಕ್ಕೆ ಶ್ರಾವಕಿಯರುಂ, ಅಸಂಖ್ಯಾತ ದೇವದೇವಿಯರುಂ, ಸಂಖ್ಯಾತ ತಿರ್ಯಗ್ಜಾತಿಗಳುಂ, ಬೆರಸು ದ್ವಾದಶಗಣ(ಪರಿಷತ್)ಪರಿವೃತಂ ಧರ್ಮೋಪದೇಶಂ ಗೆಯ್ಯುತ್ತುಂ ಇಪ್ಪತ್ತೆಂಟು ಪೂರ್ವಾಂಗಮುಂ ನಾಲ್ಕುವರ್ಷಂ ಕುಂದಿದೊಂದು ಲಕ್ಕೆ ಪೂರ್ವಂ ವಿಹಾರಿಸುತ್ತುಮೊಂದು ತಿಂಗಳ್ ವಿಹರಣವಿಧಿಯಂ ಮಾಣ್ದು ಸಂಮೇದಗಿರಿಯೊಳ್ ಸಾಸಿರ್ವರ್ ಮುನಿಗಳ್ವೆರಸು ಪ್ರತಿಮಾಯೋಗಧಾರಿ ಭಾದ್ರಪದಶುದ್ಧ ಅಷ್ಟಮಿಯಪರಾಹ್ಣದೊಳ್ ಮೂಲನಕ್ಷತ್ರಮಾಗೆ ಪುಷ್ಪದಂತ ಸ್ವಾಮಿಗಳ್ ಮೋಕ್ಷಲಕ್ಷ್ಮಿಯಂ ಕೆಯ್ಕೊಂಡರ್. ದೇವೇಂದ್ರನುಂ ಪರಿನಿರ್ವಾಣಕಲ್ಯಾಣಪೂಜಾನಂದ ನೃತ್ಯಮನಾಡಿ ಪೋದಂ.

ಗದ್ಯಂ

ಇದು ಸಕಲಶಾಸ್ತ್ರಸಂಯಮಸಂಪನ್ನ ಶ್ರೀಮದಜಿತಸೇನಭಟ್ಟಾರಕ
ಚರಣಕಮಲ ಚಂಚರೀಕಂ ಧರ್ಮವಿಜಯ
ಶ್ರೀಮಚ್ಚಾಮುಂಡ ರಾಜವಿರಚಿತಮಪ್ಪ
ತ್ರಿಷಷ್ಟಿಲಕ್ಷಣ ಮಹಾಪುರಾಣದೊಳ್
**ಪುಷ್ಪದಂತಪುರಾಣಂ.**

# ಪರಿಶಿಷ್ಟಂ ೫.

[1] ಶ್ರೀಪುರಾಣಾನ್ತರ್ಗತಮಪ್ಪ

ಪುಷ್ಪದಂತಪುರಾಣಕಥೆ

(ತಮಿೞಿನ ಪರಿವರ್ತನೆ)

ಸಿದ್ಧಂ ನಮಃ

## ಸುವಿಧಿಜಿನಪತಿ ಪುರಾಣಂ.—

[2] ಸದವರ್ಷ್ಟಿ? ಜ್ಞಾನಗರ್ಭಂ ಚರಿತಮಭಿಮತಂ ಮೋಕ್ಷಮಾರ್ಗಂ ಪ್ರಣೀತ್ವಾ ।
ಸಂಪ್ರಾಪ್ಯಾದ್ಯೋಯಥಾರ್ಥಂ ಸುವಿಧಿರಿತಿ ಜಗನ್ಮಂಗಲಂ ನಾಮ ಸಮ್ಯಕ್ ॥
ಶ್ರೀಮದ್ದೇವೇಂದ್ರ ಗಂಧದ್ವಿರದಪತಿಲಸನ್ಮೌಳಿ ಮಾಣಿಕ್ಯಮಾಲಾ ।
ಜ್ಯೋತ್ಸ್ನಾಕ್ಷೀರಾಭಿಷಿಕ್ತ ಕ್ರಮಕಮಲಯುಗಸ್ಸೋಽವತಾನ್ನೋ ಜಿನೇನ್ದ್ರಃ ॥

ಅಥ ಸುವಿಧಿಜಿನಪತಿ ಪುರಾಣಮುಚ್ಯತೇ.

ಪುಷ್ಕರಾರ್ದ್ಧ ಪೂರ್ವಮನ್ದರ ಪೂರ್ವವಿದೇಹ ಪುಷ್ಕಲಾವತೀವಿಷಯ ಪುಣ್ಡರೀಕಿಣೀ ನಗರದರಸು ಮಹಾಪದ್ಮಂ. ಅವನೊಂದುದೆವಸಂ ಮನೋಹರೋದ್ಯಾನದಲ್ಲಿ ದಯಮಾಡಿಸಿದ್ದ ಭೂತಹಿತಜಿನಪತಿಯ ಸಮೀಪದಲ್ಲಿ ಧರ್ಮತತ್ವವಂ ಕೇಳಿದವನಾಗಿ ಸಂಸಾರದಲ್ಲಿ ವಿರಕ್ತಿವಡೆದು ಧನದೇವನೆಂಬ ಮಗನಿಗೆ ರಾಜ್ಯಪಟ್ಟವಂ ಕಟ್ಟಿ ಹಲವುಮಂದಿ ಅರಸರೊಡನೆ ಜಿನದೀಕ್ಷೆಯಂ ಪಡೆದು ಷೋಡಶಕಾರಣಭಾವನಾನಿಬನ್ಧ ತೀರ್ತ್ಥಕರನಾಮ ಮಹಾಪುಣ್ಯಕರ್ಮವಂ ಮಾಡಿದವನಾಗಿ ಸನ್ಯಾಸವಿಧಿಯಿಂದೆ ಶರೀರವಂ ತ್ಯಜಿಸಿ ಪ್ರಾಣತಕಲ್ಪದ ಆರಣವಿಮಾನದಲ್ಲಿ ಪ್ರಾಣತೇನ್ದ್ರನಾದನು.

ಬೞಿಕ ಜಂಬೂದ್ವೀಪ ಭರತಖಂಡದ ಕಾಕಂದಿ ಪುರಾಧಿಪತಿ ಇಕ್ಷ್ವಾಕುವಂಶ್ಯ ಕಾಶ್ಯಪ ಗೋತ್ರದ ಸುಗ್ರೀವರಾಜನೆಂಬುವನು. ಆತನ ದೇವಿ ಜಯರಾಮೆ. ಪ್ರಾಣತಕಲ್ಪದ ಪ್ರಾಣತೇನ್ದ್ರನೆನಿಸಿರ್ದ್ದ ಭಗವಂತನಾದ ದೇವನು ಇಪ್ಪತ್ತುಕಡಲ್ ಪರಿಮಾಣದ ಅಮರಸುಖವನ್ನನುಭವಿಸಿ ಸ್ವರ್ಗಾವತರಣಕಲ್ಯಾಣ ಷೋಡಶಸ್ವಪ್ನ ವದನಪ್ರವೇಶಿಗಜದರ್ಶನಪುರಸ್ಸರನಾಗಿ ಫಾಲ್ಗುಣ ಮಾಸ ಕೃಷ್ಣನವಮಿಯಂದು ಮೂಲನಕ್ಷತ್ರ ಪ್ರಭಾತಸಮಯದಲ್ಲಿ ಜಯರಾಮಾದೇವಿಯ ಗರ್ಭವಾಸವನ್ನು ಪಡೆದು ಒಂಭತ್ತುತಿಂಗಳು ಪರಿಪೂರ್ಣವಾದ ಬೞಿಕ್ಕೆ ಮಾರ್ಗಶೀರ್ಷಮಾಸದ ಪೂರ್ವಪಕ್ಷದ ಪ್ರಥಮಾತಿಥಿಯಲ್ಲಿ ಮೂಲನಕ್ಷತ್ರ ಚೈತ್ರಯೋಗದಂದು ತ್ರಿಜ್ಞಾನಧರನಾಗಿರುವ (ಮತಿ, ಶ್ರುತ, ಅವಧಿ=ತ್ರಿಜ್ಞಾನ) ಭಗವಂತನು (ಜಿನನು) ಗರ್ಭಾವತರಣವಂ ಮಾಡಿದನು.

---

[1] ಶ್ರೀ ಪುರಾಣವೆಂಬುದು ಮಣಿಪ್ರವಾಳ ಶೈಲಿಯಲ್ಲಿ ಬರೆದಿರುವ ತಮಿೞ್ ಭಾಷೆಯ ಗದ್ಯ ಗ್ರಂಥವು. ಇದರಲ್ಲಿ ತ್ರಿಷಷ್ಟಿಶಲಾಕಪುರುಷರ ಕಥೆಯು ಹೇಳಿದೆ. ಈ ಪರಿವರ್ತನದಲ್ಲಿ ವಾಕ್ಯವು ತಮಿೞಿನ ಶೈಲಿಯನ್ನೇ ಅನುಸರಿಸಿದೆ. [2] ಸದ್ದೃಷ್ಟಿ ಜ್ಞಾನಗರ್ಭಂ (ಎಂದಿರಬಹುದು)

ಆಪೊಬಿಕ್ತಿ ಚತುರ್ವಿಧಾಮರನಿಕಾಯಯುವೂ, ದೇವೇಂದ್ರ ಸಮುದಯುವೂ, ಬಂದು ಮಂದರಾಭಿಷೇಕ ಕಲ್ಯಾಣಾನಂತರದಲ್ಲಿ ಸುವಿಧಿಯೆಂಬ ಮಂಗಳನಾಮವನ್ನಿಟ್ಟು ಸ್ವಸ್ಥಾನಕ್ಕೆ ತೆರಳಿದುವು.

[1] ಚನ್ದ್ರಪ್ರಭಭಟ್ಟಾರಕರ ಧರ್ಮತೀರ್ಥ ಸಂತಾನಕಾಲವು ತೊಂಭತ್ತುಸಾವಿರ ಸಾಗರೋಪಮ ಕೋಟಿಯುಕ್ಕುಂ. ಅದಱಂತದೊಳ್ ಅಂತರ್ಭೂತ ಪರಮಾಯುಷ್ಯವುಳ್ಳವನಾಗಿ ಅವತರಿಸಿದ ಪುಷ್ಪದಂತ ಭಗವಂತನ ಸಂಪ್ಯಾನರ್ತಪುಷ್ಪವರ್ಣ ದಿವ್ಯಶರೀರದ ಉತ್ಸೇಧವು ನೂಱು ಬಿಲ್ಲ ಪ್ರಮಾಣವುಳ್ಳುದು. ಇವರ ಪರಮಾಯುಷ್ಯವು ಎರಡು ನೂಱುಸಾವಿರ ಪೂರ್ವವಕ್ಕುಂ. ಐವತ್ತುಸಾವಿರ ಪೂರ್ವವಾದ ಕುಮಾರಕಾಲವು ಕಳೆದು ರಾಜ್ಯಾಭಿಷೇಕಮೆಯ್ದಿ ಐವತ್ತುಸಾವಿರ ಪೂರ್ವವೂ, ಇಪ್ಪತ್ತೆಂಟು ಪೂರ್ವಾಂಗವೂ ಆದ ರಾಜ್ಯ ಕಾಲಾವಧಿಯಲ್ಲಿ ಉಲ್ಕಾಪತನ ದರ್ಶನದಿಂದ ಉತ್ಪನ್ನಸಂಸಾರವೈರಾಗ್ಯವುಳ್ಳವನೂ, ಲೋಕಾಂತಿಕದೇವರಿಂದೆ ಪ್ರತಿಬೋಧಿತನೂ ಆದ ಬಱಿಕ್ಕೆ ಸುಮತಿಯೆಂಬ ಮಗನಿಗೆ ರಾಜ್ಯಪದವನ್ನಿತ್ತು ಸುರಪತಿವಿಹಿತ ನಿಷ್ಕ್ರಮಣ ಕಲ್ಯಾಣಾನಂತರದಲ್ಲಿ ಸೂರ್ಯಪ್ರಭೆಯೆಂಬ ಶಿಬಿಕೆಯ ಮೇಲೇಱಿ ಪುಷ್ಪಕವನಕ್ಕೆ ಸಹಸ್ರನರಪತಿಗಳೊಡನೆ ಷಷ್ಠೋಪವಾಸ ಸಹಿತನಾಗಿ ಮಾರ್ಗಶೀರ್ಷಮಾಸ ಶುಕ್ಲಪಕ್ಷ ಪ್ರಥಮೆಯಂದು ಮೂಲನಕ್ಷತ್ರಾಪರಾಹ್ಣಕಾಲದಲ್ಲಿ ಜಿನದೀಕ್ಷೆಯುಂ ಪಡೆದು, ತದನನ್ತರಂ ಮನಃಪರ್ಯಯ ಜ್ಞಾನಧಾರಿಯಾಗಿ ಮಱುದಿವಸಂ ಶೈಲಪುರದ ಪುಷ್ಯಮಿತ್ರ ನರಪತಿಯ ಗೃಹದಲ್ಲಿ ಪಂಚಾಶ್ಚರ್ಯಕರಮಾದ ಪಾರಣೆಗೆಯ್ದು ಛದ್ಮಸ್ಥಕಾಲಮಾದ ನಾಲ್ಕು ಸಂವತ್ಸರಂಗಳಂ ಸ್ವದೀಕ್ಷಾವನದಲ್ಲಿ ನಾಗವೃಕ್ಷಮೂಲದಲ್ಲಿದ್ದು ಕೊಂಡು ಷಷ್ಠೋಪವಾಸಸಹಿತನಾಗಿ ಕಾರ್ತಿಕಮಾಸ ಶುಕ್ಲದ್ವಿತೀಯಾಪಕ್ಷದಲ್ಲಿ ಮೂಲನಕ್ಷತ್ರಾಪರಾಹ್ಣಕಾಲದಂದು, ಘಾತಿಕರ್ಮಕ್ಷಯಾನಂತರದಲ್ಲಿ ಸಂಪ್ರಾಪ್ತಾನಂತ ಚತುಷ್ಟಯನಾಗಿ ಆದನು. ಆಪೊಬಿಕ್ತಿ ದೇವದೇವೇಂದ್ರರ್ಕಳ್ ಬಂದು ಸಮವಸರಣಾದಿ ವಿಭೂತಿಸಹಿತಂ ಕೇವಲೋತ್ಪತ್ತಿ ಕಲ್ಯಾಣಪರರಾಗಿ ಸೇವಾತತ್ಪರರಾದರು.

ಸುವಿಧಿ ಭಗವಂತನಿಗೆ ವಿದರ್ಭರ್ ಮೊದಲಾದ ಗಣಧರರ್ ಎಂಭತ್ತೆಂಟುಮಂದಿಗಳ್. ಪೂರ್ವಧರರ್ ಸಾಸಿರದೈನೂರುಮಂದಿ, ಶಿಕ್ಷಕರ್ ನೂಱುಸಾವಿರದೈವತ್ತೈದುಸಾವಿರದೈನೂರ್ವರ್. ಅವಧಿಜ್ಞಾನಿಗಳ್ ಎಂಟುಸಾವಿರದ ನಾನೂರುಮಂದಿ. ಕೇವಲಿಗಳ್ ಎಂಟುಸಾವಿರಮಂದಿ, ವೈಕ್ರಿಯಿಕರ್ ಹದಿಮೂಱು ಸಾವಿರಮಂದಿ, ಮನಃಪರ್ಯಯ ಜ್ಞಾನಿಗಳ್ ಎಂಟುಸಾವಿರದೈನೂರ್ವರ್. ಮಹಾ ವಾದಿಗಳ್[2] ಸಾವಿರದಾಱುನೂಱುಮಂದಿ, ಆಗಲ್ (ಒಟ್ಟಾಗಿ) ತಪೋಧನರ್ ನೂಱು ತೊಂಭತ್ತೊಂಭತ್ತು ಸಾಸಿರ ದೈನೂಱೆಂಭತ್ತೆಂಟುಮಂದಿಗಳ್. [3] ಪೌಷ್ಟಿ ಮೊದಲಾದ ಆರ್ಯಾಂಗಳ್ಗೆಗಳ್[4] ಮುನ್ನೂಱುಸಾವಿರದೆಂಭತ್ತುಸಾವಿರಮಂದಿ. ಶ್ರಾವಕರ್ ಇನ್ನೂಱು ಸಾಸಿರ್ವರ್. ಶ್ರಾವಕಿಯರ್ಕಳ್ [1] ಐನೂಱು ಸಾಸಿರಮಂದಿ. ದೇವದೇವಿಗಳ್ ಅಸಂಖ್ಯಾತರ್. ತಿರ್ಯಗ್ಜಾತಿ ಸಂಖ್ಯಾತಂ. ಈ ದ್ವಾದಶಗಣ ಪರಿವೃತನಾದ ಭಗವಂತನು ಸರ್ವಧರ್ಮಕ್ಷೇತ್ರಂಗಳೆಲ್ಲೊ ವಿಹರಿಸಿ ಇಪ್ಪತ್ತೆಂಟು ಪೂರ್ವಾಂಗಗಳುಂ ನಾಲ್ಕು ಸಂವತ್ಸರಂಗಳಿಂದೆ

---

[1] ಚಂದ್ರಪ್ರಭ ಭಟ್ಟಾರಕನು ಎಂಟನೆಯ ತೀರ್ಥಕರನು. [2] ಆರುಸಾವಿರ (ಎಂದಿರಬೇಕು) [3] ಘೋಷೆ ಮೊದಲಾದರ್ಜಿಕೆಯರ್ಕಳ್ (ಎಂದಿರಬಹುದು.) [4] ನಾನೂರುಸಾವಿರ (ಎಂದಿರಬೇಕು)

ಕಮ್ಮಿಯಾದ ನೂಱುಸಾವಿರ ಪೂರ್ವಮುಂ ಆಗಿರುವ ಕೇವಲಿ ಕಾಲಾವಸಾನದಲ್ಲಿ ಸಮ್ಮೇದಶಿಖರದಲ್ಲಿ ಒಂದುತಿಂಗಳ್ ಕಾಲಂಬರಂ ಪ್ರತಿಮಾಯೋಗಧಾರಿಯಾಗಿ ನಿಂದಿರ್ದು ಯೋಗತ್ರಯನಿರೋಧಂಗೆಯ್ದು ಸಹಸ್ರ ಮುನಿಪತಿಗಳೊಡಗೂಡಿ ಭಾದ್ರಪದಮಾಸ ಶುಕ್ಲಾಷ್ಟಮೀ ಪಕ್ಷದಲ್ಲಿ ಮೂಲನಕ್ಷತ್ರಾಪರಾಹ್ಣ ಕಾಲದಲ್ಲಿ ಅಪವರ್ಗಪದವನ್ನು ಪಡೆದು ದಯೆಗೆಯ್ದಂ.

ಯೋಽಜಾಯತ ಕ್ಷಿತಿಭೃದತ್ರ ಮಹಾದಿಪದ್ಮಃ ।
ಪಶ್ಚಾದಭೂದ್ದಿವಿ ಚತುರ್ದಶಕಲ್ಪನಾಥಃ ॥
ಪ್ರಾಂತೇ ಬಭೂವ ಭರತೇ ಸುವಿಧಿರ್ನೃಪೇನ್ದ್ರಃ ।
ತೀರ್ಥೇಶ್ವರಸ್ಸ ನವಮಃ ಕುರುತಾಚ್ಛ್ರಿಯಂ ವಃ ॥

ಇತಿ
ತ್ರಿಷಷ್ಟಿ ಲಕ್ಷಣ ಮಹಾಪುರಾಣಸಂಗ್ರಹೇ
ಸುವಿಧಿ ತೀರ್ಥಕರಪುರಾಣಮಿದಂ
ಪರಿಸಮಾಪ್ತಂ

# ಪರಿಶಿಷ್ಟಂ ೬.



(ಮಾದರಿಗಾಗಿ—ಮೈಸೂರು ರಾಜಕೀಯಪುಸ್ತಕ ಭಂಡಾರದ ಕಾಗದದಪ್ರತಿಯ (ಗ. ಪ್ರತಿ) ಒಂದೆರಡು ವಾಕ್ಯಗಳನ್ನು ಕೊಟ್ಟಿದೆ.)

ಆಶ್ವಾ. ೭-ಪ. ೮೨. ವೃ ॥ ಎಂದು ಸಮಸ್ತಕಾರ್ಯ ಭರಮಂ ಪಮನಂ ಸುಮನಂ ಜಗಜ್ಜನಾ । ನಂದಕರಂ ಪ್ರಶಸ್ತಯಶನ ಸುಮನಮಂದಾರನಂ ದೀನ ಜನೋದ್ಧಾರನಂ ಭವ್ಯಕುಲರತ್ನನಂ ಸುಕೀರ್ತಿವಂತನಂ ಶಾಂತನಂ ರಿಪುವಂಶಾಬ ವೀಯಜ್ಞೇಶನಂ ವೈರಿಕುಲಪರ್ವತಂಗಳಿಗೆ ವಜ್ರಾಯುಧನಂ ಅರಿಮೇಘಮೆಂಬಲಗ ಜಂಝಾಮಾರುತನುಂ, ವೈರಿಗಳೆಂಬ ಸಾಗರಕೆ ಕುಂಭೋದ್ಭವನಂತೊಪ್ಪುವ ದಯಾ। ನಂದಕ ಶಸ್ತ್ರ ಭೂಷಿತವಿಶೇಷ ಕರಾಳಕರಾಗ್ರನಂ ನರೇಂದ್ರೇಂದುವನೆಯ್ದೆ ಕೇಳಿಸಿದಪಂ ಮಿಗೆ ನಾಪ್ಪ್ರಭುವಂಶ ಮೇರುವಂ.

ಆ-೮. ೩೮ ಪದ್ಯವಾದ ಬಳಿಕ ಇರುವ ಗದ್ಯ ವ ॥ ಈ ಚತುರ್ಬಲವಂ ವರ್ಣಿಪರೆನ್ನಿಂದಕೂಡದು, ಕೃತತ್ರೇತ ದ್ವಾಪರಯುಗದೊಳತಿರಥ ಮಹಾರಥ ಷೋಡಶಚಕ್ರವರ್ತಿಗಳ ಚತುರಂಗಬಲಕಿದಚ್ಚರಿಯೆನೆ ಕಣ್ಗೊಳಿಸಿತ್ತು ಮತಿ ಕಲಿಯುಗದೊಳೇ ನಾಚ್ಚರಿಯಂ.

ವ ॥ ಆಗಳಲ್ಲಿ.

,, — ೫೮ ನೆಯ ಪದ್ಯವಾದ ಬಳಿಕ ಇರುವ ಗದ್ಯ ವ ॥ ಇಂತು ಕೆಯ್ಗೆಯ್ಸಿದಾಗಳ್. ಜಿನಮತದೊಳವತರಿಸಿದ ಸುದತಿಯರವಯವ ಭಾಷಿಸವ ಮೋಡಿಯ ವಿವರವನೇನರುಹುವೆ ನವಯವ್ವನತುಳುಕಾಡುವ ಕಾಂತಿಯಭುವನದಮೋಹಿನಿಯಂ । ಸತಿನಾಸಿಕವೀಕ್ಷಿಸುತಲೀ ಸಂಪಗೆ ಗತಿಯರಿಯದೆ ಯಡುಸೇರಿತು ತರುವಿಗೆ ಮತಿದೋರದೆ ಲತೆಯಧರದ ರಂಗಿಗೆ ಪತಿಕರಿಸದು ಸತಿಮಲ್ಲಿಗೆಪಲ್ಲಿಗೆ ಕ್ಷಿತಿಯೊಳ್ ಗತಿಯೇನೆನುತ ಚಿಂತಿಸುತಿರ್ಪೊಲ್. ಗಳದ ಭಾವವಕಂಡು ಮರುಗಿ ಮಯೂರವು ಹೊಳೆವಬಾಹುಲತೆಗಳುಕಿಭವೃಂದವು ಘಳಘಳಿಪೆದೆನೋಡಿ ಕೋಕಕೆ ಶೋಕವು, ಬಳಲ್ವ ನಡುವಿನ ವೈಕರಿಯಾಭಾಸುಮತಿಯುಕರಕಂಕಣ ನುಣ್ಗುರುಳ್‌ಕಾಂತಿಯ ಮರಸುವೆನೆನುತಾ ಕೊರಳಿನಮೌಕ್ತಿಯ ಸರವಲ್ಲದೆ ಸರ್ವರ್ಣದ ಮಾಲೆಯ ಕರನಪೂವು ಬಾಹುಪಿಯಾಸತಿಯಾ । ಕದಳಿಗಳನು ಧಿಕ್ಕರಿಸುವ ತೊಡೆಗಳಪದವೊಲ್ದುದು ಮೃದು ಕೆಂದಾವರೆಗಳ, ಸುದತಿಯತನುಕಾಂತ್ಯರುಣಚ್ಛವಿಗಳ

ಸದರುಸುರರಪ್ಸರಿಯರ ಕಳೆಗಳ ವದನಕಂಡು ವಿರಹಿಗಳೆದೆಗೆಟ್ಟರವೊ ವಿವಳಭಾವಂನೋಡೆ ॥ ಜಡಭಂಗರ ನಿಟ್ಟಬಲೆಯು ಪಾಲವಲೊಡಬಿಡುವೋಲ್ ಬಟ್ಟಡುತಲಿ ನಯನಕೆ ಕಡೆವಿಡಿದಿಟ್ಟಹ ಕಾಡಿಗೆಭಾವವ ಮಡದಿಯು ಮುಗುಳ್ನಗೆ ಮಿಂಚಿಗೆ ಸಮನವು ಯೇನೆಂಬೆ ಯುವತಿಯ ಸಡಗರವುಂ ॥

ಆ-೯-ಪದ್ಯ ೯೭ ಆದಬಳಿಕ. ವ॥ ಅಲ್ಲಿ=ವ॥ ಫಲಪುಷ್ಪಂಗಳ ಕ್ಷೀರಶರ್ಕರೆ ಘೃತಾಗಂಧ ಜವಾಜಿಯು ತಾಂಬೂಲ ತಟ್ಟೆಗಳಿಂದಲಂಕರಿಸಿದ ಶಯ್ಯಾಗೃಹಕಂ ವನಿತಾಮಣಿ ಬಂದಳಾಗ ಶಯನದ ಸೆಜ್ಜೆಗಂ ಸೊಬಗಿಂದಂ ॥

# ಶುದ್ಧಿಪತ್ರಿಕೆ.

| ಪುಟ | ಪದ್ಯ | ಅಶುದ್ಧಂ | ಶುದ್ಧಂ |
|---|---|---|---|
| ೫ | ೩೧ | ಯೋಗೀಂದ್ರ | ಯೋಗೀಂದು (ಎಂದಿರಬೇಕು) |
| ೭ | ೪೫ | ಕವಿಯೂಳ್ | ಕವಿಯೊಳ್ |
| ,, | ಟಿಪ್ಪಣಿಯಲ್ಲಿ | ದಂತಿದ | ದಂತಿವ |
| ೧೦ | ೬೨ | ಪೇಳ್ದವಂ | ಪೇಳ್ವವಂ |
| ೧೧ | ೭೧ | ಪಜ್ತಿಯಿಂ | ಪಱ್ತಿಯಿಂ |
| ೧೨ | ೭೮ | ದೇಜ್ಗ | ದೇಱ್ಗ |
| ೧೪ | ೯೦ | ಬಳ್ಳವಳ್ಳಿ | ಬಳ್ಳಿವಳ್ಳಿ |
| ೨೨ | ೩೯(ಗದ್ಯ) | ಬಂಡಿಳಿಸಿ | ಬಂಡೆಳಿಸಿ |
| ,, | ೪೦ | ವೆಪ್ಪಿರ್ | ವೆಪ್ಪು |
| ೨೩ | ೪೨ | ಮರಸುತ್ತಿ | ಮಱಿಸುತ್ತಿ |
| ,, | ೪೩ (ರಗ) | ಯೊಳ್ಗುಂಡುಗುಱು | ಯೊಳೆಟಂಗುಱು |
| ೨೪ | ೪೬ | ದೆಳೆಸೀರ್ಗ | ದೆಳಸೀರ್ಗ |
| ೨೫ | ೪೯ | ಶಾತೆ | ಸಾತೆ |
| ,, | ೫೧ | ಘುಟಿಕಾ | ಘುಟಿಕಾ |
| ೨೭ | ೬೦ (ಗದ್ಯ) | ನಿಗಳೆ | ನಿಗಳಿ |
| ,, | ೬೧ | ಕಿಟೀಪು | ಕಿಱೀಪು |
| ,, | ೬೪ | ನುಗುಟ್ವು | ನುಗುಳ್ವು |
| ೨೮ | ೭೦ | ದೆಳೆವಾಱಿ | ದೆಳವಾಱಿ |
| ,, | ೭೧ | ತಗುೞ್ವ | ತಗುಳ್ವ |
| ,, | ೭೩ | ತ್ರಿಲತಾ | ತ್ರಿಳತಾ |
| ೩೦ | ೮೨ | ಗೆಂಟಱು | ಗೆಂಟಱು |
| ೩೨ | ೯೦ | ಯಿಪ್ಪುದು | ಸಿಪ್ಪರ್ದು |
| ,, | ೯೧ | ಜಲಧಿ | ಜಲಧಿಯೊಳಿರ್ಪ |
| ೩೫ | ೭ | ಮೊದಱಿ | ಮೊದವೆ |
| ೩೭ | ೨೧ | ಕಾಯ್ದು | ಕಾದು |
| ೩೯ | ೩೨ | ಪೊಱಿವಾಱಿಂ | ಪೊಱವಾಱಿಂ |
| ೪೦ | ೪೫ | ಬಾಯ್ದೆಱಿ | ಬಾಯ್ಪರೆ |
| ,, | ೪೨ | ಲಲನೆ | ಲಳನೆ |
| ೪೧ | ೫೦ | ಕಣ್ಣೆಕೆಯೊ | ಕಣ್ಣೀಕೆಯೊ |
| ೪೩ | ೫೯(ಗದ್ಯ) | ಸರಸಿಹ | ಸರಸಿರುಹ |
| ,, | ೬೨ | ವಳಿ | ವಲಿ |

| | | | |
|---|---|---|---|
| ೪೪ | ೬೫ | ತ್ತೆಂದುದ | ತ್ತೆಂದದ |
| ,, | ೬೭ | ತೆಱದಿಂ | ತೆಱನಂ |
| ,, | ೬೮ | ಳಿೞಂದ | ಳಿೞಿದ |
| ೪೬ | ೨೬(ಗದ್ಯ) | ತೊಱೆದ | ತೊರೆದ |
| ,, | ೭೬ | ತೋಱಿತ್ತುಂ | ತೋಱುತ್ತುಂ |
| ೪೭ | ೮೨(ಗದ್ಯ) | ಗಱಿದಳಲ | ಗೞಿದೞಲ |
| ೪೮ | ೮೯ | ಪೆರ್ಚಿಸಿದ | ಪಚ್ಚೆಸಿದ |
| ೪೯ | ೯೦ | ನುೞಂಸಿ | ನುೞಿಸಿ |
| ೫೦ | ೧೦೦(ಗ) | ನಸುಗುತ್ತುಂ | ನಸುನಗುತ್ತುಂ |
| ೫೨ | ೧೦೯ | ಅಳಿಸೆ | ಅೞಿಸೆ |
| ,, | ೧೦೯ | ವ್ಯೃತವೆನೆ | ವ್ಯೃತಮನೆ |
| ,, | ೧೧೩ | ಪೊಷಿತೆ | ಪೋಷಿತ |
| ೫೩ | ೧೧೪(ಗ) | ನೆಗಱ್ತ್ತಿಗಂ | ನೆಗೞ್ತ್ತಿಗಂ |
| ,, | ೧೧೮ | ಮಲಯು | ಮಳಯು |
| ೫೪ | ೧೧೯ | ಡೇಳ್ವ | ಡೇೞ್ವ |
| ೫೫ | ೧೨೬ | ಯಮನೀಳ್ಕ್ಕಳಿ | ಯಮನೀೞ್ಕ್ಕಳಿ |
| ,, | ೧೨೭ | ವರ್ಮಧರಾ | ವರ್ಮನಿಳಾ? |
| ೫೬ | ೧೨೯(ಗ) | ನೆೞೆಯದೆ | ನೆಱೆಯದೆ |
| ,, | ,, | ತಲೆವೊರೆ | ತಲೆವೊಱೆ |
| ೫೭ | ೧೩೧(ಗ) | ನೇಕಥನ | ನೇಕುಪ್ಯಥನ? |
| ೫೯ | ೧೧ | ಜನಗುೞಿಕೆ | ಜನಘುಟಿಕೆ |
| ೬೨ | ೨೫ | ತೋಱ | ತೋರ |
| ೬೩ | ೩೨ | ಕೆದರಿ | ಕೆದಱಿ |
| ೬೪ | ೩೮(ಗ) | ಕಣ್ಣಾಱೆ | ಕಣ್ಣಾರೆ |
| ೬೮ | ೬೧(ಗ) | ರೋಧೋ | ರೋದೋ |
| ೬೯ | ೬೬ | ನೀೞ್ಪಂತೆ | ನೀಳ್ದಂತೆ |
| ೭೦ | ೭೦(ಗ) | ಸಮಗ್ರತ್ವಾ | ಸಮಗ್ರಸತ್ವಾ |
| ,, | ೭೨ | ಪುಱಕಂ | ಪುಳಕಂ |
| ೭೧ | ೭೫ | ಕಣ್ಮರಿಂ | ಕಣ್ಮಲರಿಂ |
| ,, | ,, | ಪುಱಕ | ಪುಳಕ |
| ,, | ೭೭ | ಗಳೆವುತ್ತಿ | ಗಳೆಯುತ್ತಿ |
| ೭೫ | ೯೪ | ನೀೞ್ದ | ನಿಳ್ದ |
| ೭೭ | ೮ | ಕರ್ಮಡಿಗಿತ್ತು | ಕರ್ಮಡುಗಿತ್ತು |
| ೮೦ | ೨೨ | ವಡಿವೂಡು | ವಡಿಯೂಡು |

| | | | |
|---|---|---|---|
| ,, | ೨೩ | ನುಗುಳ್ವ | ನುಗುೞ್ದ |
| ೮೧ | ೨೫ | ಜಲರು | ಜಳರು |
| ೮೨ | ೩೨ | ವರ್ಣಲ | ವರ್ಣಳ |
| ,, | ೩೪೯ | ಸಂಭ್ರ | ಸಸಂಭ್ರ |
| ೮೪ | ೪೬ | ತೆವರುಂ | ತೆವಱುಂ |
| ೮೫ | ೪೭(ಗ) | ಉತ್ಖಾಖಱ್ | ಉತ್ಖಾತಖಟ್ಗ |
| ,, | ೫೦ | ನೀಱ್ದಿನ | ನೀಳ್ದಿನ |
| ೮೬ | ೫೧ | ವಿಶ್ರಾಂತ | ವಿಕ್ರಾಂತ |
| ೯೦ | ೭೪ | ಕಂಡಱ್ಕ | ಕಂಡಳ್ಕ |
| ,, | ೭೭ | ಯುಳ್ತ | ಯುೞ್ತ |
| ೯೧ | ೮೪ | ವೆಱಸು | ವೆರಸು |
| ,, | ,, | ವಳಿ | ವಲಿ |
| ೯೨ | ೯೦ | ನೀಱ್ದ | ನೀಳ್ದ |
| ೯೩ | ೯೪ | ಗೋಡೆದೆ | ಗೋಡದೆ |
| ೯೬ | ೧೦೮ | ತೞಿಪಿ | ತಳಿಸಿ |
| ೯೮ | ೩ | ದಿಂ। ಮುನ್ನುಱಿ | ದಿಂಮು। ನ್ನುಱಿ |
| ೯೯ | ೮ | ನೀೞ್ದರೆಗೊಂ | ನೀಳ್ದಱಿ |
| ೧೦೦ | ೧೩ | ಘುಳಿಲ | ಘುೞಿಲನೆ |
| ೧೦೧ | ೨೩ | ತಳೆ...ವಾಳ್ವೆಱಿ | ತೞೆ...ವಾಳ್ವೇಱಿ |
| ೧೦೨ | ೨೫ | ಧಾಳಿಟ್ಟು | ದಾೞಿಟ್ಟು |
| ೧೦೩ | ೩೧ | ಇದೆರೆ | ಇದಿರೆ |
| ,, | ೩೪ | ಪೇಱ್ದ | ಪೇೞ್ದ |
| ೧೦೫ | ೪೧ | ಮಿನುಗುವ | ಮಿಸುಗುವ |
| ೧೦೮ | ೫ | ಬಳಿ | ಬೞಿ |
| ೧೦೯ | ೮ | ದಱ್ಕರಿಂ | ದೞ್ಕಱಿಂ |
| ,, | ೧೧ | ನೆೞಸಲ್ಕೆ | ನೆಳಸಲ್ಕೆ |
| ೧೧೦ | ೧೪ | ವಶಸಲ್ಲದೆ | ವಶನಲ್ಲದೆ |
| ,, | ೧೯ | ಗಲ | ಗಳ |
| ,, | ,, | ಲಲಿತ | ಲಳಿತ |
| ೧೧೨ | ೩೦ | ಬಾಯ್ದಱಿ | ಬಾಯ್ದರೆ |
| ,, | ,, | ನ್ಮೀಲಿಸೆ | ನ್ಮೀಳಿಸೆ |
| ,, | ,, | ಪಾಲನ | ಪಾಳನ |
| ೧೧೫ | ೪೭ | ಬನಿತೆಂ | ಬನಿತೇಂ |
| ೧೧೬ | ೫೪ | ಮಿಳಿವುದು | ಮಿೞಿವುದು |

| | | | |
|---|---|---|---|
| ೧೧೯ | ೬೭ | ಸಾರಿ | ಸಾಱಿ |
| ,, | ೬೯(ಗದ್ಯ) | ಪಪ್ಪಳ್ವಱಿಯು | ಪಪ್ಪೞ್ವೞಿಯು |
| ೧೨೦ | ೬೯ | ಸಿದುಂಕೆ | ಸಿಡುಂಕೆ |
| ,, | ೭೦ | ಬೀಳ್ವಳ | ಬೀೞ್ವೞ |
| ,, | ೭೩ | ಮೊಬ್ಬರಿ | ಮೊಬ್ಬೞಿ |
| ೧೨೧ | ೭೮ | ಕಱಲ್ಚಿ | ಕಱಲ್ಚಿ |
| ೧೨೩ | ೪ | ನೆನಗನೆ ಮುಳ್ಗಿಳಲಾ | ನೆನಗ ಕಿವುಱಿಗ್ಗೆಳಲಾ |
| ,, | ೩ | ಚಳು | ಚಲು |
| | ,, | ಕಲುಂಬು | ಕಿಲುಂಬು |
| ೧೨೪ | ೭ | ಪೊಗರೇಱಿ | ಪೊಗರೇಱಿ |
| ೧೨೫ | ೧೩ | ಗಫಟಿನ | ಗಪಟನ |
| ,, | ೧೫ | ಪಿಳಸಿ | ಪಿಲಸಿ |
| ,, | ,, | ಗ್ಗಳಿಪ | ಗ್ಗಲಿಪ |
| ೧೨೬ | ೧೯(ಗ) | ದೆಱಬ್ಬ್ | ದೆಱಬ್ಬ |
| ,, | ,, | ಬಳಿಕ್ಕೆ | ಬಱಿಕ್ಕೆ |
| ,, | ,, | ಪುಗಿಡಿ | ಪುಡುಗಿ? |
| ,, | ೨೦ | ಪಳಮುಯ್ಯ | ಪೞಿಮುಯ್ಯ |
| ೧೨೭ | ೨೬ | ಲಲಿತಾ | ಲಳಿತಾ |
| ೧೨೮ | ೨೮(ಗ) | ಗುಱನದ | ಗುಱಿದ |
| ೧೨೯ | ೩೬ | ಕಳಲ್ಚಿ | ಕೞಲ್ಚಿ |
| ,, | ,, | ಗಳ್ಗಿತು | ಗಱ್ಗಿತು |
| ೧೩೦ | ೪೧ | ಪಳಿಯು | ಪೞಿಯು |
| ,, | ,, | ತನ್ಣಳಲಂ | ತಣ್ಣೞಲಂ |
| ,, | ೪೪ | ಪರಿಗಯು | ಪಱಿಗಳ? |
| ,, | ,, | ಕ್ಕಱಿಯುವೆ | ಕ್ಕಱಿಯುದೆ |
| ೧೩೧ | ೪೬(ಗ) | ಸೂರೆ | ಸೂಱೆ |
| ,, | ೪೭(ಗ) | ಚೂನ್ನದ | ಜೂನ್ನದ |
| ೧೩೨ | ೪೮ | ಕಱುವಾಡೆ | ಕರುವಾಡ |
| ,, | ೫೧ | ಗಱ್ಕಿ | ಗಳ್ಕಿ |
| ೧೩೪ | ೫೯ | ನೀರೇಱಿದ | ನೀಱೀಱಿದ |
| ,, | ೫೯(ಗ) | ಳಿಸಿರಿ | ಳಿರಿಸಿ |
| ೧೩೫ | ೬೯ | ಬೆಳಲಿಗೆ | ಬಳಲಿಗೆ |
| ೧೩೬ | ೭೧(ಗ) | ಬೀಯುದ | ಬಿಯುದ |
| ,, | ೭೨ | ಕಳಲ್ಚಿ | ಕೞಲ್ಚಿ |

| | | | |
|---|---|---|---|
| ,, | ೭೫ | ನುಗುಳ್ದ | ನುಗುೞ್ದಿ |
| ,, | ಟಿಪ್ಪಣಿಯಲ್ಲಿ | ಪ್ರಾಸಕ್ಷರವು | ಪ್ರಾಸಾಕ್ಷರವು |
| ೧೩೮ | ೮೭ | ಎಳೆಮಾವಿ | ಎಳಮಾವಿ |
| ೧೪೨ | ೧೧೨ | ಸನ[illegible]ಂ[illegible] | ಸೆನಲಂಜಿ? |
| ,, | ೧೧೦ | ಜಳನ | ಜಲನ |
| | ,, | ತೊಳಗಿ | ತೊಲಗಿ |
| | ,, | ಮಂಷಳ | ಮಂಕೆಲ |
| ೧೪೩ | ೧೧೪ | ರಿವುಕಿತ್ತು ಕೊದಳ್ | ಬಿವುಕೆತ್ತು ತೊದಳ್ |
| ,, | ೧೧೮ | ಲ್ಪೊರಗ | ಲ್ಪೊಱಗ |
| ೧೪೬ | ೭ | ಲರಿಯು | ಲಱಿಯು |
| ೧೪೭ | ೯(ಗ) | ಯೇಕಾದಶಾಂ | ಏಕಾದಶಾಂ |
| ,, | ೧೨ | ತ್ರ್ಯೋದ್ಯ ತಿ | ತ್ರ್ಯೋದ್ವಾತ್ರಿ |
| ೧೪೯ | ೨೧(ಗ) | ಪುಱಕಿಸವ | ಪುಳಕಿಸವ |
| ,, | ೨೪ | [illegible] | [illegible] |
| ೧೫೦ | ೨[illegible] | ಗಳ್ಳ್ಯಾ[illegible] | ಗಟ್ಟ್ಯಾ[illegible] |
| ೧೫೧ | ೩[illegible] | [illegible]ನೆನ್ನ | ಸ್ರ[illegible]ಮನ್ನ |
| ೧೫೩ | ೪೨ | [illegible]ನಗಿಸಳಿಕೆಯ್ಯಂ | [illegible] ನವಱಿಕೆಯ್ಯಂ |
| ,, | ೪೪ | ನೀರೆ | ನೀಱೆ |
| ೧೫೭ | ೬೦(ರಗ) | ನಿಮಿರೆ | ನಿಮಿಱೆ |
| ೧೫೮ | ೬೧ | ಚೆನ್ನಪೂ | ಚೆನ್ನಪೊ |
| ,, | ೬೨ | ಆರಮನೆ | ಅರಮನೆ |
| ೧೫೯ | ೬೯ | ಎಳೆಮಿಂಚು | ಎಳಮಿಂಚು |
| ೧೬೯ | ೫ | ಲೇನೆಸೆ | ಲಂದೆಸೆ |
| ೧೭೧ | ೧೫ | ಡಿಱಿದು | ದಿಱಿದು |
| ,, | ೧೬ | ದಟ್ಟಿಱಿ | ದಟ್ಟಿಱಿ |
| ೧೭೫ | ೪೦ | ಎಡೆವಕ್ಕ | ಎಡವಕ್ಕ |
| ೧೭೮ | ೫೦ | ಮಾಱ್ಪನಿ | ಮಾಱ್ಪನಿ |
| ,, | ೫೩ | ಕೆದರು | ಕೆದಱು |
| ೧೭೯ | (ಟಿ) | ನಾರ್ಥಿಕ | ನಾರ್ಥಕ |
| ೧೯೨ | ೪೫ | ಮಳೆಯು | ಮಲಯು |
| ,, | ,, | ಳಳೆವಂಗ | ಳಲವಂಗ |
| ೨೧೯ | ೧೨ | ಕದರೆಸಿಸಿ | ಕರರೆಸಿಸಿ |
| ,, | ೧೫ | ಕೀರ್ತಿವರ | ಕೀರ್ತಿಧರ? |
| ೨೨೧ | ೨೪ | ಪ್ರಕಾರ | ಪ್ರಕರ |

| | | | |
|---|---|---|---|
| ೨೨೧ | ೨೭ | ಯೊಳ್ತೆಂಬು | ಯೊಳೆಂಬು |
| ೨೨೨ | ೨೮ | ಸೊವರಿರೆ | ಸೊಡರಿರೆ |
| ೨೨೩ | ೪೧ | ಪುಟ್ಟದ | ಪುಷ್ಟದ |
| ೨೨೫ | ೪೯ | ಪೇಸುವತಂಕರಂ? | ಪೇಸನದೇಂಕರಂ? |
| ೨೨೭ | ೬೨ | ಲೋಕಾಂಕಿತ | ಲೋಕಾಂತಿಕ |
| ,, | ೬೭ | ಮಿಂದುಳಿಯು | ಮಿಂದುೞಿಯು |
| ೨೩೨ | ೯೧ | ಮರಳ್ವ | ಮಱುಳ್ವ? |
| ,, | ೯೨ | ಏನೆ | ಎನೆ |
| ೨೩೪ | ೧೦೩ | ಇದೆರೆ | ಇದಿರೆ |
| ೨೪೦ | ೧೬(ಗ) | ವಿಧರಿದ್ಧಿ | ವಿಧಖುದ್ಧಿ |
| ೨೪೧ | ೨೦ | ಗಿಪೆಗಂ | ಗಿಡಿಗಂ |
| ೨೪೨ | ೨೯(ಗ) | ಶಂಖವಿಟ್ಟ | ಕಿಟ್ಟವಿಟ್ಟ? |
| ,, | ,, | ನಂದಕ್ಕೆ | ನಂದನಕ್ಕೆ |

## ಪರಿಶಿಷ್ಟ ೧

| | | | |
|---|---|---|---|
| ೨೪೯ | ೧ | ಯೆನಿಸಿ ..ಸ್ಸೈ | ಯೆನಿಸಿದ...ನೇಂ? |

## ಪರಿಶಿಷ್ಟ ೪

| | | | |
|---|---|---|---|
| ೨೭೧ | ೧ | ಮೋದಯೋತ್ಕಂಪಿ | ಮೋತ್ಕಂಪಿ |
| ,, | (ಗ) ಪಂ ೩ | ಮೊದತ್ತ | ಧನದತ್ತ |
| ,, | ,, ಪಂ ೬ | ವಿರಿಶಂತಿ | ವಿಂಶತಿ |
| ೨೭೨ | ,, ಪಂ ೨೦ | ವುಷ್ಪದಂ | ಪುಷ್ಪದಂ |

THE MADRAS PUBLISHING HOUSE LTD, MADRAS—1933